ಂಧೀ ಗ್ರಂಥಮಾಲೆ - ೧೫

# ಪತ್ರಗುಚ್ಛ

( ೨ )



ಮೋ. ಕ. ಗಾಂಧೀ



ಗಾಂಧೀ ಸ್ಮಾರಕ ನಿಧಿ

ಕರ್ನಾಟಕ ಶಾಖೆ

೧೯೬೧

ಪ್ರಕಾಶಕರು :
ಗಾಂಧೀ ಸ್ಮಾರಕ ನಿಧಿಯ ಕರ್ನಾಟಕ ಶಾಖೆಯ ಪರವಾಗಿ,
ಎಂ. ಯಾಮುನಾಚಾರ್ಯ, ಪ್ರಧಾನ ಸಂಪಾದಕರು,
ಗಾಂಧೀ ಗ್ರಂಥಮಾಲೆಯ ಸಂಪಾದಕ ಮಂಡಲಿ,
೧೬೨, ರಮಾವಿಲಾಸ ರಸ್ತೆ, ಮೈಸೂರು – ೧.

(ನವಜೀವನ ಟ್ರಸ್ಟ್, ಅಹಮದಾಬಾದ್-೧೪, ಇವರ ಅನುಮತಿಯ ಕೃಪೆಯಿಂದ.)

ಬೆಲೆ :
ಸಾಧಾರಣ ಪ್ರತಿ : ರೂ. ೨–೨೫

ಮುದ್ರಕರು :
ಉಷಾ ಪ್ರೆಸ್,
ಮೈಸೂರು.

**Works of Gandhiji in Kannada - 15**

# PATRAGUCHHA

[BUNCH OF LETTERS]

(3)



**M. K. GANDHI**



GANDHI SMARAK NIDHI

KARNATAKA SHAKHA

**1961**

*Price :*

**Ordy. Edn.: Rs. 2-25**

## PUBLISHER'S NOTE

This volume is the third in the Bunch of Letters series, the first two volumes of which are already published. The letters comprised in this volume, besides other miscellaneous ones, include Gandhiji's sweet letters to the Asram children in which Gandhiji shares the divine innocence of these children and reveals his own child-like heart. Another important collection of letters here is that which he wrote to Mira, his English disciple and Esther Faering, a Danish young woman who had dedicated herself under Gandhiji's influence to the education of girls in the Sabarmati Asram. He called the latter 'My Dear Child' in all his letters to her indicating the parental affection with which he treated her. The volume ends with some of the intimate letters Bapuji wrote to his devoted life-partner 'Ba' which are very revealing of the rare type of affectionate relationship which existed between Bapu and Ba.

The translation into Kannada of the letters of Bapuji to Ba is done by Sri Siddavanahalli Krishna Sarma and the rest are done by Sri G. V. Narayan Murti, Assistant Editor, Works of Gandhiji in Kannada.

162, Ramavilas Road
MYSORE - I

M. Yamunacharya
*Chief Editor*
Works of Gandhiji in Kannada

---

*Published by the Chief Editor, Works of Gandhiji in Kannada, 162, Ramavilas Road, Mysore, for Gandhi Smarak Nidhi, Karnataka Shakha.*

# ಕನ್ನಡದಲ್ಲಿ ಗಾಂಧೀ ಗ್ರಂಥಗಳು

ವಿಶ್ವದ ಎಲ್ಲ ಭಾಷೆಗಳಲ್ಲಿಯೂ ಗಾಂಧೀಜೀಯವರ ವಿಚಾರಗಳ ಪ್ರಚಾರ ಮಾಡುವುದು ಗಾಂಧೀ ಸ್ಮಾರಕ ನಿಧಿಯ ಮುಖ್ಯ ಉದ್ದೇಶಗಳಲ್ಲಿ ಒಂದು. ಕರ್ನಾಟಕಕ್ಕೆ ಹಾಗೂ ಕನ್ನಡಿಗರಿಗೆ ಅತೀವ ಮಹತ್ವದ ಗಾಂಧೀ ವಿಚಾರಗಳ ಪರಿಚಯ ಮಾಡಿಕೊಡುವುದು ಈಗ ಕೈಗೊಂಡ ಈ ಯೋಜನೆಯ ಗುರಿಯಾಗಿದೆ.

ಕರ್ನಾಟಕದ ಹಲವಾರು ಸಾಹಿತಿಗಳು, ಲೇಖಕರು, ಗಾಂಧೀಜೀ ಯವರ ಬರಹಗಳಲ್ಲಿ ಕೆಲವನ್ನು ಆಗಲೇ ಅನುವಾದಿಸಿ ಪ್ರಕಟಿಸಿದ್ದಾರೆ. ಸಾಧ್ಯವಾದಷ್ಟು ಈಗಲೇ ಪ್ರಕಟವಾಗಿರುವ ಅನುವಾದಗಳನ್ನು ಆವಶ್ಯಕ ವಿದ್ದಲ್ಲಿ ಪರಿಷ್ಕರಿಸಿ ಅವುಗಳನ್ನು ಈ ಗಾಂಧೀ ಗ್ರಂಥಮಾಲೆಯಲ್ಲಿ ಪೋಣಿ ಸುವ ಪ್ರಯತ್ನ ನಡೆದಿದೆ. ಗಾಂಧೀಜೀಯವರ ಮುಖ್ಯ ಹಾಗೂ ವಿವಿಧ ವಿಚಾರಗಳ ಪರಿಚಯವನ್ನು ಮಾಡಿಕೊಡಲು ಸುಮಾರು ಇಪ್ಪತ್ತು ಸಂಪುಟಗಳು ಸಿದ್ಧವಾಗುತ್ತಲಿವೆ.

ಗಾಂಧೀಜೀಯವರ ಎಲ್ಲ ಬರಹಗಳನ್ನು ಸಂಪೂರ್ಣವಾಗಿ ಸಂಗ್ರಹಿಸಿ ಅನುವಾದಿಸುವುದು ನಮ್ಮ ಉದ್ದೇಶವಲ್ಲ. ಭಾರತ ಸರಕಾರ ಆ ಕಾರ್ಯ ವನ್ನು ಕೈಗೊಂಡಿದೆ. ಆದರೆ ಈ ನಮ್ಮ ಯೋಜನೆಯ ಉದ್ದೇಶ ಗಾಂಧೀಜೀಯವರ ಪ್ರಧಾನವಾದ ಅಭಿಪ್ರಾಯಗಳನ್ನು ಸಮಂಜಸವಾದ ರೀತಿಯಲ್ಲಿ ಕೂಡಿಸಿ ಮುಖ್ಯವಾದ ಶೀರ್ಷಿಕೆಗಳ ಅಡಿಯಲ್ಲಿ ಅವನ್ನು ಅಳವಡಿಸಿ ಕನ್ನಡಿಸಿ ಪ್ರಕಟಮಾಡುವುದಾಗಿದೆ. ಗಾಂಧೀಜೀ ಪುಸ್ತಕರೂಪ ವಾಗಿಯೇ ಬರೆದ ಗ್ರಂಥಗಳನ್ನು ಅವು ಇರುವಂತೆ ಅಥವಾ ಆವಶ್ಯಕ ವಾದರೆ ಸಂಗ್ರಹಿಸಿ ಅನುವಾದ ಮಾಡಲಾಗುತ್ತದೆ. ಮತ್ತೆ ಕೆಲವು ಗ್ರಂಥ ಗಳು ಗಾಂಧೀಜೀ ಅವರ ಅಭಿಪ್ರಾಯಗಳನ್ನು 'ಯಂಗ್ ಇಂಡಿಯಾ' ಮತ್ತು 'ಹರಿಜನ' ಪತ್ರಿಕೆಗಳಿಂದ ಆಯ್ದ ಲೇಖನಗಳ ಸಂಕಲನಗಳಾಗಿವೆ. ಸಂಕಲನವು ಸ್ವಲ್ಪ ನಿಧಾನದ ಕೆಲಸ; ಕಷ್ಟವಾದ ಕೆಲಸವೂ ಹೌದು. ಎಷ್ಟು ಪ್ರಯತ್ನ ಮಾಡಿದರೂ ವಿಷಯಪ್ರತಿಪಾದನೆಯ ಪುನರಾವರ್ತನೆ

ಯನ್ನು ತಪ್ಪಿಸುವುದು ಕಷ್ಟ. ನಮ್ಮ ಅನುವಾದಕರು ಕರ್ನಾಟಕದ ಸುಽತ ಸಾಹಿತಿಗಳು ಮತ್ತು ಗಾಂಧೀ ಮಾರ್ಗದಲ್ಲಿ ಶ್ರದ್ಧೆಯುಳ್ಳವರು. ಆದಷ್ಟು ಸಮರ್ಪಕವಾಗಿ ಭಾಷಾಂತರ ಕೆಲಸವನ್ನು ಮಾಡುತ್ತಿದ್ದಾರೆ. ಗಾಂಧೀಜೀಯವರ ಸರಳ ಮತ್ತು ರಸವತ್ತಾದ ಬರಹಗಳನ್ನು ಭಾಷಾಂತರಿಸುವುದು ಎಷ್ಟು ಕಷ್ಟವೆಂಬುದನ್ನು ಹೇಳಬೇಕಾಗಿಲ್ಲ. ಆದರೂ ಈ ಅನುವಾದಕರು ಗಾಂಧೀಜೀಯವರ ಮನೋಗತವನ್ನು ಅಽತವರು ಆಗಿರುವುದರಿಂದ ಈ ಅನುವಾದಗಳು ಜನಪ್ರಿಯವಾಗಬಲ್ಲವೆಂದು ಆಶಿಸಲಾಗಿದೆ.

ಈ ಸಂಪಾದಕ ಸಮಿತಿಯಿಂದ ಪ್ರಕಟಿಸಲ್ಪಡುವ ಗ್ರಂಥಗಳು ಸುಲಭ ಬೆಲೆಗೆ ಪಾಠಕರ ಕೈಸೇರಬೇಕೆಂಬ ಉದ್ದೇಶದಿಂದ ಸಾಮಾನ್ಯ ಪ್ರತಿಯ ಬೆಲೆ ಕಡಮೆ ಇಡಲಾಗಿದೆ. ಇದರೊಡನೆ ಉತ್ತಮ ಪ್ರತಿಯೂ ಸಹ ಮಾರಾಟಕ್ಕೆ ಇರುವುದಲ್ಲದೆ ಅದರ ಬೆಲೆಯೂ ಕೂಡ ಬಹಳ ಹೆಚ್ಚು ಇಡಲಾಗಿಲ್ಲ.

ಈ ಗ್ರಂಥಮಾಲೆ ಕನ್ನಡನಾಡಿನ ಜನಕ್ಕೆ ಗಾಂಧೀಸಾಹಿತ್ಯವನ್ನು ಒದಗಿಸಿಕೊಡುವ ಕೆಲಸದಲ್ಲಿ ಕೃತಕೃತ್ಯತೆಯನ್ನು ಪಡೆಯಬಲ್ಲದೆಂದು ಭಾವಿಸಲಾಗಿದೆ. ಗಾಂಧೀಜೀಯವರ ಆಧ್ಯಾತ್ಮಿಕ, ಧಾರ್ಮಿಕ, ಸಾಮಾಜಿಕ, ಆರ್ಥಿಕ, ರಾಜಕೀಯ ಅಭಿಪ್ರಾಯಗಳು ಈ ಗ್ರಂಥಗಳ ಮೂಲಕ ಜನ-ಸಾಮಾನ್ಯರಲ್ಲಿ ಹರಡಲಿ, ಸಕಲ ಜನರಿಗೆ ಸ್ಫೂರ್ತಿ ಕೊಟ್ಟು ನವಚೈತನ್ಯವನ್ನು ತುಂಬಲಿ ಎಂದು ಹಾರೈಸಿ ಈ ಗ್ರಂಥಗಳನ್ನು ಜನತಾಜನಾರ್ದನನಿಗೆ ಅರ್ಪಿಸುತಿರುವೆ.

ಗಾಂಧೀ ಸ್ಮಾರಕ ನಿಧಿ
ರಾಜಘಾಟ, ದಿಲ್ಲಿ
೭-೫-೧೯೫೮

ರಂಗನಾಥ ದಿವಾಕರ
ಅಧ್ಯಕ್ಷರು

# ನಿವೇದನ

(ಗಾಂಧೀಜೀಯ ಮಾತುಗಳಲ್ಲಿ)

ಅನುವಾದಕರು : ' ಕುವೆಂಪು '

ನಾನೊಬ್ಬ ಸತ್ಯಶೋಧಕ. ಅದಕ್ಕೊಂದು ಮಾರ್ಗವನ್ನು ಕಂಡು ಕೊಂಡಿದ್ದೇನೆಂದು ನನ್ನ ವಿಶ್ವಾಸ. ಅದರ ಸಿದ್ಧಿಗಾಗಿ ನಾನು ನಿರಂತರ ಪ್ರಯತ್ನಶೀಲನಾಗಿದ್ದೇನೆಂದೂ ನನ್ನ ನಂಬಿಕೆ. ಅದು ಇನ್ನೂ ನನಗೆ ಸಿದ್ಧಿಸಿಲ್ಲ ಎಂಬುದನ್ನು ಒಪ್ಪಿಕೊಳ್ಳುತ್ತೇನೆ. ಸತ್ಯದ ಸಮ್ಯಕ್ ದರ್ಶನವೇ ಆತ್ಮಸಾಕ್ಷಾತ್ಕಾರ ; ಅದೇ ಜೀವನದ ಅಂತಿಮ ಗುರಿ. ಅಂದರೆ ಪರಿಪೂರ್ಣ ತೆಯ ಸಿದ್ಧಿ. ನನ್ನ ನ್ಯೂನತೆಗಳು ಎಷ್ಟೆಂಬುದನ್ನು ನಾನು ವ್ಯಸನದಿಂದ ಅರಿತಿದ್ದೇನೆ. ಆ ಅರಿವು ನನಗೆ ದುಃಖ ತರುವಷ್ಟೂ ಇದೆ. ಆ ಅರಿವೇ ನನ್ನ ಶಕ್ತಿಯ ಸರ್ವಮೂಲ ; ಏಕೆಂದರೆ ತನ್ನ ದೌರ್ಬಲ್ಯಗಳ ಅರಿವಾಗುವುದೇ ಮಾನವನಿಗೆ ಒಂದು ಅಪೂರ್ವ ಬಲ.೧

ಮನಸ್ಸಿನಲ್ಲಿ, ಮಾತಿನಲ್ಲಿ, ಕೆಲಸದಲ್ಲಿ ಅತ್ಯಂತ ಋಜುವಾಗಿ, ಅತ್ಯಂತ ಸತ್ಯವಾಗಿ, ಅತ್ಯಂತ ಅಹಿಂಸಕವಾಗಿ ನಡೆಯಬೇಕೆಂದು ಹೋರಾಡುತ್ತಿದ್ದರೂ, ನನಗೆ ಸರಿಯೆಂದು ತಿಳಿದ ಗುರಿಯನ್ನು ಮುಟ್ಟಲು ಹಂಬಲಿಸಿ ಹೆಣಗುತ್ತ ಸತತವೂ ಸೋಲುತ್ತಿರುವ ನಾನು ಒಂದು ಸಾಮಾನ್ಯ ಚೇತನ. ಆ ಯಾತ್ರೆಯೇನೋ ಕ್ಲೇಶಕರವೇ ; ಆದರೆ ಆ ಯಾತನೆಯಲ್ಲಿಯೂ ನನಗೆ ಒಂದು ಆನಂದವಿದೆ. ಏರುವ ಒಂದೊಂದು ಹೆಜ್ಜೆಯೂ ನನ್ನನ್ನು ಬಲಿಷ್ಠನನ್ನಾಗಿ ಮಾಡಿ ಮುಂದಣ ಹೆಜ್ಜೆಗೆ ಸಾಮರ್ಥ್ಯವೀಯುತ್ತದೆ.೨

ದಾರಿ ನನಗೆ ಗೊತ್ತು. ಅದು ನೇರ ಮತ್ತು ಇಕ್ಕಟ್ಟು—ಕತ್ತಿಯ ಅಲಗಿನಂತೆ. ಅದರ ಮೇಲೆ ನಡೆಯುವುದೆಂದರೆ ನನಗೆ ಉಲ್ಲಾಸ. ಜಾರಿದಾಗಲೆಲ್ಲಾ ಕಣ್ಣೀರಿಡುತ್ತೇನೆ. ' ನ ಮೇ ಭಕ್ತಃ ಪ್ರಣಶ್ಯತಿ ' ಎಂದು ದೇವರ ವಚನವಿದೆ. ಆ ವಚನದಲ್ಲಿ ನನಗೆ ದೃಢವಾದ ನಂಬಿಕೆಯಿದೆ. ಆದ್ದರಿಂದ ನನ್ನ ದೌರ್ಬಲ್ಯದ ಪರಿಣಾಮವಾಗಿ ಸಾವಿರ ಬಾರಿ ಸೋತರೂ

ನಾನೆಂದಿಗೂ ಶ್ರದ್ಧೆಗೆಡುವುದಿಲ್ಲ. ಪ್ರತಿಯಾಗಿ, ಇಂದಲ್ಲ ನಾಳೆ, ಸ್ವತಃ ಸಿದ್ಧವಾಗಿ ಕೈಗೂಡಲೇಬೇಕಾಗಿರುವ ಇಂದ್ರಿಯಜಯ ಲಭಿಸಿದಂದು, ಬೆಳಕನ್ನು ಕಂಡೇ ಕಾಣುತ್ತೇನೆಂಬುದು ನನ್ನ ವಿಶ್ವಾಸ.೩

ಏಕೆಂದರೆ ಸಾವಿನ ನಡುವೆ ಬಾಳು, ಸುಳ್ಳಿನ ನಡುವೆ ಸತ್ಯ, ತಮಸ್ಸಿನ ನಡುವೆ ಜ್ಯೋತಿ ಚಿರಸ್ಥಾಯಿಯಾಗಿರುವುದನ್ನು ನಾನು ಕಾಣುತ್ತಿದ್ದೇನೆ. ಭಗವಂತನೇ ಪ್ರಾಣಶಕ್ತಿ, ಅವನೇ ಸತ್ಯ ಮತ್ತು ಜ್ಯೋತಿ ಎಂಬುದು ನನ್ನ ವಿಶ್ವಾಸ. ಆತ ಪ್ರೇಮಸ್ವರೂಪಿ; ಆತನೇ ಪರಮಶ್ರೇಯಸ್ಸು.೪

ಬಾಲ್ಯದಿಂದಲೂ ನಾನೊಬ್ಬ ಸತ್ಯಾರಾಧಕ ಎಂಬುದು ನನ್ನ ವಿಶ್ವಾಸ. ಅದು ನನ್ನ ಅತ್ಯಂತ ಸಹಜ ಪ್ರವೃತ್ತಿ. ಉಪಾಸನಾಪೂರ್ವಕವಾದ ಶೋಧನೆಯಿಂದ ಭಗವಂತನೇ ಸತ್ಯ ಎಂಬ ರೂಢಿಯ ನಂಬಿಕೆಯ ಬದಲು ಸತ್ಯವೇ ಭಗವಂತ ಎಂಬ ಸೂತ್ರ ನನಗೆ ಸ್ಫುರಣವಾಯಿತು. ಭಗವಂತನನ್ನು ಪ್ರತ್ಯಕ್ಷವೋ ಎಂಬಂತೆ ಕಾಣಲು ಈ ಸೂತ್ರದಿಂದ ನನಗೆ ಸಾಧ್ಯವಾಗಿದೆ. ನನ್ನ ಚೇತನಸಮಸ್ತವನ್ನೂ ಆತ ವ್ಯಾಪಿಸಿದ್ದಾನೆ, ಎಂಬುದು ನನ್ನ ಅನುಭವ.೫

ಭಗವಂತನ ಪ್ರತ್ಯಕ್ಷ ದರ್ಶನದ ಹಂಬಲ ನನ್ನದು. ಭಗವಂತನೇ ಸತ್ಯ ಎಂಬುದನ್ನು ನಾನು ಬಲ್ಲೆ. ನನ್ನ ಪಾಲಿಗೆ ಭಗವಂತನನ್ನು ಕಾಣಲು ಇರುವ ಒಂದೇ ಒಂದು ನಿಶ್ಚಿತ ಮಾರ್ಗವೆಂದರೆ ಅಹಿಂಸೆ, ಪ್ರೇಮ.೬

ಅಹಿಂಸೆ ನನ್ನ ದೇವರು. ಸತ್ಯ ನನ್ನ ದೇವರು. ಅಹಿಂಸೆಯ ಸಾಧನೆಗಾಗಿ ನಾನು ಶ್ರಮಿಸುವಾಗ ಸತ್ಯ ಹೇಳುತ್ತದೆ: ' ನನ್ನ ಮೂಲಕವೇ ಅದರ ಸಿದ್ಧಿ ' ಎಂದು. ಸತ್ಯದ ಸಾಧನೆಗಾಗಿ ನಾನು ಶ್ರಮಿಸುವಾಗ ಅಹಿಂಸೆ ಹೇಳುತ್ತದೆ: ' ನನ್ನ ಮೂಲಕವೇ ಅದರ ಸಿದ್ಧಿ ' ಎಂದು.೭

ಭಾರತದ ಸ್ವಾತಂತ್ರ್ಯಸಾಧನೆಯೇ ನನ್ನ ಜೀವಿತೋದ್ದೇಶ. ನಾನು ಅದಕ್ಕಾಗಿ ಸಾಯಲು ಕೂಡ ಸಿದ್ಧ. ಏಕೆಂದರೆ ಭಾರತದ ಸ್ವಾತಂತ್ರ್ಯ ಸತ್ಯದ ಒಂದು ಅಂಶ. ಬಂಧಮುಕ್ತವಾದಾಗಲೆ ಭರತಖಂಡ ಸತ್ಯಸ್ವರೂಪನಾದ ಭಗವಂತನನ್ನು ಪೂಜಿಸಬಲ್ಲದು, ಭಾರತದ ಬಿಡುಗಡೆಗಾಗಿ ನಾನು ದುಡಿಯುತ್ತಿದ್ದೇನೆ; ಏಕೆಂದರೆ ಭಾರತದಲ್ಲಿ ಬದುಕಿ ಅದರ ಸಂಸ್ಕೃತಿ

ಯನ್ನು ಪಡೆದಿರುವುದರಿಂದ ಆದರ ಸೇವೆಗೆ ನಾನು ಅತ್ಯಂತ ಅರ್ಹ ಎಂಬುದನ್ನು, ನನ್ನ ಸೇವೆಯ ಮೊದಲ ಹಕ್ಕು ಭಾರತದ್ದು ಎಂಬುದನ್ನು ನನ್ನ ಸ್ವದೇಶೀ ನನಗೆ ಕಲಿಸಿದೆ. ನನ್ನ ದೇಶಭಕ್ತಿ ಭಾರತಕ್ಕೆ ಮಾತ್ರ ಮೀಸಲಾದುದಲ್ಲ. ಬೇರೆ ಯಾವ ರಾಷ್ಟ್ರದ ಹಿತಕ್ಕೂ ಧಕ್ಕೆಯೊದಗ ಬಾರದು ಎಂಬುದಷ್ಟೇ ಅಲ್ಲ; ಸಕಲ ರಾಷ್ಟ್ರಗಳಿಗೂ, ಆ ಪದದ ಸಂಪೂರ್ಣಾರ್ಥದಲ್ಲಿ, ಸರ್ವಲಾಭ ಒದಗಬೇಕು ಎಂಬುದೇ ನನ್ನ ಮಾತಿನ ಆಶಯ. ನಾನು ಸಂಕಲ್ಪಿಸಿರುವ ಭಾರತದ ಸ್ವಾತಂತ್ರ್ಯ ಎಂದೆಂದೂ ಲೋಕಹಿತಕಂಟಕವಾಗಲಾರದು.[೮]

ವಿಶ್ವಾತ್ಮಕವೂ ವಿಶ್ವವ್ಯಾಪಿಯೂ ಆದ ಸತ್ಯವನ್ನು ಸಾಕ್ಷಾತ್ತಾಗಿ ಸಂದರ್ಶಿಸಬೇಕಾದರೆ ಸೃಷ್ಟಿಯಲ್ಲಿ ಕ್ಷುದ್ರತಮವಾದುದನ್ನೂ ತನ್ನಂತೆ ಪ್ರೀತಿಸುವುದು ಸಾಧ್ಯವಾಗಲೇಬೇಕು. ಆ ಹಂಬಲವನ್ನು ತುಂಬಿಕೊಂಡ ವನು ಜೀವನದ ಯಾವ ಕ್ಷೇತ್ರದಿಂದಲೂ ವಿಮುಖನಾಗಲು ಸಾಧ್ಯವಿಲ್ಲ. ನನ್ನ ಸತ್ಯಶ್ರದ್ಧೆ ನನ್ನನ್ನು ರಾಜಕೀಯ ಕ್ಷೇತ್ರಕ್ಕೆ ಎಳೆದುತಂದಿರುವುದು ಈ ಕಾರಣದಿಂದಲೇ. ಅಧ್ಯಾತ್ಮಕ್ಕೂ ರಾಜಕೀಯಕ್ಕೂ ಏನೂ ಸಂಬಂಧ ಇಲ್ಲ ಎನ್ನುವವರಿಗೆ ಅಧ್ಯಾತ್ಮ ಎಂದರೇನು ಎಂಬುದೇ ತಿಳಿಯದೆಂದು ಸ್ವಲ್ಪವೂ ಅಳುಕದೆ, ಆದರೆ ವಿನೀತನಾಗಿ ನಾನು ಹೇಳಬಲ್ಲೆ.[೯]

ಆತ್ಮಶ್ರೀವಿದೂರವಾದ ರಾಜಕೀಯವು ನನ್ನ ಪಾಲಿಗೆ ಸರ್ವಥಾ ತ್ಯಾಜ್ಯವಾದ ಕಲಂಕ. ರಾಜಕೀಯ ರಾಷ್ಟ್ರಗಳನ್ನು ಕುರಿತದ್ದು. ಯಾವುದು ರಾಷ್ಟ್ರಗಳ ಹಿತವನ್ನು ಕುರಿತದ್ದೋ ಅದು ಅಧ್ಯಾತ್ಮ ಪ್ರವೃತ್ತಿಯುಳ್ಳ ವ್ಯಕ್ತಿಯ, ಎಂದರೆ ಸತ್ಯದ ಮತ್ತು ಭಗವಂತನ ಅನ್ವೇಷಕ ಸಾಧನೆಯ ಅಂಗಗಳಲ್ಲಿ ಒಂದಾಗಿರುವುದು ಅನಿವಾರ್ಯ. ನನಗಾದರೋ ಭಗವಂತ ನೆಂದರೂ ಒಂದೇ, ಸತ್ಯವೆಂದರೂ ಒಂದೇ. ಭಗವಂತನು ಅಸತ್ಯದ ಮೂರ್ತಿಯೆಂದೂ ಹಿಂಸೆಯ ಮೂರ್ತಿಯೆಂದೂ ಯಾರಾದರೂ ಸ್ಥಿರಪಡಿಸಿ ದರೆ ಅಂತಹ ಭಗವಂತನನ್ನು ಪೂಜಿಸಲು ನಾನು ನಿರಾಕರಿಸುತ್ತೇನೆ. ರಾಜಕೀಯದಲ್ಲಿಯೂ ಭಗವಂತನ ರಾಜ್ಯ ಸ್ಥಾಪಿತವಾಗಬೇಕಾಗಿದೆ. ನನ್ನ ಬದುಕಿನ ಅತ್ಯಂತ ಆತ್ಮೀಯ ವಸ್ತುಗಳಿಂದ ರಾಜಕೀಯವನ್ನು ಬೇರ್ಪಡಿಸ ಲಾರೆ. ಕಾರಣ ಇಷ್ಟೆ : ನನ್ನ ರಾಜಕೀಯ ಕಲುಷಿತವಲ್ಲ. ಈ ಎಲ್ಲವೂ

ಸತ್ಯ – ಅಹಿಂಸೆಗಳೊಂದಿಗೆ ಜಟಿಲವಾಗಿ ಹೆಣೆದುಕೊಂಡಿವೆ. ಸತ್ಯವನ್ನು ಬಲಿಗೊಟ್ಟು ಸ್ವಾತಂತ್ರ್ಯವನ್ನು ಪಡೆಯುವುದಕ್ಕಿಂತ ಭಾರತ ವಿನಾಶ ಹೊಂದುವುದೇ ಹೆಚ್ಚು ಲೇಸೆಂಬುದು ನನ್ನ ಮತ. ರಾಜಕೀಯ ಸಂಪರ್ಕ ಇಲ್ಲದೆ ಸಮಾಜಸೇವೆಯಂಥ ಕೆಲಸವನ್ನು ಕೂಡ ನಡೆಸುವುದು ಅಸಾಧ್ಯ ಎಂಬುದು ನನ್ನ ಅನುಭವಕ್ಕೆ ಬಂದುದರಿಂದ ರಾಜಕೀಯ ಕ್ಷೇತ್ರವನ್ನು ನಾನು ಪ್ರವೇಶಿಸುವುದು ಅನಿವಾರ್ಯವಾಯಿತು. ಸಾಮಾಜಿಕ ಮತ್ತು ನೈತಿಕ ದೃಷ್ಟಿಯಿಂದ ರಾಜಕೀಯ ಕಾರ್ಯವು ಪರಿಗಣಿತವಾಗಲೇಬೇಕು.

ಮಾನವನ ಮನಸ್ಸಾಗಲಿ ಸಮಾಜವಾಗಲಿ ರಾಜಕೀಯ, ಸಾಮಾಜಿಕ, ಧಾರ್ಮಿಕ ಎಂಬ ಪ್ರತ್ಯೇಕ ವಿಭಾಗಗಳಾಗಿ ವಿಂಗಡಣೆಯಾಗಿಲ್ಲ ಎಂಬುದು ನನ್ನ ವಿಶ್ವಾಸ. ಅವುಗಳ ನಡುವೆ ಪ್ರತಿಕ್ರಿಯೆ ಇದ್ದೇ ತೀರುತ್ತದೆ.೧೦

ಆತ್ಮಶ್ರೀನಿಯಮಕ್ಕೆ ತನ್ನದೇ ಆದ ಒಂದು ಕ್ಷೇತ್ರವಿದೆ ಎಂಬುದನ್ನು ನಾನು ನಂಬುವುದಿಲ್ಲ. ಬದಲು, ಅದು ಜೀವನದ ಸಾಮಾನ್ಯ ವ್ಯಾಪಾರಗಳ ಮೂಲಕವಾಗಿ ಮಾತ್ರವೇ ವ್ಯಕ್ತಗೊಳ್ಳುತ್ತದೆ. ಹೀಗೆ ಅದು ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ವಲಯಗಳ ಮೇಲೂ ಪರಿಣಾಮವನ್ನು ಉಂಟುಮಾಡುತ್ತದೆ.೧೧

ಮಾನವಜೀವಿತದ ಪರಮೋದ್ದೇಶ ಭಗವತ್ಸಾಕ್ಷಾತ್ಕಾರ. ಅವನ ಕರ್ಮಕ್ರಿಯೆಗಳೇನೇ ಇರಲಿ, ಸಾಮಾಜಿಕ, ರಾಜಕೀಯ, ಧಾರ್ಮಿಕ ಎಲ್ಲವೂ ಈ ಈಶ್ವರಸಾಕ್ಷಾತ್ಕಾರದ ಪರಮೋದ್ದೇಶದಿಂದಲೇ ನಿಯಂತ್ರಿತ ವಾಗಿರಬೇಕು. ಮಾನವಸೇವೆಯೇ ಈ ಸಾಧನೆಯ ಪ್ರಪ್ರಥಮವಾದ ಅನಿವಾರ್ಯಾಂಗವಾಗುತ್ತದೆ. ಏಕೆಂದರೆ ಇಷ್ಟೆ : ಈಶ್ವರದರ್ಶನಕ್ಕಿರುವ ಏಕೈಕ ಮಾರ್ಗವೆಂದರೆ ಆತನ ಸೃಷ್ಟಿಯಲ್ಲಿಯೇ ಆತನನ್ನು ಕಂಡು ಅದರಲ್ಲಿಯೇ ಒಂದಾಗಿರುವುದು. ಸರ್ವರ ಸೇವೆಯೊಂದೇ ಇದಕ್ಕೆ ಸಾಧನ. ನಾನು ಈ ಸರ್ವದ ಒಂದು ಅಂಶ. ಇತರರನ್ನು ಉಳಿದು ನಾನೊಬ್ಬನೇ ಅದನ್ನು ಪಡೆಯಲಾರೆ.೧೨

ಈಶಸೇವೆ ಅರ್ಥಾತ್ ಮಾನವಸೇವೆಯೇ ನನ್ನ ಧರ್ಮ. ನಿಷ್ಕಾಮ ಸೇವೆಯಿಂದ ಸೇವೆಸಲ್ಲಿಸುವುದೆಂದರೆ ಇತರರಿಗೆ ನಾವು ಉಪಕಾರಮಾಡಿದ್ದ

ಕ್ಕಿಂತ ನಮ್ಮ ಸಾಲವನ್ನು ನಾವು ತೀರಿಸಿಕೊಂಡು ಕೃತಕೃತ್ಯರಾದಂತೆ. ನಮ್ಮ ಹೊಣೆಯನ್ನು ನಾವೇ ಇಳಿಸಿಕೊಂಡು ನಮ್ಮ ಕರ್ತವ್ಯವನ್ನು ಪರಿಪಾಲಿಸುವುದರ ಮೂಲಕ. ನಮಗೆ ನಾವೇ ಉಪಕಾರ ಮಾಡಿಕೊಳ್ಳುತ್ತೇವೆ. ನಮ್ಮಲ್ಲಿ ಒಳ್ಳೆಯವರೆನಿಸಿಕೊಂಡವರು ಮಾತ್ರವಲ್ಲ, ನಾವೆಲ್ಲರೂ ನಮ್ಮ ಸರ್ವ ಸಂಪತ್ತನ್ನೂ ಸರ್ವರಿಗಾಗಿ ವಿನಿಯೋಗಿಸಲು ಬದ್ಧರು. ಮೃಗಗಳಿಗಿಂತ ಮಾನವ ಭಿನ್ನ ಎಂದು ತೋರುವುದು ಈ ತ್ಯಾಗಧರ್ಮ ಒಂದರಿಂದಲೇ.೧೩

ಮನುಷ್ಯ ಎಷ್ಟರಮಟ್ಟಿಗೆ ಪರಾರ್ಥಕ್ಕಾಗಿ ಶ್ರಮಿಸುತ್ತಾನೆಯೋ ಅಷ್ಟರಮಟ್ಟಿಗೆ ಅವನು ದೊಡ್ಡವನಾಗುತ್ತಾನೆ.೧೪

ನಾನು ಸೋದರಭಾವ ಅಥವಾ ತಾದಾತ್ಮ್ಯವನ್ನು ಸಾಧಿಸಲೆಳಸುವುದು ಕೇವಲ ಮಾನವಜೀವಿಗಳೊಂದಿಗೆ ಮಾತ್ರವಲ್ಲ, ಸಮಸ್ತ ಜೀವರಾಶಿಯೊಂದಿಗೆ, ನೆಲದ ಮೇಲೆ ಹರಿದಾಡುವ ಕ್ರಿಮಿಕೀಟಗಳೊಂದಿಗೆ ಕೂಡ. ನಿಮ್ಮನ್ನು ಚಕಿತಗೊಳಿಸಬಹುದಾದ ಈ ಬಯಕೆಗೆ—ನೆಲದ ಮೇಲೆ ಹರಿದಾಡುವ ಕ್ರಿಮಿಕೀಟಗಳೊಂದಿಗೂ ತಾದಾತ್ಮ್ಯವನ್ನು ಸಾಧಿಸಬೇಕೆನ್ನುವ ಬಯಕೆಗೆ–ಕಾರಣವಿಷ್ಟೆ : ನಾವೆಲ್ಲರೂ ಒಬ್ಬನೇ ಭಗವಂತನಿಂದ ಬಂದವರು ಎಂದು ಹೇಳುತ್ತೇವಲ್ಲ; ಹಾಗಿರುವುದರಿಂದ ಯಾವುದೇ ರೂಪದಲ್ಲಿ ಗೋಚರಿಸಿದರೂ ಮೂಲತಃ ಎಲ್ಲ ಜೀವರಾಶಿಯೂ ಒಂದೇ.೧೫

ಭಗವಂತನ ಕೇವಲ ಅಖಂಡತೆಯನ್ನು ನಾನು ನಂಬುತ್ತೇನೆ; ಆದುದರಿಂದಲೇ ಜನತೆಯ ಅಖಂಡತೆಯಲ್ಲೂ ನನಗೆ ಶ್ರದ್ಧೆಯಿರುವುದು. ಒಬ್ಬನು ಮಾತ್ರ ಅಧ್ಯಾತ್ಮಲಾಭ ಪಡೆದು ಅವನ ಸುತ್ತಣ ಜನರು ಸೊರಗುತ್ತಾರೆ ಎಂಬುದನ್ನು ನಾನು ನಂಬುವುದಿಲ್ಲ. ಅದ್ವೈತದಲ್ಲಿ ನನಗೆ ಶ್ರದ್ಧೆಯಿದೆ. ತತ್ಪರಿಣಾಮವಾಗಿ ಮಾನವನ ಅಖಂಡತೆಯಲ್ಲಿ, ಹಾಗೆ ನೋಡಿದರೆ ಜೀವಸಮಸ್ತದ ಅಖಂಡತೆಯಲ್ಲಿ ನನಗೆ ವಿಶ್ವಾಸವುಂಟು. ಆದುದರಿಂದಲೇ ಒಂದು ವ್ಯಕ್ತಿಗೆ ಅಧ್ಯಾತ್ಮಲಾಭವಾದರೆ ಇಡಿಯ ವಿಶ್ವಕ್ಕೆ ಆ ಲಾಭ ಒದಗುತ್ತದೆ. ಒಂದು ವ್ಯಕ್ತಿ ಪತನಹೊಂದಿದರೆ ಅಷ್ಟರ ಮಟ್ಟಿಗೆ ಇಡಿಯ ವಿಶ್ವದ ಪತನವೇ ಆಗುತ್ತದೆ ಎಂದು ನಾನು ಭಾವಿಸಿರುವುದು.೧೬

ಈ ಪೃಥ್ವಿಯ ನಶ್ವರ ಸಾಮ್ರಾಜ್ಯದ ಬಯಕೆ ನನಗಿಲ್ಲ. ಮೋಕ್ಷ ರೂಪವಾದ ಅಮರಸಾಮ್ರಾಜ್ಯಕ್ಕಾಗಿ ನಾನು ಶ್ರಮಿಸಿದ್ದೇನೆ. ನನ್ನ ಧ್ಯೇಯ ಸಾಧನೆಗಾಗಿ ನಾನು ಗುಹಾನಿವಾಸಿಯಾಗಬೇಕಾಗಿಲ್ಲ.೧೭

ದೇಶದ, ತನ್ಮೂಲಕ ಮಾನವತೆಯ ಸೇವೆಗಾಗಿ ಎಡೆಬಿಡದೆ ದುಡಿಯುವುದೇ ನನ್ನ ಮೋಕ್ಷಪಥ. ಜೀವಸಮುಸ್ತದೊಂದಿಗೆ ಅನನ್ಯತೆಯನ್ನು ಸಾಧಿಸುವುದೇ ನನ್ನ ಬಯಕೆ.೧೮

ಯಾವ ನೂತನ ಸಿದ್ಧಾಂತಗಳನ್ನೂ ನಾನು ಮಂಡಿಸಿಲ್ಲ. ಅದರ ಬದಲು ಪುರಾತನ ಸಿದ್ಧಾಂತಗಳ ಪುನರ್ನಿರೂಪಣೆಯ ಪ್ರಯತ್ನವೇ ನನ್ನದು. ಅದು ಎಷ್ಟರಮಟ್ಟಿಗೆ ಸರಿಯಾಗಿ ಸಾಗಿದೆಯೋ ಹೇಳಲಾರೆ. ಆದರೆ ಅದು ನನ್ನ ಪ್ರಾಮಾಣಿಕ ನಂಬಿಕೆಯನ್ನು ಪ್ರತಿನಿಧಿಸುತ್ತಿದೆ.೧೯

ಗಾಂಧೀಪಂಥ ಎಂಬುದೊಂದಿಲ್ಲ. ನನ್ನ ತರುವಾಯ ಯಾವ ಪಂಥವನ್ನೂ ಕಟ್ಟಿಹೋಗುವ ಇಚ್ಛೆ ನನಗಿಲ್ಲ. ನಾನು ಯಾವುದಾದರೂ ನೂತನ ತತ್ತ್ವದ ಅಥವಾ ಸಿದ್ಧಾಂತದ ಮೂಲಪುರುಷ ಎಂಬ ಭಾವನೆ ನನಗಿಲ್ಲ. ನಿತ್ಯ ಸತ್ಯಗಳನ್ನು ನಮ್ಮ ದೈನಂದಿನ ಜೀವನ ಹಾಗೂ ಸಮಸ್ಯೆಗಳಿಗೆ ಅಳವಡಿಸಲು ನನ್ನ ರೀತಿಯಲ್ಲಿ ನಾನು ಸಾಧಾರಣನಂತೆ ಪ್ರಯತ್ನಿಸಿದ್ದೇನೆ; ಅಷ್ಟೆ. ಸತ್ಯ–ಅಹಿಂಸೆ ಈ ಭಾವಗಳು ಪರ್ವತಗಳಷ್ಟೇ ಪುರಾತನವಾದವು. ನನ್ನ ಶಕ್ತಿಗೆ ಸಾಧ್ಯವಾದಷ್ಟು ವಿಪುಲ ಪ್ರಮಾಣದಲ್ಲಿ ಅವೆರಡರಲ್ಲೂ ಪ್ರಯೋಗಗಳನ್ನು ನಡೆಸಿರುವುದಷ್ಟೆ ನನ್ನ ಕೆಲಸ. ಹಾಗೆ ಮಾಡುವಾಗ ಕೆಲವು ಸಲ ತಪ್ಪು ಮಾಡಿದ್ದೇನೆ; ಆ ತಪ್ಪುಗಳಿಂದ ಪಾಠ ಕಲಿತಿದ್ದೇನೆ. ಹೀಗೆ ಜೀವನ ಮತ್ತು ಅದರ ಸಮಸ್ಯೆಗಳು ಸತ್ಯ–ಅಹಿಂಸೆಗಳ ಅನುಷ್ಠಾನಗಳಲ್ಲಿ ನಡೆಸಿರುವ ಅನೇಕ ಪ್ರಯೋಗಗಳಾಗಿವೆ.೨೦

ನಿಮ್ಮ ಮುಂದೆ ಉದ್ಭವಿಸಿರುವ ಸಮಸ್ಯೆಗಳನ್ನು ನನ್ನ ಹೇಳಿಕೆಗೆ ಅನುಸಾರವಾಗಿ ಎದುರಿಸಬೇಕೆಂಬುದೇ ನನ್ನ ಇಚ್ಛೆ. ಹೀಗೆ ಸತ್ಯ–ಅಹಿಂಸೆಗಳಲ್ಲಿ ನನ್ನ ಶ್ರದ್ಧೆ ವರ್ಧಿಸುತ್ತಲೇ ಇದೆ. ನನ್ನ ಜೀವನದಲ್ಲಿ ಅವುಗಳನ್ನು ಅನುಸರಿಸುತ್ತ ಹೋದಂತೆ ನಾನು ಕೂಡ ಪ್ರತಿಕ್ಷಣವೂ ಬೆಳೆಯುತ್ತಲೇ ಇದ್ದೇನೆ. ಅವುಗಳಲ್ಲಿ ನನಗೆ ಹೊಸ ಅರ್ಥ ಸ್ಫುರಿಸುತ್ತಿದೆ. ದಿನದಿನವೂ

ಅವುಗಳನ್ನು ಹೊಸ ಹೊಸ ಬೆಳಕಿನಲ್ಲಿ ಕಂಡು ಹೊಸ ಹೊಸ ಅರ್ಥ ಗಳನ್ನೂ ಅರಿಯುತ್ತಿದ್ದೇನೆ. ನನ್ನ ಜತೆಜತೆಗೆ ನೀವೂ ಕೂಡ ಬೆಳೆಯ ಬೇಕು. ನನ್ನ ಅನಂತರ ಏನಾಗುತ್ತದೆ ಎಂಬುದನ್ನು ತಿಳಿಯುವ ಚಿಂತೆ ನನಗಿರಕೂಡದು. ಆದುದರಿಂದ ನನ್ನನ್ನು ಮರೆತುಬಿಡಿ. ನೀವು ಭದ್ರವಾಗಿ ಅಂಟಿಕೊಳ್ಳಬೇಕಾದುದು ನನ್ನ ಹೆಸರಿಗಲ್ಲ, ತತ್ತ್ವಗಳಿಗೆ. ಅದರ ಅಳತೆ ಕೋಲಿನಿಂದ ನಿಮ್ಮ ಒಂದೊಂದು ಚಟುವಟಿಕೆಯನ್ನೂ ಅಳೆದು ಉದ್ಭವಿಸ ಬಹುದಾದ ಎಲ್ಲ ಸಮಸ್ಯೆಗಳನ್ನೂ ನಿರ್ಭೀತರಾಗಿ ಎದುರಿಸಿ.೨೧

ನಿಲ್ಲುವುದು ನನ್ನ ಕೃತಿಯೇ ಹೊರತು, ನನ್ನ ಮಾತೂ ಅಲ್ಲ, ಬರಹವೂ ಅಲ್ಲ. ಇತ್ತೀಚೆಗೆ ನಾನು ಈ ಮಾತನ್ನು ಅನೇಕ ಸಲ ಹೇಳಿದ್ದೇನೆ. ಸಕಲ ಶಾಸ್ತ್ರಗಳೂ ಒಂದುವೇಳೆ ವಿನಾಶಹೊಂದುವುದಾದರೂ ಹಿಂದೂ ಧರ್ಮದ ಸಾರವನ್ನು ಸಾರಲು ಈಶೋಪನಿಷತ್ತಿನ ಒಂದು ಮಂತ್ರ ಸಾಕು ; ಆದರೆ ಅದನ್ನು ಅನುಷ್ಠಾನಕ್ಕೆ ತರಲು ಯಾರೊಬ್ಬರೂ ಇರದಿದ್ದರೆ ಆ ಒಂದು ಮಂತ್ರವೂ ನಿರರ್ಥಕ. ಅದರಂತೆಯೆ ನನ್ನ ಮಾತು, ಬರಹಗಳು ಸತ್ಯ–ಅಹಿಂಸೆಯ ಮಹಾತತ್ತ್ವಗಳನ್ನು ರಕ್ತಗತಮಾಡಿಕೊಳ್ಳಲು ನಿಮಗೆ ನೆರವು ನೀಡಿರುವಷ್ಟರಮಟ್ಟಿಗೆ ಮಾತ್ರ ಉಪಯುಕ್ತ. ಅವುಗಳನ್ನು ನೀವು ಹಾಗೆ ರಕ್ತಗತ ಮಾಡಿಕೊಳ್ಳದಿದ್ದರೆ ನನ್ನ ಬರಹಗಳಿಂದ ನಿಮಗೆ ಯಾವ ಪ್ರಯೋಜನವೂ ಇಲ್ಲ. ಒಬ್ಬ ಸತ್ಯಾಗ್ರಹಿಯಾಗಿ ನಾನು ಈ ಒಂದೊಂದು ಮಾತನ್ನೂ ಉದ್ದೇಶಪೂರ್ವಕವಾಗಿ ಹೇಳುತ್ತಿದ್ದೇನೆ.೨೨

ಗಾಂಧೀಪಂಥ ಎಂಬುದು ದೋಷದ ಪ್ರತೀಕವಾಗಿರುವುದಾದರೆ ಅದು ನಾಶಹೊಂದಲಿ. ಸತ್ಯ–ಅಹಿಂಸೆಗಳು ಅಜರಾಮರ. ಆದರೆ ಗಾಂಧೀ ಪಂಥ ಎಂಬುದು ಪಂಥಾಭಿಮಾನಕ್ಕೆ ಮತ್ತೊಂದು ಹೆಸರಾದರೆ ಅದು ವಿನಾಶಯೋಗ್ಯವೇ ನಿಜ. ತಾನು ಗಾಂಧೀ ಅನುಯಾಯಿ — ಎಂದು ಯಾರೊಬ್ಬನೂ ಹೇಳದಿರಲಿ. ನಾನು ನನ್ನನ್ನು ಅನುಸರಿಸಿದರೆ ಸಾಕು. ಅದರಲ್ಲೂ ನಾನು ಎಂತಹ ಅಸಮರ್ಪಕ ಅನುಯಾಯಿ ಎಂಬುದನ್ನು ನಾನು ಬಲ್ಲೆ ; ಯಾವ ತತ್ತ್ವಗಳಿಗಾಗಿ ನಾನು ನಿಂತಿದ್ದೇನೆಯೊ ಅವುಗಳಿಗೆ ತಕ್ಕಂತೆ ನಾನು ಬಾಳುತ್ತಿಲ್ಲ. ನೀವು ಅನುಯಾಯಿಗಳಲ್ಲ ; ಸಹವಿದ್ಯಾರ್ಥಿ ಗಳು, ಸಹಯಾತ್ರಿಕರು, ಸಹ-ಅನ್ವೇಷಕರು, ಸಹ-ಉದ್ಯೋಗಿಗಳು.೨೩

ಸತ್ಯ–ಅಹಿಂಸೆಗಳನ್ನು ಕೇವಲ ವೈಯಕ್ತಿಕ ಅನುಷ್ಠಾನದ ತತ್ತ್ವಗಳನ್ನಾಗಿ ಮಾಡಿಕೊಂಡರೆ ಸಾಲದು ; ಸಮಾಜಸಮುದಾಯಗಳು, ರಾಷ್ಟ್ರಗಳೂ ಕೂಡ ಅವುಗಳನ್ನು ಅನುಷ್ಠಾನಕ್ಕೆ ತರುವಂತಾಗಬೇಕು. ಹೇಗೇ ಆಗಲಿ, ಅದಂತೂ ನನ್ನ ಕನಸು. ನನ್ನ ಬದುಕೆಲ್ಲ ಅದರ ಸಾಕ್ಷಾತ್ಕಾರದ ಪ್ರಯತ್ನಕ್ಕಾಗಿಯೇ, ನನ್ನ ಸಾವೂ ಅದರಲ್ಲಿಯೆ. ನನ್ನ ಶ್ರದ್ಧೆ ನನಗೆ ಅನುದಿನವೂ ನೂತನ ಸತ್ಯಗಳನ್ನು ಕಾಣಿಸುತ್ತಿದೆ. ಆತ್ಮದ ಸ್ವರೂಪವೇ ಅಹಿಂಸೆ; ಆದುದರಿಂದಲೇ ಸಕಲರೂ ಬದುಕಿನ ಸಕಲ ವ್ಯವಹಾರಗಳಲ್ಲೂ ಅಹಿಂಸೆಯನ್ನು ಅನುಷ್ಠಾನಕ್ಕೆ ತರಬೇಕು. ಎಲ್ಲ ಕ್ಷೇತ್ರಗಳಲ್ಲೂ ಅದನ್ನು ಅನುಷ್ಠಾನ ಮಾಡಲಾಗದಿದ್ದರೆ ಅದಕ್ಕೆ ಔಪಯೋಗಿಕ ಮೌಲ್ಯವೇ ಇಲ್ಲ.೨೧

ನಮ್ಮ ದೇಶಕ್ಕಾಗಿ ನಾನು ತ್ಯಾಗ ಮಾಡಲಾರದುದು ಈ ಜಗತ್ತಿನಲ್ಲಿ ಏನೂ ಇಲ್ಲ—ಎರಡರ ಹೊರತು. ಅವು ಸತ್ಯ ಮತ್ತು ಅಹಿಂಸೆ. ಇಡೀ ಜಗತ್ತನ್ನೇ ನನ್ನ ಮುಂದಿಟ್ಟರೂ ಈ ಎರಡನ್ನು ನಾನು ಬಿಡಲಾರೆ. ಏಕೆಂದರೆ ನನ್ನ ಪಾಲಿಗೆ ಸತ್ಯವೇ ದೇವರು. ಸತ್ಯಸಾಧನೆಗೆ ಅಹಿಂಸೆಯಲ್ಲದೆ ಅನ್ಯಪಥ ಇಲ್ಲ. ಸತ್ಯ ಅಥವಾ ಭಗವಂತನನ್ನು ಬಲಿಗೊಟ್ಟು ಭಾರತಕ್ಕೆ ಸೇವೆ ಸಲ್ಲಿಸುವ ಆಲೋಚನೆಯನ್ನು ನಾನು ಮಾಡಲಾರೆ. ನಾನು ಬಲ್ಲೆ, ಸತ್ಯವನ್ನು ಕೈಬಿಡಬಲ್ಲವನು ತನ್ನ ದೇಶವನ್ನೂ ಕೈಬಿಡಬಲ್ಲ, ಆಪ್ತೇಷ್ಟರನ್ನೂ ಕೈಬಿಡಬಲ್ಲ. ನನ್ನಾತ್ಮ ಮತ್ತು ನನ್ನ ಕರ್ತ ಇಬ್ಬರೂ ಮೆಚ್ಚುವಂತೆ ನಾನು ಹೋದೆಡೆಯೆಲ್ಲ ನನ್ನ ಕರ್ಮಕ್ಷೇತ್ರದ ಗಾಯತ್ರಿಗಳಾದ ಈ ನನ್ನ ಧರ್ಮಸೂತ್ರಗಳನ್ನು ಸಾರುತ್ತ ಹೋಗುತ್ತೇನೆ.

ನನ್ನದು ಧರ್ಮಮಾರ್ಗ, ನಾವು ಧರ್ಮಿಗಳು, ಆದುದರಿಂದ ಉಳಿದವರಿಗೆ ನಾವು ಶ್ರೇಷ್ಠರು ಎಂಬ ಅಹಂಭಾವ ನಮ್ಮನ್ನು ಆಕ್ರಮಿಸುವ ಭಯ ಯಾವಾಗಲೂ ಇದ್ದೇ ಇದೆ. ಇತರರಿಂದ ನಾನು ನಿರೀಕ್ಷಿಸುವಂತೆ ಸ್ವವಿಮರ್ಶೆಯಲ್ಲಿ ಸತ್ಯವಂತೆಯೇ ನಿಷ್ಠುರವಾಗಿರಲು ನಾನು ಪ್ರಯತ್ನಿಸುತ್ತೇನೆ.೨೨

'ಗಾಂಧೀತತ್ತ್ವ' ಎಂದು ಯಾವುದನ್ನು ಜನ ಕರೆಯುತ್ತಾರೋ ಅದನ್ನು, ಅದರ ಪ್ರಸಾರವಿಧಾನಗಳನ್ನು ವಿಚಾರಿಸೋಣ. ಸತ್ಯ–ಅಹಿಂಸೆಗಳನ್ನು ಕುರಿತು ಪುಸ್ತಕಗಳನ್ನು ಬರೆಯುವುದಕ್ಕಿಂದ ಹೆಚ್ಚಿನ ಪ್ರಮಾಣ

ದಲ್ಲಿ ಸತ್ಯ-ಅಹಿಂಸೆಗಳ ಪ್ರಸಾರ ಸಾಧ್ಯ. ಅವುಗಳನ್ನು ಅನುಷ್ಠಾನಕ್ಕೆ ತಂದರೆ ಅನುಷ್ಠಾನದ ಜೀವನ ಪುಸ್ತಕಕ್ಕಿಂತ ಶ್ರೇಷ್ಠ. ಪುಸ್ತಕ ಮತ್ತು ಪತ್ರಿಕೆಗಳ ಪ್ರಕಟನೆ ಅನಗತ್ಯ ಎಂದು ನಾನು ಹೇಳುತ್ತಿಲ್ಲ. ಅವು ಅನಿವಾರ್ಯವೇನಲ್ಲ ಎಂದಷ್ಟೆ ನನ್ನ ಅಭಿಪ್ರಾಯ. ನಾವು ಸತ್ಯ-ಅಹಿಂಸೆಗಳ ನಿಜವಾದ ಆರಾಧಕರಾಗುವ ಪಕ್ಷದಲ್ಲಿ ಸಮಸ್ಯೆಗಳನ್ನು ಪರಿಹರಿಸಲು ಅಗತ್ಯವಾಗಿ ಬೇಕಾದ ಬುದ್ಧಿಶಕ್ತಿಯನ್ನು ಭಗವಂತನೇ ನಮಗೆ ದಯಪಾಲಿಸುತ್ತಾನೆ. ಪ್ರತಿಪಕ್ಷದ ದೃಷ್ಟಿಕೋನವನ್ನು ಅರ್ಥಮಾಡಿಕೊಳ್ಳುವ ಇಚ್ಛೆ ಅಂತಹ ಶ್ರದ್ಧೆಯ ಪೂರ್ವಾಂಗವಾಗಿಯೇ ಉಳಿದಿದೆ. ಪ್ರತಿಕಕ್ಷಿಯ ಮನಸ್ಸನ್ನು ಹೊಕ್ಕು ಆತನ ದೃಷ್ಟಿ ಏನೆಂದು ಅರಿಯಲು ಪ್ರಾಮಾಣಿಕವಾಗಿ ಪ್ರಯತ್ನಿಸಬೇಕು. ಹಿಂಸೆಯ ಬಾಯನ್ನೇ ಅಹಿಂಸೆ ನೇರವಾಗಿ ಹೊಗುತ್ತದೆ ಎಂಬುದರ ಅರ್ಥ ಇದೇ. ಅಂತಹ ಮನೋಧರ್ಮದ ಕವಚ ನಮಗಿದ್ದರೆ ಅಹಿಂಸೆಯ ತತ್ತ್ವಗಳನ್ನು ಪ್ರಸಾರಮಾಡುವ ವಿಶ್ವಾಸ ನಮಗೆ ಬರುತ್ತದೆ. ಅದಿಲ್ಲದೆ ಪುಸ್ತಕದ, ಪತ್ರಿಕೆಗಳ ಪ್ರಚಾರ ವ್ಯರ್ಥ.೨೬

ನನ್ನ ಸಲಹೆಗಳಲ್ಲೆಲ್ಲ ಒಂದು ರಕ್ಷಾಸೂತ್ರ ಇದ್ದೇ ಇರುತ್ತದೆ. ತಮ್ಮ ಬುದ್ಧಿಗೂ ಹೃದಯಕ್ಕೂ ಒಪ್ಪಿಗೆಯಾಗದಿದ್ದರೆ ಯಾರೂ ಅವುಗಳನ್ನು ಅನುಸರಿಸಬೇಕಾಗಿಲ್ಲ.೨೭

ನನ್ನನ್ನು ಮೆಚ್ಚುವವರಿಗೂ ನನ್ನ ಮಿತ್ರರಿಗೂ ಒಂದು ಧೈರ್ಯ ಹೇಳಬಲ್ಲೆ. ಮಹಾತ್ಮಾ ಎಂಬುದನ್ನು ಮರೆತು ನನ್ನನ್ನು ಬರಿಯ ' ಗಾಂಧೀ ' ಎಂದು ಭಾವಿಸುವುದಾದರೆ ಅವರು ನನ್ನ ಮೆಚ್ಚುಗೆಗೆ ಹೆಚ್ಚಾಗಿ ಪಾತ್ರರಾಗುತ್ತಾರೆ. ನಾನು ಯಾವ ತತ್ತ್ವಗಳನ್ನು ಜೀವನದಲ್ಲಿ ಅನುಷ್ಠಾನ ಮಾಡಬೇಕೆಂದು ಕಾರ್ಯಕ್ರಮ ಹಾಕಿಕೊಂಡಿದ್ದೇನೆಯೋ ಅದನ್ನು ತಾವು ತಮ್ಮ ಜೀವನದಲ್ಲಿ ಅನುಷ್ಠಾನಕ್ಕೆ ತರಬೇಕು ; ಇಲ್ಲವೆ ಅದರಲ್ಲಿ ಅವರ ನಂಬುಗೆ ಇರದಿದ್ದ ಪಕ್ಷದಲ್ಲಿ ಅದನ್ನು ಸರ್ವ ರೀತಿಯಿಂದಲೂ ವಿರೋಧಿಸಬೇಕು— ಇದೇ ನನ್ನ ಮಿತ್ರರು ನನಗೆ ತೋರಿಸಬಹುದಾದ ಗೌರವ.೨೮

ಯಾವ ಮಹಾ ಉದ್ಯಮದಲ್ಲಿಯೇ ಆಗಲಿ ನಿರ್ಣಯಕಾರಿಯಾಗುವುದು ಹೋರಾಡುವವರ ಸಂಖ್ಯೆಯಲ್ಲ, ಅವರ ಸತ್ತ್ವ. ಜಗತ್ತಿನ ಮಹಾ

ವ್ಯಕ್ತಿಗಳೆಲ್ಲ ಏಕಾಂಗಿಯಾಗಿ ನಿಂತರು. ಝರತುಷ್ಟ, ಬುದ್ಧ, ಏಸು, ಮಹಮ್ಮದ್ ಈ ಎಲ್ಲ ಮಹಾಪ್ರವಾದಿಗಳನ್ನೂ ಗಮನಿಸಿ. ನಾನಿನ್ನೂ ಹೆಸರಿಸಬಹುದಾದ ಇತರ ಹಲವರಂತೆಯೆ ಅವರೆಲ್ಲರೂ ಏಕಾಂಗಿಯಾಗಿಯೆ ಕೆಲಸ ಮಾಡಿದರು. ಆದರೆ ಅವರಿಗೆ ತಮ್ಮಲ್ಲಿಯೂ ಭಗವಂತನಲ್ಲಿಯೂ ಜೀವಂತಶ್ರದ್ಧೆಯಿತ್ತು; ಭಗವಂತ ತಮ್ಮ ಪಕ್ಕದಲ್ಲಿದ್ದಾನೆಂಬ ವಿಶ್ವಾಸ ಇದ್ದುದರಿಂದ ತಾವು ಏಕಾಕಿಗಳು ಎಂಬ ಭಾವನೆಯೇ ಅವರಿಗೆ ಬರಲಿಲ್ಲ.೨೯

ನನ್ನಲ್ಲಿರುವ ಏನೋ ಒಂದು ವಾಣಿ ನನ್ನ ಸಂಕಟವನ್ನು ಕೂಗಿ ಸಾರುವಂತೆ ನನ್ನನ್ನು ಪ್ರಚೋದಿಸುತ್ತಿದೆ. ಅದು ಯಾವುದೆಂಬುದನ್ನು ನಾನು ಖಚಿತವಾಗಿ ಬಲ್ಲೆ. ನನ್ನನ್ನೆಂದೂ ವಂಚಿಸದ ನನ್ನೊಳಗಿನ ಆ ವಾಣಿ ಹೇಳುತ್ತದೆ: "ನೀನು ಒಬ್ಬೊಂಟಿಗನಾಗಿ ನಿಲ್ಲಬೇಕಾಗಿ ಬಂದರೂ ಸರಿ, ಇಡಿಯ ಜಗತ್ತನ್ನೇ ಎದುರಿಸಿ ನಿಲ್ಲಬೇಕಾಗುತ್ತದೆ.

"ಜಗತ್ತು ನಿನ್ನನ್ನು ತನ್ನ ಕೆಂಗಣ್ಣಿನಿಂದ ದುರದುರನೆ ನೋಡಿದರೂ ಸರಿ, ನೀನು ಅದರ ದೃಷ್ಟಿಗೆ ದೃಷ್ಟಿ ಕೊಟ್ಟು ನಿಲ್ಲಬೇಕಾಗುತ್ತದೆ. ಭೀತಿ ಬೇಡ. ನಿನ್ನ ಹೃದಯದಲ್ಲಿ ನೆಲಸಿ ಹೀಗೆಂದು ಹೇಳುತ್ತಿರುವ ಆ ಅಣುರೂಪಿಯಲ್ಲಿ ನಿನಗೆ ಶ್ರದ್ಧೆಯಿರಲಿ. ಯಾವುದಕ್ಕಾಗಿ ನೀನು ಬದುಕಿದ್ದೀಯೋ, ಯಾವುದಕ್ಕಾಗಿ ನೀನು ಮಡಿಯಬೇಕೋ ಅದಕ್ಕಾಗಿ ಮನೆ ಮಠ ಮಡದಿ ಮಕ್ಕಳು ಸರ್ವಸ್ವವನ್ನೂ ಪರಿತ್ಯಜಿಸು; ಆದರೆ ಅದರ ಸತ್ಯಕ್ಕೆ ಸಾಕ್ಷಿಯಾಗಿ ಬಾಳು."೩೦

# ಯಥಾದರ್ಶನ

ಗಾಂಧೀಜೀ ಏನನ್ನೇ ಬರೆದಿರಲಿ ಅದು ಅಮೂಲ್ಯ ಸಾಹಿತ್ಯವಾಗಿರುವು ದಷ್ಟೇ ಅಲ್ಲದೆ ನಿತ್ಯಸತ್ಯವಾಗಿ ಚಿರನೂತನವಾಗಿದೆ. ಆ ವೈಶಿಷ್ಟ್ಯ ಅವರು ನಡೆಸಿರುವ ಪತ್ರಲೇಖನದಲ್ಲೂ ಸ್ಪಷ್ಟಗೊಂಡಿದೆ. ವ್ಯಕ್ತಿಗಳ ಸಮಸ್ಯೆ ಗಳನ್ನು ಕುರಿತ ಪತ್ರಗಳು, ಸಾಮಾಜಿಕ ಸಮಸ್ಯೆಗಳನ್ನು ಚರ್ಚಿಸಿದ ಪತ್ರಗಳು, ರಾಜಕೀಯ ಸಮಸ್ಯೆಗಳನ್ನು ಕುರಿತು ವಿಚಾರ ನಡೆಸಿದ ಪತ್ರ ಗಳು, ಮಾನವನ ಉದ್ಧಾರ ಕುರಿತು ಚಿಂತನೆ ಮಾಡಿದ ಪತ್ರಗಳು— ಹೀಗೆ ನಾನಾಮುಖವಾಗಿ ಸಮಗ್ರ ದೃಷ್ಟಿಯಿಂದ ಬೆಳೆದಿವೆ ಅವರ ಪತ್ರ ಸಾಹಿತ್ಯ. ಈ ಎಲ್ಲ ವಿಧವಾದ ಪತ್ರಗಳಲ್ಲೂ ಗಾಂಧೀಜೀಗೆ ಇದ್ದ ಗಾಢವಾದ ಮಾನವಪ್ರೇಮ ಎಷ್ಟೆಂಬುದು ವೇದ್ಯವಾಗುತ್ತದೆ.

ಎಲ್ಲ ಪತ್ರಗಳಲ್ಲೂ ಸಹಜತೆ, ಸರಳತೆ ತುಂಬಿದ್ದು ನೇರವಾಗಿ ವಿಷಯ ನಿರೂಪಿಸಿರುವ ಕಲೆ ಮನೋಹರವಾಗಿದೆ. ಅಗತ್ಯವಾದಷ್ಟೇ ಮಾತುಗಳ ಬಳಕೆ, ಬಳಸಿರುವ ಪ್ರತಿ ಮಾತಿಗೂ ಅಗಾಧವಾದ ಮಂತ್ರಶಕ್ತಿ—ಇವು ಕಂಡುಬರುತ್ತವೆ. ಅವರ ಸತ್ಯದ ಗುರಿ, ಅವರು ತೋರಿರುವ ಅಹಿಂಸಾ ಮಾರ್ಗ ಎಂತಹ ಚಿಕ್ಕ ಪತ್ರದಲ್ಲೂ ವಿವೇಚನೆಗೆ ಎಟಕುತ್ತವೆ. ಎಲ್ಲ ಪತ್ರಗಳೂ ಗೌರವಾನ್ವಿತವಾಗಿದ್ದು ಅವುಗಳಲ್ಲಿ ಅಭಿಮಾನ ತುಂಬಿರುತ್ತದೆ. ಅದೆಷ್ಟೇ ಜಟಿಲ ಸಮಸ್ಯೆಗಳನ್ನು ಕುರಿತದ್ದಾಗಿರಲಿ ಅವರ ಪತ್ರಗಳು ಸರಳವಾಗಿದ್ದು ಸೌಜನ್ಯಸೌಹಾರ್ದಗಳಿಂದ ಕೂಡಿರುತ್ತವೆ.

ಕಠಿನ ಪ್ರಸಂಗಗಳಲ್ಲೂ ಸಂಕಟಕರ ಸನ್ನಿವೇಶಗಳಲ್ಲೂ ಕೂಡ ಸಹಿಷ್ಣುತೆ ನಿರ್ಭಯಗಳಿಂದ ಕೂಡಿದ್ದು ಆತ್ಮಶಕ್ತಿಯ ಹಿರಿಮೆಯನ್ನು ಪ್ರಕಟಿಸುತ್ತವೆ. ಕೆರಳಿಸುವಂತಹ ಪ್ರಸಂಗಗಳಲ್ಲಿಯೂ ಸಂಯಮದ ಗಾಂಭೀರ್ಯ ಎದ್ದುಕಾಣುತ್ತದೆ. ಅಲ್ಲದೆ ಮಾತು ಗೌರವಾನ್ವಿತವಾಗಿದ್ದು ಸುಂದರವಾಗಿರುತ್ತದೆ. ಅನ್ಯಾಯ ಎಸಗಿದ ಎದುರಾಳಿಗೆ ಬರೆದಿರುವಾಗಲೂ ಕೂಡ ನುಡಿ ಸೌಜನ್ಯ ತುಂಬಿ ಮರ್ಯಾದೆಯಿಂದ ಭರಿತವಾಗಿರುತ್ತದೆ. ವಿಷಯನಿರೂಪಣೆಯಲ್ಲಿ ಸಮಂಜಸತೆಯ ಸಾಮರಸ್ಯ ಮೂಡಿರುತ್ತದೆ.

ತಮ್ಮ ಕಷ್ಟವನ್ನು ತೋಡಿಕೊಂಡ ವ್ಯಕ್ತಿಗಳಿಗೆ ಬರೆದ ಪತ್ರಗಳು ವಾತ್ಸಲ್ಯದಿಂದ ತುಂಬಿ ಅಭಯಪ್ರದವಾಗಿರುತ್ತವೆ; ಸಂಕಟ ನಿವಾರಣೆಯ ಪ್ರಭಾವ ಅವುಗಳಲ್ಲಿ ತುಂಬಿರುತ್ತದೆ. ಅವರ ತಪ್ಪನ್ನು ಎತ್ತಿ ತೋರಿಸಿ ಜೊತೆಗಾರರಿಗೆ ಬರೆದ ಪತ್ರಗಳಲ್ಲಿ ಆತ್ಮೀಯತೆ–ಸಹಾನುಭೂತಿ ಭಾವಗಳು ತುಂಬಿ ತುಳುಕುತ್ತವೆ.

ಗಾಂಧೀಜೀಯ ಪತ್ರಗುಚ್ಛವೇ ಒಂದು ಮಾರ್ಗದರ್ಶನ ಮಹಾ ಗ್ರಂಥ. ಮಾನವ ಯಾವ ಯಾವ ಸಂದರ್ಭದಲ್ಲಿ ಹೇಗೆ ಹೇಗೆ ನಡೆದುಕೊಳ್ಳ ಬೇಕೆಂಬ ಸಂದೇಶವನ್ನು ಈ ಪತ್ರಗಳಲ್ಲಿ ನಾವು ಕಾಣಬಹುದು. ಸಮಯ ಸಂದರ್ಭಗಳ ವಿವೇಚನೆಯ ಹಿನ್ನೆಲೆಯಲ್ಲಿ ಗಾಂಧೀಜೀಯ ಪತ್ರಗಳನ್ನು ವಿಚಾರಮಾಡಿದಾಗ ಅವುಗಳಲ್ಲಿರುವ ದಿವ್ಯಶಕ್ತಿ, ಸತ್ಯಮಾರ್ಗ, ಅಹಿಂಸಾ ವೃತ್ತಿ ವೇದ್ಯವಾಗುತ್ತದೆ. ಈ ವಿಷಯವನ್ನು ಇಲ್ಲಿ ಎಷ್ಟೇ ಹೇಳಿದರೂ ಗ್ರಂಥರೂಪದಲ್ಲಿ ಮೂರು ಭಾಗಗಳಾಗಿ ಗಾಂಧೀ ಗ್ರಂಥಮಾಲೆಯಲ್ಲಿ ಬರುವ ಪತ್ರಗಳನ್ನು ಓದಿದಾಗ ಲಭಿಸುವ ಅನುಭವಕ್ಕೆ ಅದು ಸಮನಾಗ ಲಾರದು.

ಮೈಸೂರು
೧–೧೧–೬೦

ನ. ಭದ್ರಯ್ಯ
ಸದಸ್ಯ, ಸಂಪಾದಕೀಯ ಮಂಡಲಿ,
ಗಾಂಧೀ ಗ್ರಂಥಮಾಲೆ

# ಸಂಪಾದಕೀಯ

ಇದು — ಪತ್ರಗುಚ್ಛ–೩ — ನಮ್ಮ ಗ್ರಂಥಮಾಲೆಯ ೧೫ನೆಯ ಸಂಪುಟ. ಮೊದಲ ಎರಡು ಭಾಗಗಳು ಆಗಲೇ ಪ್ರಕಟವಾಗಿವೆ. ಈ ಸಂಪುಟದಲ್ಲಿರುವ ಪತ್ರಗಳಲ್ಲಿ ಆಶ್ರಮದ ಮಕ್ಕಳಿಗೆ ಗಾಂಧೀಜೀ ಬರೆದ ಪತ್ರಗಳು ಸೇರಿವೆ. ಅವುಗಳಲ್ಲಿ ಮಕ್ಕಳ ಮನಸ್ಸಿನ ನಿಷ್ಕಲ್ಮಷತೆ ಮತ್ತು ಗಾಂಧೀಜೀಯ ಮಕ್ಕಳಂತಹ ಮನಸ್ಸು ಅಭಿವ್ಯಕ್ತವಾಗಿವೆ. ಈ ಸಂಪುಟ ದಲ್ಲಿ ಸೇರಿರುವ ಮತ್ತೊಂದು ಪತ್ರಸಂಗ್ರಹ ಎಂದರೆ ಗಾಂಧೀಜೀ ತಮ್ಮ ಆಂಗ್ಲ ಅನುಯಾಯಿನಿಯಾದ ಮೀರಾಗೆ ಬರೆದದ್ದು ಮತ್ತು ಡೆನ್ಮಾರ್ಕಿನ ತರುಣಿ ಎಸ್ತರ್ ಫೀರಿಂಗ್‌ಗೆ ಬರೆದದ್ದು. ಫೀರಿಂಗ್ ಸಾಬರಮತಿ ಆಶ್ರಮ ದಲ್ಲಿ ಗಾಂಧೀಜೀಯ ಪ್ರಭಾವಕ್ಕೆ ಒಳಗಾಗಿ ಬಾಲಕಿಯರ ಶಿಕ್ಷಣಕ್ಕೆ ತನ್ನ ಬದುಕನ್ನು ಮೀಸಲಾಗಿ ಇಟ್ಟವಳು. ಆಕೆಗೆ ಬರೆದ ಪತ್ರಗಳಲ್ಲೆಲ್ಲಾ ಗಾಂಧೀಜೀ ಆಕೆಯನ್ನು 'ನನ್ನ ಪ್ರಿಯ ಮಗು' ಎಂದು ಸಂಬೋಧಿಸಿ ದಾರೆ. ಇದರಲ್ಲಿ ಆಕೆಯ ವಿಷಯದಲ್ಲಿ ಗಾಂಧೀಜೀಗೆ ಇದ್ದ ವಾತ್ಸಲ್ಯ ಭಾವವನ್ನು ಸೂಚಿಸುತ್ತದೆ. ಕೊನೆಗೆ ಈ ಸಂಪುಟದಲ್ಲಿ ಬಾಪೂಜೀ ತಮ್ಮ ಆಜೀವ ಸಂಗಾತಿಯಾಗಿದ್ದ 'ಬಾ' ಅವರಿಗೆ ಬರೆದ ಪತ್ರಗಳಿವೆ. ಬಾಪೂ ಮತ್ತು ಬಾ ಅವರಿಗೆ ಇದ್ದ ಮಧುರ ಮತ್ತು ಪವಿತ್ರ ಸಂಬಂಧ ಪ್ರತಿಯೊಂದು ಪತ್ರದಲ್ಲಿಯೂ ಪ್ರಕಾಶಗೊಂಡಿದೆ.

ಬಾಪೂಜೀ ಬಾ ಅವರಿಗೆ ಬರೆದ ಪತ್ರಗಳನ್ನು ಶ್ರೀ ಸಿದ್ಧವನಹಳ್ಳಿ ಕೃಷ್ಣಶರ್ಮರು ಅನುವಾದ ಮಾಡಿದಾರೆ. ಮತ್ತಿತರ ಪತ್ರಗಳನ್ನು ಗಾಂಧೀ ಗ್ರಂಥಮಾಲೆಯ ಸಹಸಂಪಾದಕರಾದ ಶ್ರೀ ಜಿ. ವಿ. ನಾರಾಯಣ ಮೂರ್ತಿ ಅವರು ಅನುವಾದ ಮಾಡಿದಾರೆ.

ಮುದ್ರಣಕಾರ್ಯ ಉಷಾ ಪ್ರೆಸ್‌ನವರಿಂದ ಅಂದವಾಗಿ ಮಾಡಲ್ಪಟ್ಟಿದೆ. ಚಿತ್ರಗಳನ್ನು ಶ್ರೀಮತಿ ಮುರಾರ್ಜಿ ಸಂಗ್ರಹದಿಂದ ಅವರ ಅನುಮತಿ ಪಡೆದು ತೆಗೆದುಕೊಳ್ಳಲಾಗಿದೆ. ಪಡಿಯಚ್ಚುಗಳನ್ನು ವೆಸ್ಲಿ ಪ್ರೆಸ್‌ನವರು ಮಾಡಿಕೊಟ್ಟಿದಾರೆ. ಇವರೆಲ್ಲರಿಗೂ ಸಂಪಾದಕೀಯ ಮಂಡಲಿ ಚಿರಋಣಿ.

ಮೈಸೂರು
೧೪–೧೧–೧೯೬೧

ಪ್ರಧಾನ ಸಂಪಾದಕ
ಗಾಂಧೀ ಗ್ರಂಥಮಾಲೆ

# ಪರಿವಿಡಿ

# ಚಿತ್ರಗಳ ಪಟ್ಟಿ

# ಪತ್ರಗುಚ್ಛ – ೩

## ೧. ಆಶ್ರಮದ ಮಕ್ಕಳಿಗೆ

(ಗಾಂಧೀಜೀ ದಕ್ಷಿಣ ಆಫ್ರಿಕಾದಿಂದ ಭಾರತಕ್ಕೆ ಹಿಂದಿರುಗಿ ಬಂದಮೇಲೆ ೧೯೧೫ ಮೇ ೨೫ರಂದು ಅಹಮದಾಬಾದಿನ ಬಳಿ ಸಾಬರಮತಿಯಲ್ಲಿ ಸತ್ಯಾಗ್ರಹ ಆಶ್ರಮವನ್ನು ಸ್ಥಾಪಿಸಿದರು. ಅವರು ಭಾರತದಲ್ಲಿ ಸ್ಥಾಪಿಸಿದ ಮೊದಲನೆಯ ಆಶ್ರಮವಿದು. ಈ ಆಶ್ರಮದ ಮಕ್ಕಳಿಗೆ ಕಾಲಕಾಲಕ್ಕೆ ಬರೆದ ಕೆಲವು ಪತ್ರಗಳನ್ನು ಅನುವಾದಿಸಿ ಇಲ್ಲಿ ಕೊಡಲಾಗಿದೆ. ಶ್ರೀ ವಾಲ್‌ಜಿ ಗೋವಿಂದಜೀ ದೇಸಾಯಿಯವರು ಸಂಕಲನಮಾಡಿರುವ Selected Letters—First Series 'ಆರಿಸಿದ ಪತ್ರಗಳು—ಮೊದಲನೆಯ ತಂಡ'ದಿಂದ ಇವುಗಳನ್ನು ತೆಗೆದುಕೊಳ್ಳಲಾಗಿದೆ.)

ಹರಿದ್ವಾರ
ಫಾಲ್ಗುಣ ಶುದ್ಧ ತೃತೀಯಾ, ಸೋಮವಾರ

ಬಾಲಕಬಾಲಕಿಯರೇ,

ಮಕ್ಕಳು ಸಹಜವಾಗಿಯೇ ಕಾಪಟ್ಯವನ್ನು ಅರಿಯದವರು, ಪ್ರೀತಿಯುಳ್ಳವರು ಮತ್ತು ಸದ್ಭಾವನೆಯುಳ್ಳವರು. ಅವರ ವಯಸ್ಸು ಹೆಚ್ಚುತ್ತ ಹೋದಂತೆ ಮಾತ್ರ ಕೆಟ್ಟತನ ಬರುತ್ತದೆ. ಅವರ ಚೇಷ್ಟೆಯೂ ಕಳಂಕರಹಿತವಾಗಿರುತ್ತದೆ. ಇದು ನಿಮಗೆ ಅನ್ವಯಿಸುವುದಾದರೆ, ನೀವು ಒಬ್ಬರಿಗೊಬ್ಬರು ನೆರವಾಗಬೇಕು; ಒಬ್ಬರನ್ನೊಬ್ಬರು ಅವನತಿಯಿಂದ ರಕ್ಷಿಸುತ್ತಾ ಹೆಚ್ಚು ಹೆಚ್ಚು ಮೇಲ್ಮೆಯನ್ನು ಪಡೆಯಲು ಯತ್ನಿಸಬೇಕು. ನೀವು ಒಬ್ಬರನ್ನೊಬ್ಬರು ವೀಕ್ಷಿಸುತ್ತಾ ಅವಶ್ಯ ಕಂಡುಬಂದಲ್ಲಿ ಎಚ್ಚರಿಕೆ ಕೊಡಬೇಕು. ಈ ವೀಕ್ಷಣೆ ಪೋಲೀಸಿನವರ ವೀಕ್ಷಣೆಯಂತಾಗದೆ ದೇವರ ವೀಕ್ಷಣೆಯಂತೆ ಇರಬೇಕು. ದೇವರು ನಮ್ಮೆಲ್ಲರನ್ನೂ ವೀಕ್ಷಿಸುತ್ತಾನೆ; ದಂಡಿಸುವ ದೃಷ್ಟಿಯಿಂದಲ್ಲ, ಪರಿಶುದ್ಧರನ್ನಾಗಿ ಮಾಡುವ ದೃಷ್ಟಿಯಿಂದ. ನಿಮ್ಮ ವೀಕ್ಷಣೆ ಕೂಡ ಇದೇ ಸ್ವಭಾವದಿಂದ ಕೂಡಿರಬೇಕು. ಇತರರಿಗೆ ತಿಳಿವಿಲ್ಲದುದನ್ನು ನೀವು ಕಲಿಸಬೇಕು. ಯಾರಾದರೂ ಅಸತ್ಯವಾಡಿದರೆ ಅವರನ್ನು ಪ್ರೀತಿ

ಮಾರ್ಗದಿಂದ ಸುಧಾರಿಸಬೇಕು. ನೀವು ಇತ್ತ ಭಾಷೆಯಂತೆ ನಡೆಯಲು ನೆನಪಿರಲಿ.

ನೀವೆಲ್ಲ ಗೀತೆಯ ವಿದ್ಯಾರ್ಥಿಗಳು. ಪ್ರತಿದಿನವೂ ಬೆಳಗಿನ ಪ್ರಾರ್ಥನೆಯಲ್ಲಿ ಅದರ ಒಂದು ಭಾಗವನ್ನು ಪಠಿಸುತ್ತೀರಿ. ನನಗೆ ಅನಾರೋಗ್ಯವಾಗಿದೆಯೆಂದು ಕೇಳಿ ನಿಮ್ಮ ಮನಸ್ಸು ಚಿಂತೆಗೊಳಗಾದರೆ, ಅದರಿಂದ ಪಾರಾಗಲು ನೀವು ಗೀತೆಯನ್ನೇ ಆಶ್ರಯಿಸಬೇಕು. ನಾನು ಗೀತೆಯ ಅಧ್ಯಾಯವನ್ನು ಭಾಷಾಂತರಿಸುತ್ತಿದ್ದಾಗ ಕಾಯಿಲೆಯಾಯಿತು. ಅದು ಬೋಧಿಸುವ ಪಾಠವನ್ನು ನೆನಪು ಮಾಡಿಕೊಂಡು ಹರ್ಷಚಿತ್ತನಾದೆ. ನೀವೂ ಇದೇ ರೀತಿಯಲ್ಲಿ ಹರ್ಷಚಿತ್ತರಾಗಬೇಕು. ಈ ದೇಹ, ಕೆಟ್ಟ ಕರ್ಮಗಳ ದೆಸೆಯಿಂದ ನೋವನ್ನು ಅನುಭವಿಸಲೇಬೇಕು. ನಾವು ಹುಟ್ಟಿದ ಮೇಲೆ ಕೊನೆಗೆ ಸಾವಿಗೆ ಈಡಾಗಬೇಕಾದಂತೆ ಇನ್ನೊಮ್ಮೆ ಹುಟ್ಟುವುದಕ್ಕಾಗಿಯೇ ಸಾಯುತ್ತೇವೆ. ಆದುದರಿಂದ ಈ ಬಾಳು ನಲವಿಗೆ ಆಸ್ಪದವಲ್ಲ ಅಥವಾ ಸಾವು ದುಃಖಕ್ಕೆ ಆಸ್ಪದವಲ್ಲ. ಆದರೆ ಒಂದು ವಿಷಯವಂತೂ ಆವಶ್ಯಕ. ನಮ್ಮ ಬಾಳಿನ ಕರ್ತವ್ಯವೇನೆಂಬುದನ್ನು ನಾವು ಸ್ಥಿರಪಡಿಸಿಕೊಂಡು ಸಾವು ಬರುವವರೆಗೂ ಅದನ್ನು ಮಾಡುತ್ತಲೇ ಸಾಗಬೇಕು. ನಂಬಿಕೆಯಿಂದಾಗಲಿ ದೃಢನಿಶ್ಚಯದಿಂದಾಗಲಿ ನಿಮ್ಮ ಕರ್ತವ್ಯವೇನೆಂಬುದನ್ನು ನೀವು ಬಲ್ಲಿರಿ. ಅದನ್ನು ಆಚರಿಸುವುದರಲ್ಲಿ ಎಂದಿಗೂ ಅಸಡ್ಡೆ ಇಲ್ಲದಂತೆ ನೋಡಿಕೊಳ್ಳಿ. ಹೀಗೆ ನೀವು ಕರ್ತವ್ಯಪರಾಯಣರಾಗಿದ್ದರೆ, ನಾನು ಮರ್ತ್ಯಲೋಕವನ್ನು ತ್ಯಜಿಸಿದೆನೆಂಬ ವಾರ್ತೆ ಕೇಳಿದರೂ, ನಿಮ್ಮ ರೂಢಿಯ ಚಿಣ್ಣಿಕೋಲಾಟದಲ್ಲೂ ರಾಸನೃತ್ಯದಲ್ಲೂ ಮಗ್ನರಾಗಿರುವಿರಿ. ಏನೂ ಸಂಭವಿಸಿಲ್ಲವೆಂಬಂತೆ ನಿಮ್ಮ ಕರ್ತವ್ಯವನ್ನೇ ಆಚರಿಸುತ್ತಾ ನಾನು ಮೃತನಾದೆನೆಂಬ ವಾರ್ತೆಯನ್ನು ಸಟೆ ಎನಿಸೀರಿ. ನಾನು ನಿಮ್ಮಲ್ಲಿ ಭರವಸೆ ಇಟ್ಟುಕೊಂಡಿದೇನೆ.

ಚೈತ್ರ ಕೃಷ್ಣ ನವಮಿ

ನೀವು ಎಂಥ ಒಳ್ಳೆಯ ಸಂಗಾತಿಗಳು! ಕಾಕಾಸಾಹೇಬ್ ನಿಮಗೆ ಪತ್ರ ಬರೆಯುತ್ತಿದ್ದರೂ ನೀವು ಉತ್ತರ ನೀಡುವ ವಿರಾಮವನ್ನೇ ಹೊಂದಿರ

ಲಿಲ್ಲವೆಂದು ದೂರಿಟ್ಟಿದಾರೆ. ಈಗಲಾದರೂ ಪರಿಸ್ಥಿತಿ ಉತ್ತಮವೆ? ನೀವು ಪ್ರತಿಯಾಗಿ ಏನನ್ನೂ ಮಾಡದೆ ಇತರರು ನಿಮಗೆ ಬರೆಯುತ್ತಿರಬೇಕೆಂದು ನೀವು ನಿರೀಕ್ಷಿಸಬಹುದೆ? ಗೀತೆ ಹೇಳುವ 'ಪರಸ್ಪರಂ ಭಾವಯಂತಃ' ಎಂಬ ವಾಕ್ಯವನ್ನು ಸ್ಮೃತಿಯಲ್ಲಿಟ್ಟುಕೊಳ್ಳಿ. ಶ್ರೇಯಸ್ಸು ದೇವತೆಗಳು–ಮಾನವರ ನಡುವೆ ಮಾತ್ರ ಪರಸ್ಪರವಿರಬೇಕೆಂಬುದಷ್ಟೆ ಅಲ್ಲ; ಅದು ಮಾನವರ ನಡುವೆಯೂ ಗುರು–ಶಿಷ್ಯರ ನಡುವೆಯೂ ಗೆಳೆಯರ ನಡುವೆಯೂ ಇರಬೇಕು. ಯಾರು ಕೇವಲ ಸ್ವೀಕಾರವನ್ನೇ ಮಾಡಿ ಏನನ್ನೂ ನೀಡುವುದಿಲ್ಲವೊ ಆತನು ಅಸ್ತೇಯವ್ರತ (ಅಚೌರ್ಯ) ಭಂಗಮಾಡಿದ ದೋಷಕ್ಕೆ ಗುರಿಯಾಗುತ್ತಾನೆ. ಸತ್ಯ, ಅಹಿಂಸೆ ಮೊದಲಾದ ಯಮಗಳು ಎಲ್ಲ ವಿದ್ಯಾರ್ಥಿಗಳಿಗೂ ನಿರ್ಬಂಧ ಕರ್ತವ್ಯಗಳು; ಇವುಗಳ ಅನುಷ್ಠಾನ ಮಾಡದವನು ವಿದ್ಯಾರ್ಜನೆಗೇ ಅರ್ಹನಲ್ಲ.

ನಾನು ನಲಿವಿನಿಂದ ಗಂಭೀರತೆಗೆ ಏರಿದೆನೇನೋ ಎಂದು ಭಾಸವಾಗುತ್ತಿದೆ. ಆದರೂ ಚಿಂತಿಸಬೇಡಿ. ವಿನೋದದೊಂದಿಗೆ ಬೋಧನೆಯನ್ನೂ ಜೊತೆಗೂಡಿಸುವುದರ ವಿರೋಧವಾಗಿ ಯಾವ ನಿಯಮವೂ ಇಲ್ಲ.

ನಂದೀ*

ನಿಮ್ಮ ಕಾರ್ಯದರ್ಶಿ† ಈ ಸಲವಾದರೂ ನನಗೆ ಉತ್ತರ ಬರೆದು ಗೌರವಿಸಿದಾನೆ.

ಈಗ ನೀವು ಪಠ್ಯಪುಸ್ತಕವಾಗಿ ಓದುತ್ತಿರುವ ಗ್ರಂಥದಿಂದ ಏನನ್ನು ತಿಳಿದುಕೊಂಡಿದೀರಿ? ನಿಮ್ಮಲ್ಲಿ ಒಬ್ಬೊಬ್ಬರೂ ಪರಸ್ಪರ ವಿಚಾರಿಸದೆ ಒಳ್ಳೆಯ ಕಾಗದದ ಮೇಲೆ ಸ್ಫುಟವಾದ ಅಕ್ಷರದಲ್ಲಿ ಬರೆದರೆ ನನಗೆ ಬಹಳ ಹರ್ಷವಾದೀತು. ಅದು ನಿಮ್ಮ ಪರೀಕ್ಷೆಯೂ ಸಹ.

---

* ಗಾಂಧೀಜೀ ನಂದೀ ಬೆಟ್ಟಕ್ಕೆ (ಕೋಲಾರ ಜಿಲ್ಲೆ) ಬಂದಿದ್ದರು.

† ಬಾಲಕಬಾಲಕಿಯರ ಸಂಘದ (ಆಶ್ರಮ) ಕಾರ್ಯದರ್ಶಿ ಇರಬೇಕು.

ವೈಶಾಖ ಪೂರ್ಣಿಮಾ

ನೀನು* ಗೂಡಿನಿಂದ ಹಾರಿಹೋಗಿದ್ದೀಯೆ. ಆದುದರಿಂದ ನಿಜವಾಗಿ ನಾನು ನಿನಗೆ ಬರೆಯಲೇಬಾರದು. ಆದರೂ ಇದನ್ನು ಬರೆಯುತ್ತಿರುವ ನನ್ನ ಉದ್ದೇಶವಾದರೂ ಇಷ್ಟೆ ಎಂದು ತಿಳಿಸಬಯಸುತ್ತೇನೆ. ನೀನು ಎಲ್ಲಿಗೆ ಬೇಕಾದರೂ ಹಾರಿಹೋಗು; ಆದರೂ ನಿನ್ನನ್ನು ನಾನು ಜ್ಞಾಪಿಸಿ ಕೊಳ್ಳುತ್ತೇನೆ, ನನ್ನ ದೃಷ್ಟಿಯಿಂದಲೇ ನಿನ್ನನ್ನು ಹಿಂಬಾಲಿಸುತ್ತೇನೆ.

ನಂದೀ

ವೈಶಾಖ ಕೃಷ್ಣ ತ್ರಯೋದಶಿ

ಕಾಂತಿ ನಿಮ್ಮೊಡನೆ ಇಲ್ಲದಿರುವುದು ನಿಜವೆ. ಆದರೆ ನೀವು ಒಂದು ಸಂಘವನ್ನು ಸ್ಥಾಪಿಸಿ ವ್ಯವಸ್ಥೆಯನ್ನು ಮಾಡಿಕೊಂಡಿದ್ದೀರಿ. ಸಂಘದಿಂದ ಒಂದು ಅನುಕೂಲವುಂಟು. ಅದರ ಸಂಖ್ಯೆ ಏರಲಿ ಇಳಿಯಲಿ, ಅದಂತೂ ಇದ್ದೇ ಇರುತ್ತದೆ. ಮಹಾಜನ, ಪಂಚಿ, ರಾಷ್ಟ್ರ, ಸಮುದಾಯ, ಸಂಘ— ಇವು ಎಂದಿಗೂ ಅಳಿಯುವು. ಇಂದು ನಮಗೆ ಗೊತ್ತಿರುವ ಸದಸ್ಯರೆಲ್ಲ ಕಾಲವಾದರೂ ಸಂಘ ಇದ್ದೇ ಇರುತ್ತದೆ. ದೇಶದಲ್ಲಿ ಇಂಥ ಅನೇಕ ಸಂಘಗಳು ಇಂದಿಗೂ ಇವೆ. ನಿಮ್ಮ ಪುಟ್ಟ ಸಂಘವೂ ಅಂಥದಾಗಬೇಕು. ರಾಜ ಕಾಲವಾದರೂ ಪ್ರಭುತ್ವ ಎಂದಿಗೂ ಅಳಿಯದು. ಅದು ಚಿರಂಜೀವಿ. ಫ್ರಾನ್ಸ್ ದೇಶದಲ್ಲಿ ರಾಜ ಕಾಲವಾದಾಗ 'ರಾಜ ಕಾಲವಾದರು, ಅವರು ಚಿರಕಾಲ ಬಾಳಲಿ' ಎಂದು ಹೇಳುವ ಪದ್ಧತಿಯಿತ್ತು. ರಾಜಸಿಂಹಾಸನ ಎಂದಿಗೂ ಶೂನ್ಯವಾಗಿರುವುದಿಲ್ಲವೆಂದು ಇದರ ಅರ್ಥ. ನಿಮ್ಮ ಸಂಘಕ್ಕೂ ಇದೇ ಅನ್ವಯಿಸಬೇಕು. ನಿಮಗೆ ವಿರಾಮ ದಿವಸಗಳಿದ್ದರೂ ಪ್ರತಿವಾರವೂ ನನಗೆ ಸಾಧ್ಯವಾದಷ್ಟು ಬರೆಯುತ್ತಲೇ ಇದ್ದೇನೆ. ನೀವೂ ಈ ಅಭ್ಯಾಸ ವನ್ನು ಮಾಡಬೇಕೆಂಬುದೇ ನನ್ನ ಉದ್ದೇಶ. ವಿರಾಮದ ದಿವಸಗಳಲ್ಲಿ ನಾನು ಬರೆದ ಎಲ್ಲ ಪತ್ರಗಳಿಗೂ ನೀವೀಗ ಉತ್ತರ ಕೊಡಬೇಕು.

* * * *

* ಆಶ್ರಮವನ್ನು ಬಿಟ್ಟುಹೋದ ಯಾರೋ ವಿದ್ಯಾರ್ಥಿಯೋ ವಿದ್ಯಾರ್ಥಿ-ನಿಯೋ ಇರಬೇಕು.

ನನ್ನ ಮೈಸೂರಿನ ಪ್ರವಾಸದ ವೇಳೆಯಲ್ಲಿ ನಿಮ್ಮನ್ನೆಲ್ಲ ನಾನು ಬಹಳ ಜ್ಞಾಪಿಸಿಕೊಂಡೆ; ಏಕೆಂದರೆ, ನಾನು ನೋಡಲು ಸಾಧ್ಯವಾದುದಕ್ಕಿಂತಲೂ ಎಷ್ಟೋ ಹೆಚ್ಚು ವಿಷಯಗಳನ್ನು ನೀವು ನೋಡಲು ಸಾಧ್ಯವಾಗುತ್ತಿತ್ತು. ನಾನು ಪ್ರೇಕ್ಷಣೀಯ ಸ್ಥಳಗಳನ್ನು ನೋಡಬೇಕೆಂಬ ನನ್ನ ಕಾಲ ಆಗಿ ಹೋಯಿತು. ಈಗ ನಾನು ಕೈಗೊಂಡಿರುವ ಕೆಲಸಗಳನ್ನು ಮಾಡುತ್ತಲೇ ನಾನಿನ್ನು ಜೀವಿಸಬೇಕು. ಬೇರೆ ಯಾವುದಕ್ಕಾದರೂ ನನ್ನ ಕಿಂಚಿತ್ ಸಮಯವನ್ನು ಉಪಯೋಗಿಸಿದರೂ ಅದು ಪಾಪವೆನಿಸೀತು. ಮೈಸೂರಿನ ಪ್ರಕೃತಿಸೌಂದರ್ಯ, ವಿವಿಧ ಸಂಸ್ಥೆಗಳು, ಉಪವನಗಳು, ಸಂಗೀತ ಮತ್ತು ವರ್ಣಚಿತ್ರಗಳು—ಇವುಗಳನ್ನೆಲ್ಲ ನೀವು ನೋಡಬೇಕು. ಆದರೆ ನಾವು ಅಸಹಾಯಕರು. ನಾವು ಮಾಡಬೇಕೆಂದು ಅಪೇಕ್ಷಿಸಿದುದನ್ನೆಲ್ಲ ಮಾಡಲು ಅಸಾಧ್ಯವೇ ಸರಿ. ನಮ್ಮ ಇಚ್ಛೆಯಂತೆ ಎಲ್ಲ ನಡೆಯುವಂತಿದ್ದರೆ ಅದೆಷ್ಟು ಪ್ರಪಂಚಗಳ ಸೃಷ್ಟಿ-ಲಯ ಆಗುತ್ತಿತ್ತೋ ದೇವರೇ ಬಲ್ಲ! ಆದುದರಿಂದ ಸಂತುಷ್ಟಿಯೇ ಮಹಾಭಾಗ್ಯ.

*　　　*　　　*　　　*

ನಿಮ್ಮಿಂದ ಕಾಲಕಾಲಕ್ಕೆ ಸರಿಯಾಗಿ ನನಗೆ ಏಕೆ ಪತ್ರಗಳು ತಲಪುತ್ತಿಲ್ಲವೆಂಬುದು ಅರಿವಾಯಿತು. ಈ ದಿನಗಳಲ್ಲಿ ನೀವು ಎಲ್ಲರೂ ಬಹಳ ಕಾರ್ಯಮಗ್ನರಾಗಿದ್ದೀರಿ. ನಿಮ್ಮ ಕಾರ್ಯಗಳು ನಿಜವಾದ ಸೇವೆಯಾಗಿದ್ದರೆ, ನೀವು ಪತ್ರ ಬರೆದಂತೆಯೇ ಎಂದು ನಾನು ಭಾವಿಸುತ್ತೇನೆ. ಮನಸ್ಸಿಲ್ಲದೆ ಶರೀರ ಮಾತ್ರ ದುಡಿಯುತ್ತಿದ್ದರೆ ನಮ್ಮ ಸೇವೆ ನಿಷ್ಫಲ. ಸೇವಾಕಾರ್ಯದಲ್ಲಿ ವಿಷಯಲೋಲುಪತೆಗೆ ಅವಕಾಶವೇ ಇಲ್ಲ. ನಿಮ್ಮ ಸೇವೆಯು ಪರಿಮಳ ಸುತ್ತ ಹರಡುವುದೆಂದು ನಾನು ನಂಬಿದ್ದೇನೆ. ಸೇವಕ ನಾಯಕನಾಗಲು ಬೇಡುವುದಿಲ್ಲ; ಅವನು ಇತರರಿಂದ ಸೇವೆಯನ್ನು ನಿರೀಕ್ಷಿಸುವುದಿಲ್ಲ; ಅವನು ದೊರಕಿದುದರಿಂದಲೇ ತೃಪ್ತನಾಗಿರುತ್ತಾನೆ, ಯಾವ ಬಗೆಯಲ್ಲಿಯೂ ದೂರಿಡುವುದಿಲ್ಲ. ಸೇವೆಯೇ ಅವನ ಹಕ್ಕುಬಾಧ್ಯತೆ. ಇದಕ್ಕೆ ಪ್ರತಿಫಲವಾಗಿ ಅನ್ನ ಅಥವಾ ಮನೆ ದೊರಕದಿದ್ದರೆ ತಾನೆ ಏನು?—ಬವಣೆಭರಿತ ಕ್ಷೇತ್ರಗಳಲ್ಲಿಯೂ ಅವಿಚಲ ವ್ಯಕ್ತಿಗಳಿರುವುದು ಭಗವಂತನ ದಯೆ. ಎಲ್ಲರೂ ಬವಣೆಯಿಂದ ಕೂಡಿರುವಾಗ ದಾದಿಯರಿಗೆ ಸೇವೆಸಲ್ಲಿಸ

ಬಲ್ಲವರು ಯಾರು? ಆದ್ದರಿಂದ ಸೇವೆಗಾಗಿ ಸನ್ನದ್ಧರಾದ ನಾವು ಆತ್ಮ ರಕ್ಷಣೆಗೆ ಸಿದ್ಧರಾಗಿರಬೇಕು. ನಾವು ಇತರರ ಆಶ್ರಯವನ್ನು ನಂಬಿರ ಬಾರದು, ಆದರೆ ಅವರಿಂದ ದೊರಕಬಹುದಾದ ನೆರವಿಗಾಗಿ ಅವರಿಗೆ ಕೃತಜ್ಞತೆ ಸಲಿಸಬೇಕು.

* * * *

ಈಗ ಮಾತ್ರ ನಿಮ್ಮ ತರಗತಿಗಳು ಸರಿಯಾದ ಮಾರ್ಗದಲ್ಲಿ ನಡೆಯುತ್ತಿವೆಯೆಂದು ಹೇಳಬಲ್ಲೆ. ಏಕೆಂದರೆ. ಸೇವೆಯಲ್ಲಿ ಇದು ನಿಮಗೆ ಒಂದು ಪ್ರತ್ಯಕ್ಷ ಪಾಠ. ನಮ್ಮ ಸೇವಾಬುದ್ಧಿಯನ್ನು ಜಾಗೃತಗೊಳಿಸುವುದು ಮಾತ್ರ ಅಕ್ಷರಶಿಕ್ಷಣದ ಉದ್ದೇಶ. ಈಗ ನಿಮಗೆ ಸೇವೆಸಲ್ಲಿಸಲು ಅವಕಾಶ ದೊರೆತಿರುವುದರಿಂದ ಅದನ್ನು ಹೃತ್ಪೂರ್ವಕವಾಗಿ ಮಾಡಿ; ಅದರಿಂದ ಚೆನ್ನಾಗಿ ಆನಂದ ಅನುಭವಿಸಲು ಕಲಿಯಿರಿ. ನೀವು ಸೇವೆಸಲ್ಲಿಸುತ್ತಿರುವಾಗ 'ನಾನು ಇದನ್ನು ಮಾಡುತ್ತಿರುವೆ' ಎಂಬ ಅಹಂಭಾವಕ್ಕೆ ವಶರಾಗಬೇಡಿ. ಅಹಂಭಾವಭರಿತ ಸೇವೆ ಬೆಲೆಯಿಲ್ಲದಂತಾಗುತ್ತದೆ. ನಾವು ಏನನ್ನೂ ಮಾಡುವುದಿಲ್ಲ, ಮಾಡಲೂ ಶಕ್ತರಲ್ಲ. ಇದು ಗೀತಾಬೋಧೆ. ನಾವು ಭಗವಂತನ ಸಂಕಲ್ಪಕ್ಕೆ ಸಾಧನಗಳು ಮಾತ್ರ. ಒಬ್ಬ ಮಾನವ ವ್ಯಕ್ತಿಗೂ ಒಂದು ಗಡಿಯಾರಕ್ಕೂ ಇರುವ ವ್ಯತ್ಯಾಸವೇನು? ಗಡಿಯಾರ ತಾನಾಗಿಯೇ ಕೆಲಸ ಮಾಡಲಾರದು; ಮಾನವ ಅದು ನಡೆಯುವಂತೆ ಮಾಡುತ್ತಾನೆ. ಇದೇ ರೀತಿ ನಾವೂ ಚಲಿಸಲಾರೆವು, ನಾವಾಗಿಯೇ ಕ್ರಿಯೆ ನಡೆಸಲಾರೆವು; ನಮ್ಮನ್ನು ಚಾಲನೆ ಮಾಡುವ ಶಕ್ತಿ ಭಗವಂತ. ಗಡಿಯಾರದ ಸುರುಳಿ ಮುಗಿದ ಕೂಡಲೇ ಅದು ನಿಂತುಹೋಗುತ್ತದೆ; ಇದೇ ರೀತಿ ನಮ್ಮ ಸತ್ತ್ವ ಮುಗಿದ ಕೂಡಲೇ ನಮ್ಮ ಬಂಡಿಯೂ ಪೂರ್ಣ ನಿಲುಗಡೆ ಹೊಂದುತ್ತದೆ. ಅದು ಚಲಿಸುತ್ತಿರುವಾಗ ಒಂದು ಬಗೆಯ ಕ್ರಿಯಾ ಸ್ವಾತಂತ್ರ್ಯ ನಮಗೆ ಕೊಡಲ್ಪಟ್ಟಿದೆಯೆಂದು ನಾವು ಭಾವಿಸುತ್ತೇವೆ. ಆ ಮಹಾಬಡಗಿಯ* ಸಂಕಲ್ಪವನ್ನು ಅರಿತುಕೊಂಡು ಅದನ್ನು ಸಾಧಿಸು ವುದಕ್ಕೆ ಆ ಸ್ವಾತಂತ್ರ್ಯವನ್ನು ಉಪಯೋಗಿಸೋಣ.೧

---

* ಸೃಷ್ಟಿಕರ್ತ

(ಒಬ್ಬ ಆಶ್ರಮದ ಬಾಲಕ—ಶ್ರೀ ಇಂದೂ ಪರೀಖ್—ಈ ಪ್ರಶ್ನೆಯನ್ನು ಕೇಳಿದ: 'ಶ್ರೀಕೃಷ್ಣ ಭೀಷ್ಮನ ಮುಂದೆ ಶಿಖಂಡಿಯನ್ನು ನಿಲ್ಲಿಸಿ ಅವನನ್ನು ಕೊಲ್ಲಿಸಿದ. ಸೂರ್ಯನ ಮುಂದೆ ತನ್ನ ಸುದರ್ಶನ ಚಕ್ರವನ್ನು ಹಿಡಿದು ಅದು ಜಯದ್ರಥನಿಗೆ ಕಾಣದಂತೆ ಮಾಡಿ ಅವನ ವಧೆ ಮಾಡಿಸಿದ. ಈ ಸಂದರ್ಭಗಳಲ್ಲಿ ಅವನ ವರ್ತನೆ ನ್ಯಾಯಯುತವಾಗಿತ್ತೆ? ಅದು ಆ ರೀತಿ ಇಲ್ಲದಿದ್ದರೂ ನಮ್ಮ ಶಾಲೆಯ ರಂಗಮಂಚದಿಂದ ಈ ದೃಶ್ಯಗಳನ್ನು ಅಭಿನಯಿಸಬಹುದೆ?' ಎಂದಿನಂತೆ ಮಕ್ಕಳಿಗೆ ಬರೆಯುವ ೪" ಉದ್ದ, ೨" ಅಗಲ ಕಾಗದದ ಮೇಲೆ ಗಾಂಧೀಜೀ ಅವನಿಗೆ ಈ ಉತ್ತರವಿತ್ತರು:)

ಇದೊಂದು ಅತ್ಯಂತ ಸೊಗಸಾದ ಪ್ರಶ್ನೆ. ಮಹಾಭಾರತವು ಚರಿತ್ರೆಯಲ್ಲ, ಕಾವ್ಯ. ಒಬ್ಬ ಮನುಷ್ಯ ಹಿಂಸಾಪಥ ಹಿಡಿದರೆ ಅಸತ್ಯವೂ ಬಂದೇ ಬರುತ್ತದೆ. ಕೃಷ್ಣನಂಥ ವ್ಯಕ್ತಿಗಳೂ ಇದರಿಂದ ತಪ್ಪಿಸಿಕೊಳ್ಳಲಾರರು. ಇದನ್ನು ತೋರಿಸುವುದೇ ಕವಿಯ ಆಶಯ. ತಪ್ಪುಮಾಡಿದವರು ಯಾರೇ ಆಗಿರಲಿ, ತಪ್ಪು ತಪ್ಪಾಗಿಯೇ ಉಳಿಯುತ್ತದೆ. ಮೇಲೆ ಹೇಳಿದ ಎರಡು ಸಂದರ್ಭಗಳಲ್ಲಿಯೂ ಕೃಷ್ಣ ತಪ್ಪೆಸಗಿದ. ನನ್ನ ನೆನಪು ನಿಜವಾದರೆ—ಇವುಗಳ ಬಗೆಗೆ ವ್ಯಾಸರೂ ಮೆಚ್ಚಿಕೆಯ ಭಾವನೆಯನ್ನು ತೋರಿಸಿಲ್ಲ. ಇಂಥ ವರ್ತನೆ ಅನುಕರಣೀಯವಲ್ಲವೆಂದು ಸ್ಪಷ್ಟಪಡಿಸುವುದಾದರೆ ಆ ದೃಶ್ಯಗಳನ್ನು ಅಭಿನಯಿಸುವುದರಿಂದ ಯಾವ ಕೆಡಕೂ ಇಲ್ಲ.

(ಆಶ್ರಮದ ಕಾರ್ಯದರ್ಶಿ ಶ್ರೀ ನಾರಾಯಣದಾಸರಿಗೆ ಹೀಗೆ ಬರೆದರು:)

ಇಂಥ ದೃಶ್ಯಗಳನ್ನು ಅಭಿನಯಿಸುವ ವಿಷಯದ ಔಚಿತ್ಯದ ಬಗೆಗೆ ನಾನು ಶಂಕೆಯಿಂದ ಕೂಡಿದೇನೆ. ಮಹಾಪುರುಷರೆನ್ನಿಸಿಕೊಂಡಿರುವವರು ಅಯುಕ್ತ ರೀತಿಯಲ್ಲಿ ವರ್ತಿಸಿದಂಥ ದೃಶ್ಯಗಳನ್ನು ಅಭಿನಯಿಸುವುದರಿಂದ ಏನು ಲಾಭ ಬಂದೀತೋ ನಾನರಿಯೆ. ಮಹಾಪುರುಷರೇ ಹೀಗೆ ವರ್ತಿಸಿರುವುದರಿಂದ ನಾವೂ ಅಂತೆಯೇ ಮಾಡಬಹುದೆಂದು ಮಕ್ಕಳು ನೀತಿಯನ್ನು ನಿರ್ಧರಿಸುವುದು ಸಹಜ. ಆದ್ದರಿಂದ ನಮ್ಮ ರಂಗಮಂಚದಿಂದ ಅಭಿನಯಿಸಬಹುದಾದ ನಾಟಕಗಳು ರವೀಂದ್ರನಾಥರ 'ಮುಕ್ತಧಾರ'ವೋ ಅಥವಾ ಮೈಥಿಲೀಶರಣ ಗುಪ್ತರ 'ಅನಘ'ವೋ ಈ ರೀತಿಯಲ್ಲಿರಬೇಕು. ಇವು

ನಿಜವಾಗಿಯೂ ಚೆನ್ನಾಗಿವೆ, ಮಕ್ಕಳಿಗೆ ಪ್ರದರ್ಶಿಸಲು ಯೋಗ್ಯವಾಗಿವೆ. ಇವುಗಳ ಭಾಷೆಯೂ — ಹಿಂದೀ — ಸರಳ, ಮಧುರ. ಕಥಾವಸ್ತುವೂ ಕೊರತೆಯಿಂದ ಕೂಡಿಲ್ಲ.

* * * *

ಹಮ್ಮು ಶೂನ್ಯಭಾವ; ಆತ್ಮಗೌರವ ನಿಜವಾದುದು. ಆತ್ಮಗೌರವಕ್ಕೆ ತನ್ನಿಂದಲೇ ಹೊರತು ಬೇರೆ ಕಡೆಯಿಂದ ಉಪಹತಿ ಬರಲಾರದು; ಹಮ್ಮಿಗೆ ಯಾವಾಗಲೂ ಹೊರಗಿನಿಂದಲೇ ಉಪಹತಿ.

'ದೇವರನ್ನು ಪ್ರತ್ಯಕ್ಷ ದರ್ಶಿಸಬೇಕು' ಎಂಬುದರಲ್ಲಿ 'ಪ್ರತ್ಯಕ್ಷ' (Face to face) ಎಂಬುದನ್ನು ಅಕ್ಷರಶಃ ತೆಗೆದುಕೊಳ್ಳಬಾರದು. ಅದು ಒಂದು ದೃಢಭಾವ ಮಾತ್ರ. ದೇವರು ನಿರಾಕಾರ. ಆದುದರಿಂದ ಅವನು ದಿವ್ಯದೃಷ್ಟಿಗೆ ಮಾತ್ರ ಗೋಚರವಾಗುವನು.

(ಒಬ್ಬ ಪುಟ್ಟ ಬಾಲಿಕೆ ಆಶ್ರಮ ಶಾಲೆಯ ರಂಗಮಂಚದ ಮೇಲೆ ಭಾರತ ಮಾತೆಯ ಪಾತ್ರವನ್ನು ಅಭಿನಯಿಸಿದ್ದಳು. ಆದ್ದರಿಂದ ಭಾರತಮಾತೆಯ ಗುಣ ವಿಶೇಷಗಳನ್ನೇ ಗಳಿಸಿಕೊಳ್ಳಬೇಕೆಂದು ಬಾಪೂ ಅವಳಿಗೆ ಪತ್ರ ಬರೆದರು. ಇದಕ್ಕೆ ಆ ಬಾಲಿಕೆ ಆ ಗುಣಗಳು ಯಾವುವು ಎಂದು ಪ್ರಶ್ನಿಸಿದಳು. ಬಾಪೂ ಹೀಗೆ ಉತ್ತರವಿತ್ತರು:)

ತಾಳ್ಮೆ, ಸಹಿಷ್ಣುತೆ, ಕ್ಷಮೆ, ಧೈರ್ಯ, ಅಹಿಂಸೆ ಮುಂತಾದುವು.

(ಮತ್ತೊಬ್ಬ ಬಾಲಿಕೆ 'ಬಾಪನಾ ರಾಜ್ಯಮಾಂ ಸಮಾಯ, ಮಾನಾ ರೇಂಟಿಯಾ ಮಾಂ ಸಮಾಯ' [ತಂದೆಯ ರಾಜ್ಯದಲ್ಲಿ ಆಶ್ರಯ ದೊರಕದಿರಬಹುದು, ಆದರೆ ತಾಯಿಯ ರಾಟೆಯ ಆಶ್ರಯವನ್ನು ಸದಾ ನೆಚ್ಚಬಹುದು.] ಎಂಬ ಗುಜರಾತೀ ಗಾದೆಯ ಅರ್ಥವನ್ನೂ; ಯಜ್ಞೋಪವೀತವನ್ನು ಧರಿಸುವುದೇತಕ್ಕೆ? ಗೋವನ್ನು ತಾಯಿ ಎಂಬುದಾಗಿ ಪರಿಗಣಿಸುವುದೇತಕ್ಕೆ?—ಎಂಬ ಪ್ರಶ್ನೆಗಳನ್ನೂ ಕೇಳಿದಳು. ಬಾಪೂ ಕೊಟ್ಟ ಉತ್ತರವಿದು:)

ರಾಜ್ಯ ಅನಾಯಕ ಸ್ಥಿತಿಗೆ ಬರಬಹುದು. ಆಗ ಬಡವರಿಗೆ ನೆಲೆ ಇಲ್ಲವಾಗುತ್ತದೆ. ಆದರೆ ರಾಟೆ ಎಂದೂ ಕೊರತೆಯನ್ನು ತರದ ಗೆಳೆಯ. ಬ್ರಾಹ್ಮಣರು ಧರಿಸುವ ಯಜ್ಞೋಪವೀತ, ಜಪಮಣಿ ಮೊದಲಾದವು

ಆತ್ಮಶುದ್ಧಿಗೆ ಸಹಾಯಕವಾಗಬಹುದು. ಆದರೆ ಅವು ಈ ದಿನಗಳಲ್ಲಿ ಹೆಚ್ಚು ಉಪಯುಕ್ತವಿಲ್ಲ. ಗೋ ಮಕ್ಕಳಿಗಷ್ಟೇ ಅಲ್ಲ, ನಮ್ಮೆಲ್ಲರಿಗೂ ತಾಯಿ ಹಾಲನ್ನು ಕೊಡುವಂತೆ ಕೊಡುತ್ತದೆ. ಆದ್ದರಿಂದ ಅದೂ ತಾಯಿಯಂತೆಯೇ ಪರಿಗಣಿಸಲ್ಪಟ್ಟಿದೆ. ಮಕ್ಕಳಿಂದ ತಾಯಿಗೆ ಎಷ್ಟೋ ಸೇವೆಸಲ್ಲುತ್ತದೆ, ಆದರೆ ಗೋವನ್ನು ಕೇಳುವವರಾರು? ಆದ್ದರಿಂದ ಗೋ ತಾಯಿಗಿಂತ ಹೆಚ್ಚು.

('ಸೀತೆ ಅಪಹೃತಳಾದಾಗ ದುಃಖಭರಿತನಾದ ರಾಮ ಅರೆಹುಚ್ಚನಂತಾಗಿರಲು ಸಾಧ್ಯವೇ?'—ಎಂದು ಒಬ್ಬ ಬಾಲಕ ಪ್ರಶ್ನಿಸಿದ್ದ. ಇದಕ್ಕೆ ಬಾಪೂ ಕೊಟ್ಟ ಉತ್ತರ ಹೀಗೆ:)

ರಾಮ ಆ ಸಂದರ್ಭದಲ್ಲಿ ಶೋಕಮಗ್ನನಾಗಿದ್ದನೆಂದು ಯಾರಿಗೆ ಗೊತ್ತು? ನಾವು ರಾಮಾಯಣದಲ್ಲಿ ಓದುವುದು ಕೇವಲ ಕವಿಯ ಕಲ್ಪನೆ. ವಿವೇಕಶಾಲಿಯಾದ ಪುರುಷನಿಗೆ ಇಂಥ ಶೋಕ ಸರಿಯಲ್ಲ ಎಂಬುದು ನಿಸ್ಸಂಶಯವಾದ ವಿಷಯ. ಆದ್ದರಿಂದ ನಮ್ಮ ಕಲ್ಪನೆಯ ರಾಮ ಆ ರೀತಿ ಎಂದಿಗೂ ಅಧೀರನಾಗಲಾರನೆಂದು ನಾವು ಭಾವಿಸಬೇಕು.

(ಸೋಮಾರಿತನದಿಂದ ತನಗೆ ದಿನಚರಿ ಬರೆಯಲು ಸಾಧ್ಯವಾಗಿಲ್ಲವೆಂದು ಒಬ್ಬ ಸೋದರಿ ಬರೆದಳು.)

ಸೋಮಾರಿತನವೊಂದೇ ಕಾರಣವಿರಲಾರದೆಂದೂ, ನಮ್ಮನ್ನು ನಾವೇ ನಿಜಸ್ವರೂಪದಲ್ಲಿ ಚಿತ್ರಿಸಿಕೊಳ್ಳುವುದು ಅಷ್ಟು ಸುಲಭವಲ್ಲವೆಂದೂ ಬಾಪೂ ತಿಳಿಸಿದರು.

(ಆಶ್ರಮದ ಒಂದು ಮಗು ಇಂಗ್ಲೆಂಡನ್ನು ವರ್ಣಿಸಬೇಕೆಂದು ಬಾಪೂವನ್ನು ಕೇಳಿತು. ಬಾಪೂ ಬರೆದುದು ಹೀಗೆ:)

ಲಂಡನ್ ಒಂದು ದೊಡ್ಡ ನಗರ. ಅಲ್ಲಿ ಅನೇಕ ಹೊಗೆಕೊಳವಿಗಳು (Chimneys) ಇವೆ. ಅವು ಎಲ್ಲವನ್ನೂ ಕಪ್ಪಾಗಿ ಮಾಡುತ್ತವೆ. ಅಲ್ಲಿ ಯಾವುದೂ ಬಿಳಿಯಾಗಿ ಉಳಿಯದು. ಸೂರ್ಯದರ್ಶನ ಅಪರೂಪ.

ಆಂಗ್ಲ ಜನರು ನಮಗಿಂತ ಹೆಚ್ಚು ಉದ್ಯೋಗಶೀಲರು. ಇಂಗ್ಲೆಂಡಿನ ರಸ್ತೆಗಳೆಲ್ಲ ಬಹಳ ಚೊಕ್ಕಟವಾಗಿರುತ್ತವೆ.

(ಪಾತ್ರೆಗಳನ್ನೂ ತಟ್ಟೆಗಳನ್ನೂ ತೊಳೆಯುವುದು, ನೈರ್ಮಲ್ಯ ಸೌಕರ್ಯಗಳು —ಹೇಗೆ ಸೇವೆ ಎಂಬುದಾಗಿ ಪರಿಗಣಿಸಲ್ಪಡುವುದು ಎಂಬ ಪ್ರಶ್ನೆಯನ್ನು ಒಂದು ಮಗು ಕೇಳಿತು. ಅದಕ್ಕೆ ಬಾಪೂ ಕೊಟ್ಟ ಉತ್ತರ:)

ಜನರು ಸಾಮಾನ್ಯವಾಗಿ ಈ ಕೆಲಸಗಳನ್ನು ಮಾಡಲು ಇಚ್ಛಿಸುವುದಿಲ್ಲ. ಆದ್ದರಿಂದ ಇವು ಸಮಾಜದ ಕೆಲವು ವರ್ಗಗಳಿಗೆ ನಿರ್ದೇಶಿತ. ಇದು ಕೆಟ್ಟ ವ್ಯವಸ್ಥೆ. ಆದ್ದರಿಂದ ಯಾರು ಇಂಥ ಕೆಲಸವನ್ನು ಮಾನವೀಯಭಾವದಿಂದ ಮಾಡುವರೋ ಅವರು ಉಪಯುಕ್ತ ಸೇವೆಯನ್ನು ಸಲ್ಲಿಸಿದಂತಾಗುತ್ತದೆ.

(ಬಾಪೂ ಸೆರೆಮನೆಯ ಒಂದು ಬೆಕ್ಕಿನಲ್ಲೂ, ಅದರ ಮರಿಗಳ ಮೇಲೂ ಬಹಳ ಆಸಕ್ತಿವಹಿಸಿದ್ದುದನ್ನು ಕಂಡ ಒಬ್ಬ ಹುಡುಗಿ ತಾನೂ ಒಂದು ಬೆಕ್ಕಾಗಿ ಹುಟ್ಟ ಬೇಕಾಗಿತ್ತೆಂದು ಆಶಿಸಿದಳು. ಅವಳಿಗೆ ಬಾಪೂ ಬರೆದದ್ದು ಹೀಗೆ:)

ನಾನು ಬೆಕ್ಕಿನ ಮರಿಗಳನ್ನು ಪ್ರೀತಿಸುವಷ್ಟೇ ಮಕ್ಕಳನ್ನೂ ಪ್ರೀತಿಸುತ್ತೇನೆ. ಆದರೆ ಬೆಕ್ಕು ನಮ್ಮಂತೆ ವಿಚಾರಪರತೆಯಿಂದ ಕೂಡಿಲ್ಲ. ಆದ್ದರಿಂದ ಬೆಕ್ಕಾಗಿ ಜನಿಸುವುದೇನೂ ಒಳ್ಳೆಯದಲ್ಲ.

(ಸಿಟ್ಟು ಬಂದಾಗ ಏನನ್ನು ಮಾಡಬೇಕೆಂದು ಒಬ್ಬ ಹುಡುಗಿ ಪ್ರಶ್ನಿಸಿದಳು.)

ಈ ಪ್ರಶ್ನೆಯನ್ನು ಸರಿಯಾಗಿ ಕೇಳುವ ರೀತಿ ಹೀಗೆ: ಎಂದೂ ಸಿಟ್ಟು ಬರದಿರಬೇಕಾದರೆ ಏನನ್ನು ಮಾಡಬೇಕು—? ಎಲ್ಲರ ವಿಷಯದಲ್ಲಿಯೂ ಔದಾರ್ಯದಿಂದ ಇರಬೇಕು. ನಾವು ಎಲ್ಲರಲ್ಲಿಯೂ ಎಲ್ಲರೂ ನಮ್ಮಲ್ಲಿಯೂ ಇರುವರೆಂಬ ಭಾವ ಹೃದಯಸ್ಥವಾಗಿರಬೇಕು. ಸಾಗರದ ಒಂದೊಂದು ಹನಿಯೂ ಪ್ರತ್ಯೇಕಪ್ರತ್ಯೇಕವಾಗಿದ್ದರೂ ಅವೆಲ್ಲ ಒಟ್ಟು ಕೂಡಿದಾಗಲೇ ಸಾಗರವೆನಿಸುವುದು. ಸಾಗರಸ್ವರೂಪವಾದ ಈ ವಿಶ್ವಕ್ಕೂ ಇದೇ ಅನ್ವಯಿಸುತ್ತದೆ. ಹೀಗಿರುವಾಗ, ಯಾರ ಮೇಲೆ ಯಾರು ತಾನೆ ಕೋಪಮಾಡಿಕೊಳ್ಳಲು ಕಾರಣವಾದರೂ ಎಲ್ಲಿಂದ ಬರಬೇಕು ?

ಮತ್ತೊಬ್ಬ ಹುಡುಗಿಗೆ: ನೀನು ತಪ್ಪು ಮಾಡಿದೆಯೆಂದು ನಿನ್ನ ಹೃದಯ ಹೇಳದಿರುವವರೆಗೂ ನೀನು ಆ ರೀತಿ ಭಾವಿಸಬಾರದು. ನಮಗಿರುವುದೆಲ್ಲ ಅದೊಂದೇ ವಿವೇಚನೆಯ ಆಧಾರ. ಆದ್ದರಿಂದ ನಮ್ಮ ಹೃದಯ ಶುದ್ಧಿಯನ್ನು ಕಾಪಾಡಿಕೊಳ್ಳಲು ನಾವು ಪ್ರಯತ್ನಿಸುತ್ತೇವೆ. ಪಾಪಿಯ ಹೃದಯವು ಅಪರಿಶುದ್ಧವಾಗಿರುವುದರಿಂದ ಅವನು ತನ್ನ ಪಾಪವೇ ಶ್ಲಾಘನೀಯ ಕಾರ್ಯವೆಂದು ಭಾವಿಸುತ್ತಾನೆ. ಅವನಿಗೆ ಜ್ಞಾನೋದಯವಾಗುವವರೆಗೂ ತನ್ನ ದೋಷದಲ್ಲೇ ಪಟ್ಟುಹಿಡಿದು ಇದ್ದಾನು. ಆದ್ದರಿಂದ ನಿನಗೆ ಯಾವುದು ಒಳ್ಳೆಯದೆಂಬುದನ್ನು ಬೇರೆ ಯಾರೂ ತೋರಿಸಲು ಸಾಧ್ಯವಿಲ್ಲ. ನಾವು ಸತ್ಯ–ಅಹಿಂಸಾ ಪಥದಲ್ಲಿ ನಡೆಯುತ್ತಾ ಆತ್ಯಂತಿಕವಾಗಿ ಅದನ್ನು ಅನುಸರಿಸಬೇಕೆಂದು ಮಾತ್ರ ನುಡಿಯಬಲ್ಲೆ.

ಆಶ್ರಮದಲ್ಲಿ ಜಾತಿವ್ಯತ್ಯಾಸಕ್ಕೆ ಎಡೆಯಿಲ್ಲ; ಏಕೆಂದರೆ ಜಾತಿಗೂ ನೈಜಧರ್ಮಭಾವಕ್ಕೂ ಹಿಂದೂ ಧರ್ಮಕ್ಕೂ ಯಾವ ಸಂಬಂಧವೂ ಇಲ್ಲ. ಯಾರೇ ಆಗಲಿ ನಮಗಿಂತ ಮೇಲು ಅಥವಾ ಕೀಳು ಎಂದು ಭಾವಿಸುವುದು ಪಾಪಕರ. ನಾವೆಲ್ಲ ಸಮಾನರು. ಪಾಪಸ್ಪರ್ಶವೇ ನಮ್ಮನ್ನು ಅಪರಿಶುದ್ಧರನ್ನಾಗಿ ಮಾಡುವ ಅಂಶ; ಮಾನವವ್ಯಕ್ತಿಯ ಸ್ಪರ್ಶ ಎಂದಿಗೂ ಹಾಗಾಗಬಾರದು. ಬಾಳನ್ನು ಸೇವೆಗಾಗಿ ನಿವೇದಿಸಿದವನಿಗೆ ಯಾರೂ ಮೇಲೂ ಇಲ್ಲ, ಕೀಳೂ ಇಲ್ಲ. ಈ ಮೇಲು–ಕೀಳು ಎಂಬ ಭಾವನೆ ಹಿಂದೂ ಧರ್ಮಕ್ಕೊಂದು ಕಳಂಕ. ಇದನ್ನು ನಾವು ನಿರ್ನಾಮಗೊಳಿಸಬೇಕು.

ಸ್ವಧರ್ಮ, ಕುಟುಂಬಧರ್ಮ, ದೇಶಧರ್ಮ, ವಿಶ್ವಧರ್ಮ—ಇವು ಪರಸ್ಪರ ಪ್ರತ್ಯೇಕವಾಗಿಲ್ಲ. ಸ್ವಧರ್ಮಕ್ಕೆ ಅಹಿತವೆಸಗಿ ಅಥವಾ ಕುಟುಂಬಧರ್ಮಕ್ಕೆ ಅಹಿತವೆಸಗಿ ಯಾರೂ ದೇಶಧರ್ಮಕ್ಕೆ ಒಳಿತನ್ನೆಸಗಲಾರರು. ಹಾಗೆಯೇ, ಯಾರೂ ವಿಶ್ವಧರ್ಮಕ್ಕೆ ಅಹಿತವನ್ನೆಸಗಿ ದೇಶಧರ್ಮವನ್ನು ಪೋಷಿಸಲಾರರು. ಇದು ಅಂತಿಮ ಪರೀಕ್ಷೆ; ಕುಟುಂಬದ ಉಳಿವಿಗಾಗಿ ನಾವು ಎಂಬ ಭಾವ ಅಳಿಯಬೇಕು, ದೇಶದ ಉಳಿವಿಗಾಗಿ ಕುಟುಂಬಭಾವ ಅಳಿಯಬೇಕು, ವಿಶ್ವದ ಉಳಿವಿಗಾಗಿ ದೇಶಭಾವ ಅಳಿಯಬೇಕು. ಆದರೆ ಪರಿಶುದ್ಧ ವಸ್ತುಗಳೇ ತ್ಯಾಗಕ್ಕೆ ಯೋಗ್ಯ. ಆದ್ದರಿಂದ ಆತ್ಮಶುದ್ಧಿಯೇ

ಪ್ರಥಮ ಹೆಜ್ಜೆ. ಶುದ್ಧಹೃದಯವಿರುವಾಗ ಪ್ರತಿಕ್ಷಣದಲ್ಲಿಯೂ ನಮ್ಮ ಕರ್ತವ್ಯವೇನೆಂಬುದು ನಮಗೆ ಗೋಚರಿಸುತ್ತದೆ.

(ಎಸ್ತರ್ ಮೆನನ್* ಅವರ ಏಳು ವರುಷದ ಬಾಲಿಕೆ ಮತ್ತು ಅವಳ ಆಂಗ್ಲ ಗೆಳೆಯರಿಂದ ಪತ್ರಗಳು ಬಂದಿದ್ದವು. ನಾಲ್ಕು ವರುಷದ ಒಬ್ಬ ಹುಡುಗಿ ಹೀಗೆ ಬರೆದಿದ್ದಳು: 'ನೀವು ಬಹಳ ಒಳ್ಳೆಯ ಮನುಷ್ಯರೆಂದು ನಮ್ಮ ತಾಯಿ ನನಗೆ ಹೇಳಿದ್ದಾರೆ; ಆದ್ದರಿಂದ ನಾವು ನಿಮಗೆ ಪತ್ರ ಬರೆಯುತ್ತಿದೇವೆ. ದಯೆಮಾಡಿ ನೀವೂ ನಮಗೆ ಉತ್ತರ ಬರೆಯಿರಿ.' ಮತ್ತೊಬ್ಬ ಹುಡುಗಿ ಬರೆದಳು: 'ಯುದ್ಧ ಮತ್ತು ಭಿತ್ತಿಚಿತ್ರಗಳನ್ನು ತಪ್ಪಿಸಲು ನಾವು ಪ್ರಯತ್ನಿಸುತ್ತಿದೇವೆ.' ಗಾಂಧೀಜೀ ಯಾವಾಗಲೂ ಬೋಧಿಸುತ್ತಿದ್ದಂತೆ ಅಹಿಂಸೆಯನ್ನೇ ಬೋಧಿಸುತ್ತಾ ಅವರಿಗೂ ಬರೆದರು:)

ನನ್ನ ಒಲವಿನ ಚಿಕ್ಕ ಗೆಳೆಯರೇ,

"ನೀವು ವಿನೋದಕ್ಕಾಗಿ ಬರೆದ ಚಿತ್ರಗಳನ್ನೊಳಗೊಂಡ ನಿಮ್ಮ ಸೊಗಸಾದ ಪತ್ರಗಳು ನನಗೆ ಹರ್ಷವನ್ನುಂಟುಮಾಡಿವೆ. ನಿಮ್ಮೆಲ್ಲರಿಗೂ ನಾನು ಒಂದೇ ಪತ್ರ ಬರೆವುದನ್ನು ನೀವು ಅನ್ಯಥಾ ಭಾವಿಸುವುದಿಲ್ಲವೆಂದು ನಂಬಿದೇನೆ. ನೀವೆಲ್ಲ ದೇಹದಲ್ಲಿ ಬೇರೆ ಬೇರೆ ಇದ್ದರೂ ಏಕಮನಸ್ಕರಾಗಿದೀರಿ. ಹೌದು, ನಿಮ್ಮಂಥ ಪುಟಾಣಿ ಮಕ್ಕಳೇ ಎಲ್ಲ ಯುದ್ಧವನ್ನೂ ನಿಲ್ಲಿಸ ತಕ್ಕವರು. ಇದರ ಅರ್ಥ—ನೀವು ನಿಮ್ಮಲ್ಲಿಯೇ ಜಗಳವಾಡುವುದಿಲ್ಲ ಎಂದು; ಇತರ ಬಾಲಕಬಾಲಕಿಯರೊಂದಿಗೂ ಆಡುವುದಿಲ್ಲ ಎಂದು. ನೀವುಗಳೇ ಪುಟ್ಟ ಯುದ್ಧಗಳನ್ನು ಆಡುತ್ತಿದ್ದರೆ ನೀವು ದೊಡ್ಡ ಯುದ್ಧ ಗಳನ್ನು ನಿಲ್ಲಿಸಲಾರಿರಿ. ನ್ಯಾನಿ ಮತ್ತು ಆನಾ—ಇವರ ಹುಟ್ಟುಹಬ್ಬದ ಸಂದರ್ಭದಲ್ಲಿ ನಾನೂ ನಿಮ್ಮೊಂದಿಗೆ ಇದ್ದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು. ದೇವರ ಅನುಗ್ರಹ ನಿಮಗೆಲ್ಲ ಲಭಿಸಲಿ. ನಿಮಗೆ ನಾನು ಮುತ್ತು ಕೊಡ ಬಹುದಾದರೆ, ಅದನ್ನು ಸ್ವೀಕರಿಸಿ. ನ್ಯಾನಿ ನನ್ನ ಪ್ರೀತಿಯನ್ನು ಎಸ್ತರಳಿಗೆ ತಲುಪಿಸುವಳು ತಾನೆ?

---

* ಈಕೆ ಒಬ್ಬ ಡೇನಿಷ್ ಮಹಿಳೆ. ಈಕೆಗೆ ಬಾಪೂ ಬರೆದ ಪತ್ರಗಳನ್ನು ಇದೇ ಸಂಪುಟದಲ್ಲಿ ಬೇರೊಂದು ಭಾಗದಲ್ಲಿ ಕಾಣಬಹುದು.

# ೨. ಆಶ್ರಮದ ತಂಗಿಯರಿಗೆ

(ಗಾಂಧೀಜೀ ನಡೆಸಿದ ಅಹಿಂಸಕ ಸಮರದಲ್ಲಿ ಭಾರತದ ಮಹಿಳೆಯರು ಶ್ಲಾಘನೀಯ ಪಾತ್ರವಹಿಸಿದರು. ಹುಟ್ಟನಿಂದಲೇ ಪ್ರೇಮಲಸ್ವಭಾವವುಳ್ಳವರಾಗಿ ಕ್ಲೇಶವನ್ನು ಸಹಿಸುವ ಶಕ್ತಿಯುಳ್ಳವರಾಗಿರುವ ಅವರು ಅಹಿಂಸಾಯೋಧರಾಗಲು ಪುರುಷರಿಗಿಂತ ಹೆಚ್ಚು ಸೌಲಭ್ಯವುಳ್ಳವರು. ಇದಕ್ಕೆ ಅವರು ತ್ಯಜಿಸಬೇಕಾದ ಒಂದೇ ಅವಗುಣ—ಭೀರುತನ. ಭೀರುತನ ತ್ಯಜಿಸಿದ ಮಕ್ಕಳು, ಮುದುಕರು, ಮಹಿಳೆಯರು ಅಹಿಂಸಕ ಸಮರದ ಸೈನಿಕರಾಗಲು ಯೋಗ್ಯರು. ಇಂಥ ನಿರ್ಭೀತ ಮಹಿಳೆಯರನ್ನು ಸೃಷ್ಟಿಸಿದ ಕೀರ್ತಿ ಗಾಂಧೀಜೀಯದು.

ರಾಷ್ಟ್ರನಿರ್ಮಾಣಕಾರ್ಯಕ್ಕೆ, ಸ್ವಾತಂತ್ರ್ಯ ಹೋರಾಟಕ್ಕೆ ಮಹಿಳೆಯರನ್ನು ಗಾಂಧೀಜೀ ಸಿದ್ಧಪಡಿಸಿದ ವಿಧಾನವೂ ಅದ್ಭುತ ; ನ ಭೂತೋ ನ ಭವಿಷ್ಯತಿ. ಅವರು ಆಶ್ರಮದ ಮಹಿಳೆಯರಿಗೆ ಪ್ರತ್ಯಕ್ಷ ಸ್ಫೂರ್ತಿ ಕೊಟ್ಟು, ಆಶ್ರಮದಲ್ಲಿ ಇಲ್ಲದಿದ್ದಾಗ ಪತ್ರಗಳನ್ನು ಬರೆದು, ಅವರನ್ನು ತಮ್ಮ ಧ್ಯೇಯಸಾಧನೆಗೆ ಉತ್ತಮ ಸಾಧನಗಳನ್ನಾಗಿ ಮಾರ್ಪಡಿಸಿದರು. ಇಲ್ಲಿ ಕೊಟ್ಟಿರುವ ಕೆಲವಾರು ಪತ್ರಗಳಲ್ಲಿ ಗಾಂಧೀ ವಿಧಾನದ ಒಂದು ಕಿರುನೋಟವನ್ನು ಕಾಣಬಹುದು.)

ವರ್ಧಾ
ಮೌನದಿನ (ಸೋಮವಾರ)

ತಂಗಿಯರೇ,

ಇಂದು ಬೆಳಗಿನ ತಿಂಡಿ ಮುಗಿದ ಕೂಡಲೇ ನಿಮಗೊಂದು ಪತ್ರ ಬರೆಯುವುದೇ ನನ್ನ ಪ್ರಥಮ ಕೆಲಸ. ಈಗ ಏಳು ಘಂಟೆಗೆ ಇನ್ನೂ ಐದು ನಿಮಿಷವಿದೆ; ಆದ್ದರಿಂದ ನೀವೆಲ್ಲ ಪ್ರಾರ್ಥನಾ ಮಂದಿರದ ಕಡೆಗೆ ಧಾವಿಸುತ್ತಿದೀರೆಂದು ನಂಬಿದೇನೆ. ಗೊತ್ತಾದ ವೇಳೆಗೆ ಸರಿಯಾಗಿ ನೀವೆಲ್ಲ ಮಂದಿರಕ್ಕೆ ಹೋಗಬೇಕು. ನಿಮ್ಮಲ್ಲಿ ಯಾರು ಪ್ರತಿದಿನವೂ ಪ್ರಾರ್ಥನೆಯಲ್ಲಿ ಭಾಗವಹಿಸುವೆವೆಂದು ಮಾತು ಕೊಟ್ಟಿರುವಿರೋ ಅವರೆಲ್ಲ—ಅಸಹಾಯಕರಾಗಿರುವ ಸಂದರ್ಭಗಳನ್ನು ಬಿಟ್ಟು—ಭಾಗವಹಿಸಲು ನಿರ್ಧರಿಸಬೇಕು. ದಿನವೂ ನಿಮಗೆ ಗೀತೆಯ ಒಂದೆರಡು ಶ್ಲೋಕಗಳನ್ನು ವಿವರಿಸಿ ಹೇಳಬೇಕೆಂದು ರಮಣಿಕಲಾಲನಿಗೆ* ಸಲಹೆ ಕೊಟ್ಟಿದೇನೆ. ಆದರೂ ನಿಮಗೆ

---

* ಒಬ್ಬ ಅಧ್ಯಾಪಕರಿರಬೇಕು.

ಇಷ್ಟವೆನಿಸಿದುದನ್ನು ವ್ಯಾಸಂಗ ಮಾಡುವ ಸ್ವಾತಂತ್ರ್ಯವೂ ಇದ್ದೇ ಇದೆ. ಬರೆವ ಅಭ್ಯಾಸವನ್ನು ಮುಂದುವರಿಸಿ, ಯಾವಾಗಲೂ ನಿಮ್ಮ ಹಸ್ತಾಕ್ಷರವನ್ನು ಉತ್ತಮಪಡಿಸಿಕೊಳ್ಳಿ. ಆದರೆ ಇವುಗಳೇ ಅಂತಿಮ ಗುರಿಯಲ್ಲ; ಸಾಧನಗಳು ಮಾತ್ರ. ಆ ಗುರಿ ನಿಯಮಿತ ಕರ್ತವ್ಯಾನುಷ್ಠಾನ. ಇತರರಿಗೆ ಶುಭವನ್ನು ಆಶಿಸಿ, ಉತ್ತಮ ಕಾರ್ಯ ಮಾಡುವುದೇ ಮಾನವನ ಕರ್ತವ್ಯಕರ್ಮವೆಲ್ಲ. ನೀವು ಒಬ್ಬರನ್ನೊಬ್ಬರು ರಕ್ತಸಂಬಂಧಿಗಳಂತೆ ಪ್ರೀತಿಸುತ್ತ ಪರಸ್ಪರ ಸುಖದುಃಖಗಳಲ್ಲಿ ಭಾಗಿಗಳಾಗುವುದೇ ಇವಕ್ಕೆ ಪ್ರಥಮ ಹೆಜ್ಜೆ.

ಬಾಪೂನ ಆಶೀರ್ವಾದಗಳು

ವರ್ಧಾ

ಮಾಘ ಶುದ್ಧ ಏಕಾದಶಿ

ಈ ದಿನವೂ ಬೆಳಗಿನ ತಿಂಡಿಯಾದ ಕೂಡಲೇ ನಿಮ್ಮ ನೆನಪು ಬರುತ್ತಿದೆ. ಈಗ ೬–೫೦ರ ಸಮಯ; ನಿಮ್ಮ ಪ್ರಾರ್ಥನೆಯ ವೇಳೆ. ನಾವು ಜೀವನದಲ್ಲಿ ಏನನ್ನು ತಪ್ಪಿದರೂ ಪ್ರಾರ್ಥನೆಯನ್ನು ತಪ್ಪಬಾರದು. ಪ್ರಾರ್ಥನೆ ಎಂದರೆ, ಭಗವಂತನ ಸನ್ನಿಧಾನ; ಪರಸ್ಪರ ಸಹಕಾರ. ಮಾನವನ ಆತ್ಮಶುದ್ಧಿಗೆ ಅನುವಾಗುವ ಸ್ನಾನವಾಗಬೇಕು, ಪ್ರಾರ್ಥನೆ. ನಾವು ನಮ್ಮ ಶರೀರವನ್ನು ಶುದ್ಧಮಾಡದಿದ್ದರೆ ದೈಹಿಕ ಆರೋಗ್ಯ ಕೆಡುತ್ತದೆ; ಹಾಗೆಯೇ ಪ್ರಾರ್ಥನೆಯಿಂದ ಹೃದಯಶುದ್ಧಿಯನ್ನು ಮಾಡಿಕೊಳ್ಳದಿದ್ದರೆ ಆತ್ಮ ಕಲುಷಿತವಾಗುತ್ತದೆ. ಆದ್ದರಿಂದ ಪ್ರಾರ್ಥನೆಯ ಬಗೆಗೆ ಎಂದಿಗೂ ಅಲಕ್ಷ್ಯದಿಂದಿರಬೇಡಿ.

....ಳ ಜೀವನ ನಿಮಗೊಂದು ಪ್ರತ್ಯಕ್ಷ ಪಾಠ. ಆಕೆ ತನ್ನ ಕಾಲದ ಪ್ರತಿ ನಿಮಿಷವನ್ನೂ ಸದುದ್ದೇಶಪೂರಿತ ಕರ್ಮಗಳಲ್ಲಿ ಕಳೆಯುತ್ತಾಳೆ. ನೀವೆಲ್ಲ ಅದೇ ಭಕ್ತಿಭಾವ, ತ್ಯಾಗಬುದ್ಧಿ ಮತ್ತು ಪರಿಶುದ್ಧತೆ ಇವುಗಳ ಉಚ್ಚಸ್ಥಿತಿಯನ್ನು ಹೊಂದಬೇಕು. ನಿಮ್ಮ ಸೇವಾಶಿಕ್ಷಣ ಮುಗಿದಮೇಲೆ ನೀವು ಭಾರತಾದ್ಯಂತ ನೆಲೆಸುವಿರೆಂದು ನಿರೀಕ್ಷಿಸುವುದು ಹೆಚ್ಚೆನಿಸೀತೇ? ದಯಾಭರಿತ ಹೃದಯದಿಂದ ಸೇವೆಸಲ್ಲಿಸುವ ಭಗಿನಿಯರ ಅಭಾವ ಪ್ರತಿ ನಿಮಿಷವೂ ಕಂಡುಬರುತ್ತಿದೆ. ತಮ್ಮ ದೇಶಬಂಧುಗಳ ಸೇವೆಸಲ್ಲಿಸಲು

ಮುಂದೆ ಬರುವ ಮಹಿಳೆಯರೇ ಅಪರೂಪ. ಮಹಿಳೆಯರು ಸೇವಾಭಾವದ ಅವತಾರಸ್ವರೂಪರೇ. ಆದರೆ ಇಂದು ಅವರ ಸೇವೆಯೆಲ್ಲ ಕುಟುಂಬಕ್ಕೆ ಸೀಮಿತವಾಗಿದೆ. ಅಖಿಲ ಭಾರತಕ್ಕೆಲ್ಲ ಅನ್ವಯಿಸುವಂತೆ ತಮ್ಮ ಸೇವಾ ಕ್ಷೇತ್ರವನ್ನು ಅವರು ಏಕೆ ವಿಸ್ತರಿಸಿಕೊಳ್ಳಬಾರದು? ನಿಜ ಧಾರ್ಮಿಕ ವ್ಯಕ್ತಿ ವಿಶ್ವಪ್ರಜೆಯೇ ಆದಾನು; ಆದರೆ ಸ್ವದೇಶಸೇವೆ ಅವನಿಗೆ ಮಾನವ ಸೇವೆಸಲ್ಲಿಸಲು ಒಂದು ಹಂತ. ವಿಶ್ವಹಿತಕ್ಕೆ ಧಕ್ಕೆಬಾರದ ರೀತಿಯಲ್ಲಿ ಸ್ವದೇಶಸೇವೆ ನಡೆದರೆ, ಅದು ಆತ್ಮಸಾಕ್ಷಾತ್ಕಾರಕ್ಕೆ (ಮೋಕ್ಷ) ಸಾಧನ ವಾದೀತು.

ಜನವರಿ, ೧೯೨೭

ನಿನ್ನೆಯ ಮಹಿಳೆಯರ ಸಭೆಯಲ್ಲಿ ನಾನು ಒಂದು ಹೊಸ ಪ್ರಚಾರ ವನ್ನು ಆರಂಭಿಸಿದೆ. ಇಲ್ಲಿನ ಮಹಿಳೆಯರು (ಉತ್ತರ ಬಿಹಾರ್) ತೂಕವಾದ ಬೆಳ್ಳಿಯ ಆಭರಣಗಳನ್ನು ಧರಿಸುತ್ತಾರೆ; ತಮ್ಮ ಕೂದಲನ್ನು ಬಾಚಿ ಕೊಳ್ಳುವುದೇ ಇಲ್ಲ; ಮಕ್ಕಳನ್ನು ಕೊಳಕಾಗಿ ಇಟ್ಟಿರುತ್ತಾರೆ. ಆದ್ದರಿಂದ ಆಭರಣಗಳನ್ನು ಧರಿಸುವ ಪದ್ಧತಿಯನ್ನು ನಾನು ಖಂಡಿಸಿ ಮಾತನಾಡಿದೆ. ಇದರ ಪರಿಣಾಮವಾಗಿ ಕೆಲವಾರು ಮಹಿಳೆಯರು ತಮ್ಮ ಕಾಲಂದಿಗೆ ಗಳನ್ನೂ ಕಂಠಹಾರಗಳನ್ನೂ ನನಗೆ ದಾನಮಾಡಿಬಿಟ್ಟರು. ಅವರು ದಾನ ಮಾಡಿದ ಆಭರಣಗಳನ್ನು ಪುನಃ ಧರಿಸಬಾರದೆಂಬ ನಿಯಮಕ್ಕನುಗುಣ ವಾಗಿ ಅವುಗಳನ್ನು ಸ್ವೀಕರಿಸಿದೆ. ಈ ದಾನವನ್ನು ತೆಗೆದುಕೊಳ್ಳುವಾಗ ಆಶ್ರಮದಲ್ಲಿರುವ ನಿಮ್ಮನ್ನೆಲ್ಲ ನೆನಪುಮಾಡಿಕೊಂಡೆ. ಇಂಥ ಕಾರ್ಯವನ್ನು ನೀವು ನನಗಿಂತ ಹೆಚ್ಚು ಪ್ರಭಾವಯುತವಾಗಿ ಮಾಡಬಲ್ಲಿರಿ. ತ್ಯಾಗ ಬುದ್ಧಿಯಿಂದಲೂ, ಭಕ್ತಿಭಾವದಿಂದಲೂ ನೀವು ಈ ಕಾರ್ಯ ಮಾಡಲು ಸಜ್ಜಿತರಾಗಬೇಕು. ಈ ದಿನಗಳಲ್ಲಿ 'ಬಾ' ನನಗೆ ತುಂಬ ನೆರವನ್ನು ನೀಡುತ್ತಿದಾಳೆ.

'ಆತ್ಮವತ್ ಸರ್ವಭೂತೇಷು' ಎಂದರೆ, ಎಲ್ಲರನ್ನೂ ನಮ್ಮ ಆತ್ಮ ದಂತೆಯೇ ಪರಿಗಣಿಸಬೇಕೆಂದು ಅರ್ಥ. ನಮ್ಮ ಭಾವನೆ ಆ ರೀತಿ ಇದ್ದರೆ ಯಾರ ಮಕ್ಕಳೇ ಆಗಲಿ ಅಶುಚಿಯಿಂದ ಇರುವುದನ್ನು ನೋಡಿದಾಗ

ನಮ್ಮ ಮಕ್ಕಳೇ ಅಶುಚಿಯಿಂದ ಇರುವಂತೆ ನಮಗೆ ನಾಚಿಕೆಯಾಗಬೇಕು. ಹಾಗೆಯೇ ದುಃಖಕ್ಕೊಳಗಾಗಿರುವವರನ್ನು ನೋಡಿದಾಗ ನಮಗೂ ದುಃಖ ಎನಿಸಿ, ನಾವು ದುಃಖವನ್ನು ಪರಿಹರಿಸಲು ಪ್ರಯತ್ನ ಮಾಡಬೇಕು.

ಪುಷ್ಯ ಶುದ್ಧ ಚತುರ್ದಶಿ

ಜನವರಿ, ೧೯೨೭

ನೀವು ಗಂಗಾಬಹೆನ್* ಇವಳನ್ನು ನಿಮ್ಮ ಅಧ್ಯಕ್ಷಿಣಿಯನ್ನಾಗಿ ಮಾಡಿಕೊಂಡುದು ಯುಕ್ತವೇ ಆಗಿದೆ. ಆದರೆ ಆಕೆಯನ್ನು ನಿಮ್ಮ ಅಧ್ಯಕ್ಷಿಣಿಯನ್ನಾಗಿ ಆರಿಸಿಕೊಂಡುದರಿಂದ ಆಕೆ ತನ್ನ ಸ್ಥಾನದ ಕರ್ತವ್ಯಗಳನ್ನು ನೆರವೇರಿಸಲು ನೀವು ಸಹಾಯಮಾಡಬೇಕೆಂದು ನಾನು ಸಲಹೆ ಮಾಡಲೆ? ಗಂಗಾಬಹೆನ್ ಅನಕ್ಷರಸ್ಥೆ ; ಆದರೂ ಅವಳ ಗುಣಕ್ಕೆ ಮಾನ್ಯತೆ ಕೊಟ್ಟು ನೀವು ಅವಳನ್ನು ಅಧ್ಯಕ್ಷಿಣಿಯನ್ನಾಗಿ ಆರಿಸಿಕೊಂಡುದು ಯುಕ್ತವೇ ಸರಿ. ಶೀಲರಹಿತವಾದ ಸಾಹಿತ್ಯ, ವಿದ್ಯಾಭ್ಯಾಸ ಏನೂ ಪ್ರಯೋಜನವಿಲ್ಲ. ಅಧ್ಯಕ್ಷ ಎಂದರೆ ಪ್ರಧಾನ ಸೇವಕ. ಸೇವೆಯ ಅತ್ಯುಚ್ಚ ಯೋಗ್ಯತೆಯನ್ನು ಪಡೆದುಕೊಂಡ ಆಡಳಿತಗಾರನೇ ಆಜ್ಞೆ ಕೊಡಲು ಸಮರ್ಥ. ಆತನ ಆಜ್ಞೆಗಳು ಸ್ವಾರ್ಥಕ್ಕಾಗಿರದೆ ಸಮಾಜಹಿತಕ್ಕೆ ಅನ್ವಯಿಸಬೇಕು. ಈಗಿನ ಕಾಲದ ಆಡಳಿತಗಾರರು ತಮ್ಮ ಕರ್ತವ್ಯದೃಷ್ಟಿಯನ್ನು ಮರೆತಿದ್ದಾರೆ. ಆದ್ದರಿಂದ ನಿಸ್ವಾರ್ಥ ಮತ್ತು ಶ್ರದ್ಧೆಗಳ ಮೇಲ್ಪಂಕ್ತಿಯನ್ನು ಹಾಕುವುದಕ್ಕೆ ಪ್ರತಿಯಾಗಿ ಸುಖಾಭಿಲಾಷಿಗಳಾಗಿ ತಮ್ಮ ಸಾಮರ್ಥ್ಯವನ್ನು ಭೋಗಲಾಲಸೆಯ ಸಾಧನವನ್ನಾಗಿ ಮಾಡುತ್ತಾರೆ. ಆದರೆ ನೀವು ಗಂಗಾಬಹೆನಳನ್ನು ಧಾರ್ಮಿಕ ದೃಷ್ಟಿಯಿಂದ ನಿಮ್ಮ ಅಧ್ಯಕ್ಷಿಣಿಯನ್ನಾಗಿ ಆರಿಸಿಕೊಂಡಿದ್ದೀರಿ : ಆದ್ದರಿಂದ ನೀವೆಲ್ಲ ಕರುಣಾಭರಿತ ತಂಗಿಯರಾಗುವ ಉದ್ಯಮದಲ್ಲಿ ಆಕೆಯನ್ನು ನಾಯಕಿಯನ್ನಾಗಿ ಮಾಡಿಕೊಳ್ಳುವ ಸಂಕಲ್ಪ ಮಾಡಿದ್ದೀರಿ.

ಬೆಟಿಯಾ

ಪುಷ್ಯ ಕೃಷ್ಣ ಷಷ್ಠಿ

ಆಶ್ರಮದಲ್ಲಿ ನಾವು ಭಗಿನಿಯರಿಗೆ ಅಜೀವ ದೇಶಸೇವೆ ಮಾಡುವ ಕಾರ್ಯದಲ್ಲಿ ತರಪೇತು ಕೊಡದಿದ್ದರೆ ಅದನ್ನು ಇನ್ನೆಲ್ಲಿ ಮಾಡುವ ಆಸೆ

* ಆಶ್ರಮದ ಒಬ್ಬ ಕಾರ್ಯಕರ್ತೆ.

ಯನ್ನು ಕಾಣಲು ಸಾಧ್ಯ? ಈ ಉದ್ದೇಶಕ್ಕೆ ಬೇಕಾದ ಆರೋಗ್ಯ, ಶಕ್ತಿ, ಆತ್ಮವಿಶ್ವಾಸ, ಸಾಹಿತ್ಯ, ವಿದ್ಯಾಭ್ಯಾಸ ನಿಮ್ಮಲ್ಲಿ ಇಲ್ಲವೆಂಬುದೇನೋ ನಿಜವೆ. ಆದರೆ ನಿಮ್ಮಲ್ಲಿ ನಿಜಭಕ್ತಿಯೊಂದಿದ್ದರೆ ಇವೆಲ್ಲವೂ ತಾವಾಗಿಯೇ ಲಭಿಸುತ್ತವೆ. ಭಕ್ತಿಯೆಂದರೆ ಭಗವಂತನಲ್ಲಿ ನಂಬಿಕೆ, ನಾವು ಅವನ ಸಾಧನಗಳು ಮಾತ್ರ ಎಂಬುದರಲ್ಲಿ ನಂಬಿಕೆ; ಇದರಿಂದ ನಮಗೆ ಸರ್ವತ್ಯಾಗ ಮಾಡುವ ಶಕ್ತಿ ಬರುತ್ತದೆ. ತ್ಯಾಗಕ್ಕಾಗಿ ತ್ಯಾಗಮಾಡುವೆನೆನ್ನುವುದು ಕಷ್ಟಕರ. ಒಬ್ಬ ತಾಯಿ ಇಚ್ಛಾಪೂರ್ವಕವಾಗಿ ತೇವದ ಹಾಸಿಗೆಯ ಮೇಲೆ ಮಲಗುವುದಿಲ್ಲ; ಆದರೆ ತನ್ನ ಮಗುವಿಗೆ ಒಣಗಿದ ಹಾಸಿಗೆಯನ್ನು ಬಿಟ್ಟು ಕೊಡುವ ದೃಷ್ಟಿಯಿಂದ ಹಾಗೆ ಸಂತೋಷಪೂರ್ವಕವಾಗಿ ಮಾಡುವಳು.

ಮಾಳವಣ

ಮಾಘ ಕೃಷ್ಣ ಏಕಾದಶಿ

ನಮ್ಮ ಪ್ರವಾಸದ ಕಾಲದಲ್ಲಿ ಯಾವಾಗಲೂ ಮಹಿಳೆಯರ ಸಭೆಯೊಂದು ನಡೆಯುತ್ತದೆ. ಅದರಿಂದ ನನಗೆ ಹೊಸ ಅನುಭವ ಬರುತ್ತದೆ. ಮಹಿಳೆಯರು ಸ್ವರಾಜ್ಯದ ಬೀಗದಕ್ಕೆ ಹೊಂದಿದಾರೆಂದು ನನ್ನ ಭಾವನೆ. ಆದರೆ ಅವರಲ್ಲಿ ಜಾಗೃತಿಯನ್ನು ತರುವವರು ಯಾರು? ಲಕ್ಷೋಪಲಕ್ಷ ಮಹಿಳೆಯರು ಸೋಮಾರಿತನದಲ್ಲಿ ಮುಳುಗಿಹೋಗಿದಾರೆ. ಅವರನ್ನು ಉದ್ಯೋಗಶೀಲರಾಗುವಂತೆ ಮಾಡಬಲ್ಲವರು ಯಾರು? ತಾಯಿಯರೇ ಮಕ್ಕಳನ್ನು ಶೈಶವದಿಂದಲೇ ಹಾಳುಮಾಡುತ್ತಾರೆ. ಆಭರಣಗಳನ್ನೂ ಅನಗತ್ಯ ವಸ್ತ್ರಗಳನ್ನೂ ಹೇರುತ್ತಾರೆ. ತಮ್ಮ ಹರೆಯದ ಹೆಣ್ಣು ಮಕ್ಕಳನ್ನು ವೃದ್ಧರಿಗೆ ಕೊಟ್ಟು ವಿವಾಹಮಾಡುತ್ತಾರೆ. ಮಹಿಳೆಯರು ತಮ್ಮನ್ನು ಹೇರಳವಾಗಿ ಆಭರಣಗಳಿಂದ ಶೃಂಗರಿಸಿಕೊಳ್ಳುವುದನ್ನು ಕಂಡಾಗ ನನಗೆ ಬಹಳ ದುಃಖವಾಗುತ್ತದೆ. ಈ ಆಭರಣಗಳು ಅವರ ಸೌಂದರ್ಯವನ್ನು ಹೆಚ್ಚಿಸಲಾರವೆಂದು ಹೇಳಬಲ್ಲವರು ಯಾರು? ಆತ್ಮಸೌಂದರ್ಯವೇ ನಿಜವಾದ ಸೌಂದರ್ಯ.

ಇದಕ್ಕೆ ಪರಿಹಾರವೇನು? ನಮ್ಮ ಜನತೆಯಲ್ಲಿ ದೃಢಸಂಕಲ್ಪದ ದ್ರೌಪದಿಯಂಥವಳೊಬ್ಬಳು ಉದ್ಭವಿಸಿದರೆ ಪರಿಹಾರ ಸುಲಭವಾಗಿ ಕಂಡು

ಬಂದೀತು. ಅಂಥ ಸಾಮರ್ಥ್ಯವನ್ನು ಗಳಿಸಿಕೊಳ್ಳಲು ನೀವು ಸಂಕಲ್ಪ ಮಾಡಿ ಅದನ್ನು ಸಾಧಿಸಲು ಪ್ರಯತ್ನಿಸಿ. ತಾಳ್ಮೆ ಮತ್ತು ಸಹಿಷ್ಣುತೆಗಳಿಂದ ಪರ್ವತಗಳನ್ನೂ ಗೆಲ್ಲಬಹುದು.

ಚೈತ್ರ ಕೃಷ್ಣ ನವಮಿ

ಈಗ ಆಶ್ರಮದಲ್ಲಿ ಮಹಿಳೆಯರು ಪುರುಷರು ಇಬ್ಬರೂ ಇದ್ದಾರೆ. ಆದರೆ ಒಂದು ದಿನ ಪುರುಷರೆಲ್ಲ ಆಶ್ರಮವನ್ನು ಬಿಟ್ಟುಹೋದಾಗ ಕಳ್ಳರು ಬಂದರೆ ನೀವೆಲ್ಲ ಏನು ಮಾಡುವಿರಿ? ನೀವು ಯಾವಾಗಲಾದರೂ ಇದರ ಬಗೆಗೆ ಯೋಚಿಸಿದೀರಾ? ಇಲ್ಲವಾದರೆ, ಈಗ ಯೋಚಿಸಿ ನೀವೇನು ಮಾಡುವಿರೆಂಬುದನ್ನು ನನಗೆ ತಿಳಿಸಿ. ಮಹಿಳೆಗೆ ಬಂದಿರುವ 'ಅಬಲಾ' ಮತ್ತು 'ಭೀರು' ಎಂಬ ಹೆಸರುಗಳನ್ನು ನೀವು ಅಲ್ಲವೆನಿಸಿದರೆ ನನಗೆ ಎಷ್ಟು ಸಂತಸವಾದೀತು.

ವೈಶಾಖ ಶುದ್ಧ ಪ್ರತಿಪದೆ

ಈ (ಮೇಲೆ ತಿಳಿಸಿದ) ವಿಶೇಷಣಗಳನ್ನು ಎಲ್ಲ ಮಹಿಳೆಯರಿಗೂ ಉಪಯೋಗಿಸಲು ಬರುವುದಿಲ್ಲ; ಉದಾಹರಣೆಗೆ—ಸ್ತ್ರೀಯೋಧ ಮಹಿಳೆಯರು ಮತ್ತು ಪುರುಷರಿಗೇ ಮೀಸಲೆಂದು ಭಾವಿಸಲಾದ ಎಷ್ಟೋ ಕೆಲಸಗಳನ್ನು ಮಾಡುವ ಪಾಶ್ಚಾತ್ಯ ಮಹಿಳೆಯರು. ಅವರ ಎಲ್ಲ ಚಟುವಟಿಕೆಗಳು ಅನುಕರಣಯೋಗ್ಯವೆಂದು ನನ್ನ ಭಾವವಲ್ಲ; ಆದರೆ ಅವು ಪುರುಷರ ಎಷ್ಟೋ ಲೆಕ್ಕಾಚಾರಗಳನ್ನು ನಿಜವಾಗಿ ತಲೆಕೆಳಗು ಮಾಡಿವೆ. ಬರ್ಮಾ ದೇಶದಲ್ಲಿ ಮಹಿಳೆಯರೇ ಎಲ್ಲ ಕಾರ್ಯಗಳನ್ನು ನಿರ್ವಾಹಮಾಡುತ್ತಾರೆ. ಆಶ್ರಮದಲ್ಲಿರುವ ನಾವು ಆತ್ಮಸಾಕ್ಷಾತ್ಕಾರಕ್ಕೆ ಹೆಣಗುತ್ತಿದೇವೆ. ಆತ್ಮವು ಪುರುಷನೂ ಅಲ್ಲ, ಸ್ತ್ರೀಯೂ ಅಲ್ಲ; ಅದಕ್ಕೆ ಯೌವನವೂ ಇಲ್ಲ, ವೃದ್ಧಾಪ್ಯವೂ ಇಲ್ಲ. ಈ ವಿಶೇಷಣಗಳು ಶಾಸ್ತ್ರಗಳ ಮತ್ತು ಅನುಭವದ ಆಧಾರದ ಪ್ರಕಾರ ಕಾಯಕ್ಕೆ ಮಾತ್ರ ಅನ್ವಯಿಸುತ್ತವೆ. ನಿಮ್ಮಲ್ಲಿಯೂ ನನ್ನಲ್ಲಿಯೂ ಇರುವ ಆತ್ಮವಸ್ತು ಒಂದೇ; ಆದ್ದರಿಂದ ನಿಮ್ಮನ್ನು ರಕ್ಷಿಸಲು ನಾನಾರು? ಬಾಳಿನ ಯೋಗವನ್ನು ನಾನು ಪೂರ್ಣವಾಗಿ ಅರಿತಿದ್ದರೆ, ಅದನ್ನು ನಿಮಗೆ ಕಲಿಸಬೇಕಷ್ಟೆ.

ನಂದೀ
ವೈಶಾಖ ಶುದ್ಧ ಪೂರ್ಣಿಮಾ

ನಿಮಗೆ ಭಯವಿಲ್ಲವೆಂಬುದನ್ನು ಕೇಳಿ ನನಗೆ ಬಹಳ ಹರ್ಷವಾಯಿತು. ನಮ್ಮನ್ನೆಲ್ಲ ರಕ್ಷಿಸಲು ಭಗವಂತನೊಬ್ಬನಿರುವನೆಂದು ಅರಿತಿರುವವರು ಭಯ ಪಡುವುದಾದರೂ ಏತಕ್ಕೆ ? ಭಗವಂತನ ರಕ್ಷಣೆಯೆಂದರೆ, ನಾವು ದರೋಡೆಗೊಳಗಾಗೆವೆಂದೂ, ಸರ್ಪದಷ್ಟರಾಗಲಾರೆವೆಂದೂ ಅರ್ಥವಲ್ಲ. ಇಂಥ ನಿದರ್ಶನಗಳು ಅವನು ನಮ್ಮನ್ನು ರಕ್ಷಿಸಲು ಕಡಮೆ ಸಮರ್ಥನೆಂದು ತೋರಿಸುವುದಕ್ಕೆ ಪ್ರತಿಯಾಗಿ ಅವನಲ್ಲಿ ನಮಗೆ ಸಾಕಷ್ಟು ನಂಬಿಕೆಯಿಲ್ಲ ಎಂಬುದನ್ನು ತೋರಿಸುತ್ತವೆ. ನದಿ ಸರ್ವರಿಗೂ ಸರ್ವಕಾಲದಲ್ಲೂ ನೀರನ್ನು ನೀಡಲು ಸಿದ್ಧ ; ಆದರೆ ನಾವು ವಿಷಪೂರಿತವೆಂದು ಭಾವಿಸಿ ಅದರ ಬಳಿಗೆ ಹೋಗದೆ ನಮ್ಮ ಪಾತ್ರೆಯನ್ನು ತುಂಬಿಕೊಳ್ಳದಿದ್ದರೆ, ಅದು ಹೇಗೆ ಬೈಗುಳಿಗೆ ಬದ್ಧವಾದೀತು ? ಎಲ್ಲ ಭಯವೂ ನಂಬಿಕೆಯ ಅಭಾವದ ಕುರುಹು. ಆದರೆ ನಂಬಿಕೆ ಬುದ್ಧಿಬಲದಿಂದ ಲಭಿಸಲಾರದು. ದೀರ್ಘ ಚಿಂತನೆ, ಅನನ್ಯಯೋಗ—ಇವುಗಳಿಂದ ಅದು ಲಭಿಸುತ್ತದೆ. ನಾವು ಆ ನಂಬಿಕೆಯನ್ನು ಗಳಿಸಿಕೊಳ್ಳಲು ಪ್ರಾರ್ಥನೆ, ಗೀತೆ, ಗ್ರಂಥಾಧ್ಯಯನ, ದೈವಭಕ್ತರ ಸಂಗ, ಸೂತ್ರಯಜ್ಞ ಇವುಗಳನ್ನೆಲ್ಲ ಮಾಡುತ್ತೇವೆ.

ನಂದೀ
ವೈಶಾಖ ಕೃಷ್ಣ ತ್ರಯೋದಶಿ

ಮೀರಾ ಬೆಹನ್ ನಿಮಗೆ ಆಗಾಗ ಬರೆಯುತ್ತಾಳೆಯೆ ? ಆಕೆ ಸ್ತ್ರೀಪುರುಷರೊಡನೆ ಬಹಳ ಸೇವೆಸಲ್ಲಿಸುತ್ತಿರುವುದಾಗಿ ಆಕೆಯ ಪತ್ರಗಳಿಂದ ನನಗೆ ಭಾಸವಾಗುತ್ತದೆ. ಆಕೆಯ ಪತ್ರಗಳಲ್ಲಿ ಕಂಡುಬರುವ ಒಂದು ಅಂಶವನ್ನು ನಿಮಗೆ ತಿಳಿಸುತ್ತೇನೆ. ತಾನು ಸಂಧಿಸಿದ ಎಲ್ಲ ಭಗಿನಿಯರೂ ಸಹೃದಯರಾಗಿರುವರೆಂದೂ ಆದರೆ ಅವರ ಅಜ್ಞಾನ ಬಹಳ ಘೋರವೆಂದೂ ಬರೆಯುತ್ತಾಳೆ. ಆ ಭಗಿನಿಯರಿಗೆ ಅತ್ಯಂತ ಸಾಮಾನ್ಯ ವಿಷಯಗಳೂ ತಿಳಿದಿರುವುದಿಲ್ಲ. ಆಕೆ ಅವರೊಡನೆ ರಾಟೆಯನ್ನು ಕುರಿತು ಮಾತನಾಡಿದರೆ ಅವರಿಗೆ ಆಶ್ಚರ್ಯ. ಬಡವರ ಸೇವೆಗಾಗಿ ಅದನ್ನು

ಉಪಯೋಗಿಸಬೇಕೆಂದರೆ ಅವರು ಅರ್ಥಮಾಡಿಕೊಳ್ಳಬೇಕಿಲ್ಲ. ದೇವಾಲಯದಲ್ಲಿ ಪ್ರಾರ್ಥನೆಮಾಡುವುದೇ ಅವರು ಅರಿತಿರುವ ಧರ್ಮ. ಸೇವೆ ಎಂದರೇನೋ ಅವರು ಅರಿಯರು. ಇದು ಬಹುಶಃ ಅವರನ್ನು ಪೂರ್ಣವಾಗಿ ಅರಿತುಕೊಳ್ಳದಿರುವ ಪರಿಣಾಮವಿರಬಹುದು. ಆದರೂ ನಮ್ಮ ಮಹಿಳೆಯರಿಗೂ ಎಷ್ಟೋ ಸಾವಿರಾರು ವಿಷಯಗಳು ಗೊತ್ತಿಲ್ಲವೆಂಬುದು ನಮಗೆ ತಿಳಿದಿದೆ. ಆ ಅಜ್ಞಾನದ ಜವಾಬುದಾರಿ ಪುರುಷರ ಮೇಲಿದ್ದರೂ ಅದನ್ನು ನೀಗಲು ನಾವು ಸಿದ್ಧರಾಗಬೇಕು. ಇದೇ ಮುಂದಿರುವ ಕೆಲಸ. ಇದನ್ನು ಮಾಡಲು ನೀವೆಲ್ಲರೂ ನಿಮ್ಮ ಸಾಮರ್ಥ್ಯಕ್ಕೆ ತಕ್ಕಂತೆ ಸಿದ್ಧರಾಗಬೇಕು ಎಂಬುದೇ ನನ್ನ ಆಶಯ.

ಜ್ಯೇಷ್ಠ ಶುದ್ಧ ಚತುರ್ದಶಿ

ಆಶ್ರಮದ ಸ್ತ್ರೀಜೀವಿಗಳೊಂದಿಗೆ ನೀವೇಕೆ ಸಂಪರ್ಕ ಬೆಳಸಬೇಕು ಎನ್ನುವೆನು ಎಂಬುದರ ಅರ್ಥ ನೀವು ತಿಳಿದುಕೊಂಡಿರೆಂದು ನಾನು ಭಾವಿಸುತ್ತೇನೆ. ಅವರಲ್ಲಿ ಒಬ್ಬೊಬ್ಬರಿಂದಲೂ ಪರಿಹಾರನಿಧಿಗೆ ಕಾಸುಕಾಸನ್ನು ಬೇಡುವುದಾದ್ದು ಅವರೊಂದಿಗೆ ಆತ್ಮೀಯತೆಯನ್ನು ತೋರುವುದಕ್ಕೆ ಒಂದು ಅವಕಾಶ. ನೀವು ಪರಸ್ಪರ ಚೆನ್ನಾಗಿ ಅರಿತುಕೊಳ್ಳಲು ಪ್ರಯತ್ನಮಾಡಬೇಕು; ಪರಸ್ಪರ ಸುಖದುಃಖಗಳಲ್ಲಿ ಭಾಗವಹಿಸಬೇಕು. ಇದಕ್ಕಾಗಿಯೇ ನೀವೇನು ಅಧಿಕ ಕಾಲವನ್ನು ವಿನಿಯೋಗಿಸಬೇಕಾಗಿಲ್ಲ. ಹೃದಯ ಪರಿವರ್ತನೆಯೊಂದೇ ಅಪೇಕ್ಷಿತ ಅಂಶ. ನಾವು ಉಣ್ಣುವ ಅನ್ನದಂತೆ ಅನ್ನವೂ ನಾವು ಧರಿಸುವ ಉಡುಪಿನಂತೆ ಉಡುಪೂ ಅವರಿಗೆ ದೊರಕಿಸುವ ಗುರಿಯನ್ನು ಹೊಂದಿರಬೇಕು. ನಾವು ಅಪೇಕ್ಷಿಸಿ ಹೊಂದುವಂಥ ಎಲ್ಲ ಒಳ್ಳೆಯ ವಸ್ತುಗಳೂ ಅವರಿಗೂ ದೊರಕುವಂತೆ ಅಪೇಕ್ಷಿಸಬೇಕಲ್ಲದೆ, ಅವು ಲಭಿಸುವಂತಾಗಲು ಪ್ರಯತ್ನಿಸಬೇಕು.

ನನ್ನ ಈ ಅಭಿಪ್ರಾಯಗಳ ವಿಶಾಲ ಪರಿಣಾಮ ಏನಾದೀತೋ ಎಂದು ಭಯಪಡಬೇಡಿ. ಪ್ರತಿಯೊಂದಕ್ಕೂ ಎರಡು ಅರ್ಥಗಳುಂಟು—ಒಂದು ವಿಶಾಲವಾದದ್ದು ಮತ್ತೊಂದು ಕಿರಿದು. ವಿಶಾಲವಾದುದರ ಅರ್ಥವನ್ನು ಅರಿತುಕೊಂಡು ಕಿರಿದಾದುದರಿಂದ ಆರಂಭಿಸಿದರೆ ನಮಗೇನೂ ಚ್ಯುತಿಯಿಲ್ಲ.

ತಿರುಚನಾಪಳ್ಳಿ

ನೀವು ಎಸಗುತ್ತಿರುವ ಕಾರ್ಯವನ್ನು ನಾನು ಇಲ್ಲಿಂದಲೇ ಚಿತ್ರಿಸಿಕೊಳ್ಳಬಲ್ಲೆ. ಯಾರು ತನ್ನ ಸಾಮರ್ಥ್ಯಕ್ಕನುಗುಣವಾಗಿ ಕೆಲಸ ಮಾಡುವಳೋ ಅವಳು ತನ್ನ ಗುರಿಯನ್ನು ಸಾಧಿಸಿದಂತೆ. ಆದರೆ ನೀವು ನಿಮ್ಮ ಕಾರ್ಯಗಳಲ್ಲಿ ಗೀತೆಯು ಬೋಧಿಸುವ ದೃಷ್ಟಿಯನ್ನು ಅಭ್ಯಸಿಸಬೇಕು; ಎಂದರೆ ಎಲ್ಲವನ್ನೂ ಸೇವಾಭಾವನೆಯಿಂದಲೋ ಇಲ್ಲವೇ ಭಗವದರ್ಪಣ ಬುದ್ಧಿಯಿಂದಲೋ ಮಾಡಬೇಕು. ನೀವು ನಿಮ್ಮ ಎಲ್ಲ ಕಾರ್ಯಗಳನ್ನೂ ಭಗವಂತನಿಗೆ ಸಮರ್ಪಿಸಿಬಿಟ್ಟರೆ ನಾನು ಮಾಡುತ್ತಿರುವೆನೆಂಬ ಭಾವನೆಯೇ ಬರಲಾರದು. ಆಗ ನಿಮಗೆ ಯಾರ ವಿಷಯದಲ್ಲಿಯೂ ಕೆಟ್ಟ ಭಾವನೆಯೇ ಬರದು; ಎಲ್ಲರ ಬಗೆಗೂ ಉದಾರಹೃದಯದಿಂದ ಇರುವಿರಿ. ನಿಮ್ಮ ಅತ್ಯಂತ ಸಣ್ಣ ಕಾರ್ಯಗಳೂ ಈ ತತ್ತ್ವಗಳಿಗೆ ಅನುಗುಣವಾಗಿವೆಯೇ? —ಎಂದು ನಿಮ್ಮಲ್ಲಿ ಸದಾ ಪ್ರಶ್ನಿಸಿಕೊಳ್ಳಬೇಕು.

* * * *

ಪಿಂಡ ಎಂದರೆ ನಮ್ಮ ದೇಹ, ವಿಶ್ವವೇ ಬ್ರಹ್ಮಾಂಡ. ಈ ದೇಹದಲ್ಲಿ ಇರುವುದೆಲ್ಲ ವಿಶ್ವದಲ್ಲಿಯೂ ಇದೆ. ಅದರಲ್ಲಿ ಇಲ್ಲದುದು ಇನ್ನೊಂದರಲ್ಲೂ ಇಲ್ಲ. ನಮ್ಮ ದೇಹ ಮಣ್ಣಿನಿಂದ ಆದುದು, ಮಣ್ಣಿನ ಪಾಲಾಗುವುದು. ದೇಹದಲ್ಲಿಯೂ ವಿಶ್ವದಲ್ಲಿಯೂ ಪೃಥ್ವಿ, ನೀರು, ತೇಜಸ್ಸು, ವಾಯು, ಆಕಾಶ—ಈ ಪಂಚ ಮಹಾಭೂತಗಳಿವೆ. ಭೂಮಿಯಲ್ಲಿ ವಿಧವಿಧದ ಜೀವರಾಶಿ ಇದೆ; ಶರೀರದಲ್ಲಿಯೂ ಅನಂತಜೀವಕಣಗಳಿವೆ. ಶರೀರ ಸತ್ತು ಹುಟ್ಟುತ್ತದೆ; ಭೂಮಿಯೂ ಪರಿವರ್ತನೆಹೊಂದುತ್ತದೆ. ಅದ್ದರಿಂದ ನಮ್ಮ ಶರೀರದ ಪೂರ್ಣ ನಿಜ ಜ್ಞಾನ ನಮಗೆ ಬಂದರೆ ವಿಶ್ವದ ನಿಜ ಜ್ಞಾನವೂ ಲಭಿಸುತ್ತದೆ. ಅದನ್ನು ಅರಿಯಲು ಎಲ್ಲೋ ದೂರ ಹೋಗಬೇಕಾಗಿಲ್ಲ. ಶರೀರ ನಮ್ಮ ಬಳಿಯೇ ಇದೆ. ಅದನ್ನು ಅರಿತರೆ ನಮ್ಮ ಗುರಿ ಸಾಧಿಸಿದಂತೆಯೇ. ವಿಶ್ವವನ್ನು ಅರಿಯಲು ನಾವು ಮಾಡುವ ಪ್ರಯತ್ನ ಎಂದೂ ಅಪೂರ್ಣವೇ. ಆದುದರಿಂದ ದೇಹದಲ್ಲಿಲ್ಲದುದು ಬೇರೆ ಏನೂ ವಿಶ್ವದಲ್ಲಿಲ್ಲವೆಂದೂ, ಆತ್ಮನನ್ನು ಅರಿತರೆ ಅದರೊಡನೆ ಸಕಲ ಜ್ಞಾನವೂ

ಲಭಿಸುವುದೆಂದೂ ಜ್ಞಾನಿಪುರುಷರು ಹೇಳಿದಾರೆ. ಈ ಆತ್ಮಜ್ಞಾನವನ್ನು ಪಡೆಯುವ ಪ್ರಯತ್ನದಲ್ಲಿ ಇತರ ವಸ್ತುಗಳ ವಿಷಯವಾಗಿಯೂ ನಮಗೆ ಏನಾದರೂ ತಿಳಿದುಬಂದರೆ, ಈ ಆತ್ಮಜ್ಞಾನದ ಭಾಗವೇ ಆಗಿರುವ ಬಾಹ್ಯಜ್ಞಾನದಿಂದ ಲಭಿಸುವ ಸುಖವನ್ನು ನಾವು ಅನುಭವಿಸುವ ಹಕ್ಕನ್ನು ಹೊಂದಿದೇವೆ.

ನಾವು ಭಗವದ್ಗೀತೆಯ ಕೃಷ್ಣನನ್ನೂ ಐತಿಹಾಸಿಕ ಕೃಷ್ಣನನ್ನೂ ಒಂದುಗೂಡಿಸಬಾರದು. ಗೀತೆಯ ಕೃಷ್ಣ ಹಿಂಸೆ–ಅಹಿಂಸೆಗಳ ಮೀಮಾಂಸೆಯನ್ನು ಮಾಡುತ್ತಿರಲಿಲ್ಲ. ಅರ್ಜುನನು ತನ್ನ ಸ್ವಜನರನ್ನು ಕೊಲ್ಲಲು ಮನಸ್ಸಿಲ್ಲದವನಾಗಿದ್ದನೇ ವಿನಾ ಕೊಲ್ಲುವ ಕ್ರಿಯೆಗೇ ಅಲ್ಲ. ಆದ್ದರಿಂದ ಸ್ವಧರ್ಮವನ್ನು ಎಸಗುವಾಗ ಸ್ವಜನರು–ಪರಜನರು ಎಂದು ಪ್ರತ್ಯೇಕ ಎಣಿಸಬಾರದೆಂದು ಕೃಷ್ಣ ಸೂಚಿಸುತ್ತಾನೆ. ಆದರೆ ಗೀತೆಯ ಕಾಲದಲ್ಲಿ ಯುದ್ಧ ಯುಕ್ತವೇ, ಅಯುಕ್ತವೇ ? ಎಂಬ ಪ್ರಶ್ನೆಯನ್ನು ಯಾವೊಬ್ಬ ಪ್ರಮುಖ ವ್ಯಕ್ತಿಯೂ ಎತ್ತಿದಂತೆ ಕಂಡುಬರುವುದಿಲ್ಲ. ಹಾಗೆ ನೋಡಿದರೆ ಆ ಪ್ರಶ್ನೆ ಇತ್ತೀಚಿನದು. ಆಗಿನ ಕಾಲದ ಎಲ್ಲ ಹಿಂದೂಗಳೂ ಅಹಿಂಸೆಯಲ್ಲಿ ನಂಬಿಕೆಯನ್ನಿಟ್ಟಿದ್ದರು, ಆಗಲೂ ಈಗಿನಂತೆಯೇ ಯಾವುದು ಹಿಂಸೆ, ಯಾವುದು ಹಿಂಸೆಯಲ್ಲ ಎಂಬುದಕ್ಕೆ ಚರ್ಚೆನಡೆಯುತ್ತಿತ್ತು. ನಾವು ಅಹಿಂಸೆ ಎಂಬುದಾಗಿ ಪರಿಗಣಿಸಿರುವ ವಿಷಯಗಳು ಮುಂದಿನ ಪೀಳಿಗೆಯವರಿಂದ ಹಿಂಸೆ ಎಂಬುದಾಗಿ ಪರಿಗಣಿಸಲ್ಪಡಬಹುದು. ಏಕೆಂದರೆ ನಾವು ಹಾಲನ್ನೂ ಧಾನ್ಯಗಳನ್ನೂ ಉಪಯೋಗಿಸುವಾಗ ಜೀವನಾಶ ಮಾಡುತ್ತೇವೆ. ಆದ್ದರಿಂದ ಮುಂದಿನ ಪೀಳಿಗೆಯವರು ಹಾಲನ್ನು ವರ್ಜಿಸುವುದಲ್ಲದೆ ಧಾನ್ಯೋತ್ಪತ್ತಿಯನ್ನೂ ತ್ಯಜಿಸಿಯಾರು. ಹಾಲನ್ನೂ ಧಾನ್ಯಗಳನ್ನೂ ಸೇವಿಸಿದರೂ ನಾವು ಅಹಿಂಸಾವಾದಿಗಳೆಂದುಕೊಳ್ಳುವಂತೆ, ಗೀತೆಯ ಕಾಲದಲ್ಲಿ ಯುದ್ಧಮಾಡುವುದು ಅತ್ಯಂತ ಸಾಮಾನ್ಯವಾಗಿದ್ದುದರಿಂದ ಅದು ಅಹಿಂಸೆಗೆ ವಿರೋಧವೆಂದು ಯಾರೂ ಭಾವಿಸಿರಲಿಲ್ಲ. ಆದ್ದರಿಂದ ಗೀತೆ ಯುದ್ಧದ ನಿದರ್ಶನವನ್ನು ತೆಗೆದುಕೊಂಡಿರುವುದರಲ್ಲಿ ನನಗೆ ಯಾವ ತಪ್ಪೂ ಕಾಣುವುದಿಲ್ಲ. ಆದರೆ ನಾವು ಗೀತೆಯನ್ನೆಲ್ಲ ಅಧ್ಯಯನಮಾಡಿ ಅದರಲ್ಲಿ ಕಂಡುಬರುವ ಸ್ಥಿತಪ್ರಜ್ಞ, ಬ್ರಹ್ಮಭೂತ,

ಭಕ್ತ ಮತ್ತು ಯೋಗಿ ಮೊದಲಾದವರ ವರ್ಣನೆಗಳನ್ನು ಪರಿಶೀಲಿಸಿದಾಗ, ಗೀತೆಯ ಕೃಷ್ಣ ಅಹಿಂಸೆಯ ಅವತಾರವಾಗಿದ್ದನೆಂದೂ ಅವನು ಅರ್ಜುನನನ್ನು ಯುದ್ಧಮಾಡೆಂದು ಬೋಧಿಸಿದುದರಿಂದ ಅವನ ಮಹತ್ವ ಕಡಮೆಯಾಗುವುದಿಲ್ಲವೆಂದೂ ತೀರ್ಮಾನಕ್ಕೆ ಬರುತ್ತೇವೆ. ಅದಕ್ಕೆ ಪ್ರತಿಯಾಗಿ ಬೇರೆ ಬೋಧೆಯನ್ನು ಅವನು ಮಾಡಿದ್ದರೆ ಅವನ ಜ್ಞಾನ ಅಪೂರ್ಣ ಎಂಬುದು ಗೋಚರವಾಗುತ್ತಿತ್ತು. ಅವನಿಗೆ 'ಯೋಗೀಶ್ವರ'ನೆಂಬ ಬಿರುದೂ 'ಪೂರ್ಣಾವತಾರ'ನೆಂಬ ಹೆಸರೂ ಬರುತ್ತಿರಲಿಲ್ಲ. ಇವೆಲ್ಲವನ್ನೂ ನೀವು ನನ್ನ 'ಅನಾಸಕ್ತಿಯೋಗ'ದಲ್ಲಿ ನೋಡಬೇಕು.

ಜೂನ್ ೧೭, ೧೯೩೨

(ಸಾಕಾರ ಮೂರ್ತಿಪೂಜೆಗೆ ಬಾಪೂ ಏತಕ್ಕೆ ವಿರೋಧವೆಂಬ ಪ್ರಶ್ನೆಯನ್ನು ಪ್ರೇಮಾಬೆನ್ ಕೇಳಿದಳು. ರಾಜಕೀಯ ಮತ್ತು ಸಾಮಾಜಿಕ ಪರಿಸ್ಥಿತಿಗಳು ಪರಿವರ್ತನೆಹೊಂದಿದಂತೆ ದೇವರ ಬಗೆಗೆ ನಮ್ಮ ಕಲ್ಪನೆಯೂ ಕಾಲಕಾಲಕ್ಕೆ ಪರಿವರ್ತನೆಹೊಂದುತ್ತಹೋಗಿದೆ. ಶಂಕರಾಚಾರ್ಯರ ಕಾಲದಲ್ಲಿ ಸ್ವರಾಜ್ಯವಿತ್ತು; ಆದ್ದರಿಂದ ಅವರು ಆತ್ಮವೇ ಪರಬ್ರಹ್ಮವೆಂದರು. ರಾಮಾನುಜಾಚಾರ್ಯರ ಕಾಲದಲ್ಲಿ ಸ್ವರಾಜ್ಯ ಕಳೆದುಹೋಗಿತ್ತು; ಆದ್ದರಿಂದ ಅವರು ಜೀವ ಭಗವಂತನ ದಾಸ, ಶರಣನಾಗಬೇಕೆಂದು ಬೋಧಿಸಿದರು. ತುಕಾರಾಮ ಪಂಡರಾಪುರದ ವಿಠಲನ ವಿಗ್ರಹದಲ್ಲಿ ದೇವರನ್ನು ಕಂಡರು. ಆಕೆಗೆ ಬಾಪೂ ಕೊಟ್ಟ ಉತ್ತರವಿದು :)

ಪ್ರಾರ್ಥನೆಗೆ ಸಾಕಾರ ಮೂರ್ತಿಯನ್ನು ನಾನೇನೂ ನಿಷೇಧಿಸುವುದಿಲ್ಲ. ನಾನು ಮಾತ್ರ ನಿರಾಕಾರವನ್ನೇ ಉಪಾಸಿಸಲು ಆರಿಸಿಕೊಂಡಿದೇನೆ. ಇದು ಬಹುಶಃ ಯುಕ್ತವಲ್ಲದಿರಬಹುದು; ಒಬ್ಬನಿಗೆ ಒಂದು ಯುಕ್ತ ಎನಿಸಿದರೆ ಇನ್ನೊಬ್ಬನಿಗೆ ಇನ್ನೊಂದು ಬಗೆ; ಈ ಎರಡಕ್ಕೂ ಹೋಲಿಕೆ ಸಲ್ಲದು. ಶಂಕರ–ರಾಮಾನುಜರ ವಿಷಯದಲ್ಲಿ ನೀನು ಹೇಳಿರುವುದು ಸರಿಯಲ್ಲ. ಆಧ್ಯಾತ್ಮಿಕ ಅನುಭಾವ ಪರಿಸ್ಥಿತಿಯನ್ನು ಮೀರಿ ಪರಿಣಾಮ ಮಾಡಬಲ್ಲದು. ಸತ್ಯಶೋಧಕ ತನ್ನ ಪರಿಸ್ಥಿತಿಯನ್ನು ಮೆಟ್ಟಿನಿಲ್ಲಬೇಕು. ಪರಿಸ್ಥಿತಿಯ ಆಧಾರಹೊಂದಿದ ಅಭಿಪ್ರಾಯಗಳು ಅನೇಕ ವೇಳೆ ತಪ್ಪಾಗುತ್ತವೆ. ಕಾಯ ಮತ್ತು ಆತ್ಮದ ನಿದರ್ಶನವನ್ನೇ ನೋಡು; ಎರಡಕ್ಕೂ

ನಿಕಟ ಸಂಬಂಧವಿದೆ; ಎರಡೂ ಬೇರೆ ಬೇರೆ ಎಂಬ ಭಾವ ತತ್‌ಕ್ಷಣ ಬರುವುದೇ ಇಲ್ಲ. ಆದ್ದರಿಂದಲೇ ಪರಿಸ್ಥಿತಿಯನ್ನು ಮೆಟ್ಟಿ, 'ಆತ್ಮ ದೇಹವಲ್ಲ' ಎಂದು ಸಾರಿದವನು ಮಹಾನುಭಾವನೇ ಸರಿ. ತುಕಾರಾಮ ರಂಥ ಸಂತರ ಮಾತನ್ನು ಕೇವಲ ಶಾಬ್ದಿಕ ರೂಪದಲ್ಲಿ ನಾವು ಪರಿಗಣಿಸ ಬಾರದು. 'ಕೇಲ ಮತಿಚ್ಯಾ ಪಶುಪತಿ' ಮೊದಲಾದ ಅವರ ಅಭಂಗ ಗಳನ್ನು ನೀನು ಓದಬೇಕೆಂದು ಸಲಹೆಮಾಡುತ್ತೇನೆ. ಪುಣ್ಯಪುರುಷರ ಮಾತಿನ ಅಂತರಾರ್ಥವನ್ನು ಗ್ರಹಿಸಬೇಕೆಂಬುದೇ ಇದರ ನೀತಿಪಾಠ. ಅವರು ದೇವರನ್ನು ಯಾವುದೇ ಒಂದು ರೂಪದಲ್ಲಿ ಉಪಾಸನೆಮಾಡಿದರೂ ಅದು ನಿರಾಕಾರದ ಉಪಾಸನೆಯೇ ಆಗಿತ್ತೆಂದು ಹೇಳಬಹುದು. ನಮ್ಮಂಥ ಸಾಮಾನ್ಯ ಮಾನವರಿಗೆ ಇದು ಅಸಾಧ್ಯವೇ ಸರಿ. ಆದ್ದರಿಂದ ಅವರ ಮಾತುಗಳ ಅರ್ಥದ ಬಗೆಗೆ ನಾವು ಆಳವಾಗಿ ನೋಡದಿದ್ದರೆ ಪೇಚಿನಲ್ಲಿ ಸಿಕ್ಕಿಕೊಳ್ಳುತ್ತೇವೆ.

ತನ್ನ ಕಾರ್ಯದಲ್ಲಿಯೇ ನಿಮಗ್ನನಾದ ವ್ಯಕ್ತಿಗೆ ಅದು ಭಾರವೆಂದೇ ಗೋಚರಿಸದು; ಆದ್ದರಿಂದ ಅದು ಅವನಿಗೆ ಬಳಲಿಕೆಯನ್ನುಂಟುಮಾಡದು. ಹರ್ಷವಿಲ್ಲದೆ ಮಾಡಿದ ಅತ್ಯಂತ ಪುಟ್ಟ ಕೆಲಸವೂ ಆಯಾಸವನ್ನುಂಟು ಮಾಡುತ್ತದೆ. ಸೆರೆಮನೆಯಲ್ಲಿರುವ ಪುರುಷನಿಗೆ ಒಂದೊಂದು ದಿವಸವೂ ಒಂದೊಂದು ವರ್ಷದಷ್ಟು ದೀರ್ಘವೆನಿಸುತ್ತದೆ; ಇಂದ್ರಿಯಲಾಲಸೆಗೆ ತುತ್ತಾದವನಿಗೆ ಒಂದು ವರ್ಷಕಾಲವೂ ಒಂದು ದಿನದಂತೆ. ಹಿಂದೆ ಐರೋಪ್ಯ ಸಂಗೀತವನ್ನು ಕೇಳಿದಾಗ ನನಗೆ ಶೀಘ್ರವೇ ಬೇಸರಿಕೆಯಾಗು ತ್ತಿತ್ತು; ಆದರೆ ಈಗ ಸ್ವಲ್ಪ ಅರ್ಥವಾಗುತ್ತದೆ, ಸ್ವಲ್ಪ ಮೆಚ್ಚುತ್ತೇನೆ.

ಭಗವಂತನ ಭಕ್ತ ತನ್ನ ಕ್ರಿಯೆಯನ್ನು ಎಂಟು ಘಂಟೆಗಳ ಪದ್ಧತಿ ಯಿಂದ ಅಳತೆಮಾಡುವುದಿಲ್ಲ. ಅವನು ಸದಾ ಕರ್ಮಚಾರಿ. ಅವಕಾಶ ಸಿಕ್ಕಿದಾಗಲೆಲ್ಲ ಅವನು ಒಳ್ಳೆಯದನ್ನು ಮಾಡುತ್ತಾನೆ. ಎಲ್ಲೆಲ್ಲಿಯೂ, ಎಲ್ಲ ಕಾಲವೂ ಭಗವಂತನ ಕೈಂಕರ್ಯಕ್ಕೆ ಅವನಿಗೆ ಅವಕಾಶವೇ ಆಗುತ್ತದೆ. ಅವನು ಹೋದೆಡೆಯಲ್ಲೆಲ್ಲ ಮಾಧುರ್ಯವನ್ನು ಬೀರುತ್ತಾನೆ.

ಜೂನ್ ೨೩, ೧೯೩೨

ನನಗೆ ನಾರಾಯಣದಾಸನಲ್ಲಿ* ಪೂರ್ಣ ನಂಬಿಕೆ ಇದೆ. ಆತನು ಶಾಂತಚಿತ್ತನಾಗಿರುವೆನೆಂದು ಹೇಳುವುದಾದರೆ ಆ ರೀತಿ ಇಲ್ಲವೆಂದು ನಂಬಲು ನಾನು ಸಿದ್ಧನಿಲ್ಲ. ಆತನನ್ನು ಎಚ್ಚರಿಸಿದೇನೆ, ಆದರೆ ಇಲ್ಲಿಂದಲೇ ಟೀಕಿಸಲು ಇಚ್ಛಿಸುವುದಿಲ್ಲ. ವ್ಯಾಮೋಹಕ್ಕೆ ಗುರಿಯಾಗದೆ ಕೆಲಸಮಾಡುವ ಸಾಮರ್ಥ್ಯ ಆತನಿಗಿದೆ. ವ್ಯಾಮೋಹರಹಿತ ವ್ಯಕ್ತಿ ವ್ಯಾಮೋಹಭರಿತ ವ್ಯಕ್ತಿಗಿಂತ ಹೆಚ್ಚು ಶ್ರಮವಹಿಸಿ ಕೆಲಸಮಾಡಬಲ್ಲ. ಅವನಿಗೆ ಏನೂ ಕೆಲಸವಿಲ್ಲವೇನೋ ಎಂಬಂತೆ ಕಂಡುಬರುತ್ತದೆ; ಆಯಾಸ ಹೊಂದುವವರಲ್ಲಿ ಆತನೇ ಕಡೆಯವನು. ವಾಸ್ತವಿಕವಾಗಿ ಆತನು ಆಯಾಸವನ್ನೇ ಹೊಂದಬಾರದು; ಆದರೆ ಇದು ಕೇವಲ ಆದರ್ಶ. ನಾನಂತೂ ಸ್ಥಳದಲ್ಲಿಲ್ಲ. ನೀನು† ಅಲ್ಲೇ ಇದೀಯೆ. ನಾರಾಯಣದಾಸನು ಆತ್ಮವಂಚನೆ ಮಾಡಿಕೊಳ್ಳುತ್ತಿದಾನೆಂದು ನಿನಗೆ ಅನಿಸಿದರೆ ನೀನು ಆತನಿಗೆ ಎಚ್ಚರ ಕೊಡಲೇಬೇಕು. ಆತ ನಿನ್ನ ಎಚ್ಚರದ ನುಡಿಯನ್ನು ಪರಿಭಾವಿಸದಿದ್ದರೆ, ನೀನು ಆತನನ್ನು ಸತ್ಯಾಗ್ರಹಿ ಎಂದು ಭಾವಿಸುವವರೆಗೂ ವಿಷಯವನ್ನು ಅಷ್ಟಕ್ಕೇ ಬಿಡಬೇಕು. ನಮ್ಮ ಕಣ್ಣುಗಳೇ ನಮ್ಮನ್ನು ಎಷ್ಟೋ ಸಲ ವಂಚಿಸುತ್ತವೆ. ನಿನ್ನ ಮುಖ ನೋಡಿ ನೀನು ವ್ಯಸನಭರಿತಳಾಗಿದೀಯೆಂದು ನಾನು ಹೇಳಬಹುದು; ಆದರೆ ನೀನೇ ವ್ಯಸನವಿಲ್ಲವೆಂದು ಹೇಳಿದರೆ ನಾನು ನಿನ್ನ ಮಾತನ್ನು ನಂಬಲೇಬೇಕು. ನೀನು ನನ್ನಿಂದ ಸತ್ಯವನ್ನು ಮರೆಮಾಚುವೆಯೆಂದು ಭಾವಿಸುವುದಾದರೆ, ಆ ಮಾತು ಬೇರೆ. ಅಂಥ ಸಂದರ್ಭದಲ್ಲಿ ನಾನು ನಿಮ್ಮನ್ನು ಪ್ರಶ್ನಿಸುವುದೇ ಫಲಕಾರಿಯಲ್ಲ; ನಾನು ಬೇರೆ ಮೂಲಗಳಿಂದ ಶೋಧನೆ ನಡೆಸಬೇಕು. ಆದರೆ ಆಶ್ರಮಜೀವನವನ್ನು ನಡೆಸಬೇಕಾದ ಮಾರ್ಗವೇ ಹಾಗೆ. ಸತ್ಯವೇ ಅದರ ಆಧಾರ. ಆದುದರಿಂದ ಎಷ್ಟೇ ಒಳ್ಳೆಯ ಉದ್ದೇಶಗಳಿಂದ ಯಾರನ್ನು ಯಾರೂ ಮೋಸಗೊಳಿಸಲು ಸಾಧ್ಯವಿಲ್ಲ.

---

* ಗಾಂಧೀಜೀಯವರ ಸಂಬಂಧಿಗಳು; ಆಶ್ರಮದ ಆಡಳಿತದ ಹೊಣೆಯನ್ನು ಹೊತ್ತಿದ್ದರು.

† ಪ್ರೇಮಾ ಬೆಹನ್.

(ಶಾರದಾ* ಒಂದು ಪತ್ರ ಬರೆದು ಆಶ್ರಮದ ನವಿಲು ಮೃತಿಹೊಂದಿತೆಂದೂ ಅದು ಬದುಕಿದ್ದಾಗ ಎಷ್ಟು ಸೊಗಸಾಗಿತ್ತೋ ಸಾವಿನಲ್ಲಿ ಅಷ್ಟೇ ಕರಾಳವಾಗಿತ್ತೆಂದು ತಿಳಿಸಿದ್ದಳು. ಇದಕ್ಕೆ ಬಾಪೂ ಕೊಟ್ಟ ಉತ್ತರ :)

ನವಿಲಿನಂತೆಯೇ ನಮ್ಮ ಬಾಳೂ ಸಹ. ನಾವೂ ಅದೇ ಬಗೆಯ ದೋಣಿಯಲ್ಲಿ ಯಾನ ಮಾಡುತ್ತಿದೇವೆ. ಜನ ಮೃತಿಹೊಂದಿದಮೇಲೆ ನಾವು ಅವರನ್ನು ನೋಡಲು ಇಚ್ಛಿಸುವುದಿಲ್ಲ; ಅವರು ಎಷ್ಟೇ ಸುಂದರ ವದನರಾಗಿದ್ದರೂ ಅವರನ್ನು ದಹನಮಾಡುತ್ತೇವೆ. ಆದುದರಿಂದ ನಾವು ದೇಹದ ಮೇಲೆ ವ್ಯಾಮೋಹವನ್ನು ಇಟ್ಟುಕೊಳ್ಳಬಾರದು.

(ನಾವು ಹೇಗೆಹೇಗೋ ಇದ್ದ ಲಕೋಟೆಗಳ ಮೇಲಿನ ವಿರೂಪವನ್ನು ಮುಚ್ಚುವುದಕ್ಕೋಸ್ಕರ ಬಣ್ಣಬಣ್ಣದ ಚೂರು ಕಾಗದಗಳನ್ನು ಅಂಟಿಸಿದ್ದೆವು. ಪ್ರೇಮಾ ಬೆಹನ್ ನಮ್ಮನ್ನೇ ಅನುಕರಿಸಿದಳು. ಒಳ್ಳೆಯ ಲಕೋಟೆಯ ಮೇಲೆ ಅಡ್ಡದಿಡ್ಡಿ ಇರುವ ಚೂರು ಕಾಗದಗಳನ್ನು ಅಂಟಿಸಿದಳು. ಇದನ್ನು ನೋಡಿದ ಬಾಪೂ ಹೀಗೆ ಬರೆದರು :)

ನೀನು ಲಕೋಟೆಯನ್ನು ಸಿಂಗರಿಸಲು ಯತ್ನಿಸಿ ಅದನ್ನು ಕೆಡಿಸುವುದರಲ್ಲಿ ಯಶಸ್ವಿಯಾಗಿದೀಯೆ. ಉಪಯುಕ್ತತೆಯನ್ನು ಪರಿಗಣನೆಗೆ ತೆಗೆದುಕೊಳ್ಳದ ಸಿಂಗಾರದ ರೀತಿಯೆಲ್ಲ ಹೀಗೆಯೇ. ನೀನು ಅಂಟಿಸಿದ ಚೂರು ಕಾಗದಗಳು ಭದ್ರವಾಗಿರಲಿಲ್ಲ; ಅವು ವಿಕಾರವಾಗಿ ಕಂಡುಬಂದವು; ಉಪಯುಕ್ತತೆಯಂತೂ ಇರಲೇ ಇಲ್ಲ. ವೃಥಾ ಶ್ರಮ, ಕಾಲನಷ್ಟ ಆಯಿತು — ಅಷ್ಟೆ. ಹಾಗೆಯೇ ರಾಷ್ಟ್ರಕ್ಕೆ ಸೇರಬೇಕಾದ ಹೆಚ್ಚು ಕಾಗದವೂ ನಷ್ಟವಾಯಿತು. ಇದರಿಂದ ಕಲಿಯಬೇಕಾದ ನೀತಿ ಇಷ್ಟೆ : (೧) ಚೆನ್ನಾಗಿ ಅರಿತುಕೊಳ್ಳದೆ ಯಾವುದನ್ನೂ ಅನುಕರಣಮಾಡಬಾರದು. (೨) ಕೇವಲ ಅಲಂಕಾರಕ್ಕಾಗಿಯೇ ಅಲಂಕಾರ ಮಾಡುವುದು ಅಲಂಕಾರ ಎನಿಸದು. ಯೂರೋಪಿನ ಪ್ರಖ್ಯಾತ ಚರ್ಚುಗಳಲ್ಲೆಲ್ಲ ಕಂಡುಬರುವ ಪ್ರತಿಯೊಂದು ಕೆತ್ತನೆಯ ಕೆಲಸವೂ ಒಂದಲ್ಲ ಒಂದು ಬಗೆಯ ಉಪಯುಕ್ತತೆಯಿಂದ ಕೂಡಿದೆಯೆಂದು ಹೇಳುತ್ತಾರೆ. ಇದು ವಾಸ್ತವ

---

* ಆಶ್ರಮದ ಒಬ್ಬ ಹುಡುಗಿ.

ಇದ್ದರೂ ಇರಬಹುದು, ಇಲ್ಲದಿದ್ದರೂ ಇರಬಹುದು. ಆದರೆ ನಾನು ಸೂಚಿಸಿರುವ ನಿಯಮ ಯಥಾರ್ಥವೆಂಬುದರಲ್ಲಿ ಯಾವ ಸಂಶಯವೂ ಇಲ್ಲ.

ಜನರಿಂದ ಸಾಧ್ಯವಿರುವಷ್ಟು ಕೆಲಸ ತೆಗೆಸಿಕೊಳ್ಳುವ ಸಾಮರ್ಥ್ಯ ನನಗಿದೆಯೆಂಬ ಸಾಮಾನ್ಯ ನಂಬಿಕೆಯೊಂದಿದೆ. ಇದು ನಿಜವಿದ್ದರೆ, ಕಾರಣ ಇಷ್ಟು : ಯಾರನ್ನೂ ನಾನು ಕಳ್ಳರೆಂದು ಸಂಶಯಪಡುವುದಿಲ್ಲ ; ಅವರು ಮಾಡಬಹುದಾದ ಪ್ರಯತ್ನದಿಂದ ನಾನು ತೃಪ್ತನಾಗುತ್ತೇನೆ. ಯಾರನ್ನೂ ಮೋಸಮಾಡಲಾರದಷ್ಟು ಸುಲಭ ರೀತಿಯಲ್ಲಿ ನನ್ನನ್ನು ಮೋಸಮಾಡಲು ಸಾಧ್ಯ ಎಂದು ಕೆಲವರು ಹೇಳುತ್ತಾರೆ. ಅವರ ಮಾತು ನಿಜವಿದ್ದರೂ ನನಗೇನು ಅದರಿಂದ ವ್ಯಥೆಯಿಲ್ಲ. ನಾನು ಯಾರನ್ನೂ ಮೋಸಮಾಡಲು ಅಸಮರ್ಥನೆಂಬ ಪ್ರಶಂಸೆಯೇ ಸಾಕು. ಬೇರೆ ಯಾರೂ ಇಂಥ ಪ್ರಶಂಸೆಯನ್ನು ನನ್ನ ಬಗೆಗೆ ಮಾಡಲು ಸಿದ್ಧವಿರದಿದ್ದರೂ ನಾನೇ ಸ್ವತಃ ಪ್ರಶಂಸೆ ಮಾಡಿಕೊಳ್ಳುತ್ತೇನೆ. ಅಸತ್ಯದಷ್ಟು ಬೇರೆ ಯಾವುದೂ ನನಗೆ ಹಿಂಸೆಯನ್ನುಂಟುಮಾಡಲಾರದು.

‘ ಬಹುಜನದ ಬಹುಸುಖ ’ ಎಂಬ ತತ್ತ್ವದಲ್ಲಿ ನನಗೆ ನಂಬಿಕೆಯಿಲ್ಲ ; ಶಕ್ತಿಯೇ ನ್ಯಾಯ ಎಂಬುದನ್ನೂ ನಾನು ಒಪ್ಪಲಾರೆ. ಸರ್ವೋದಯವೇ ಮಾನವರ ಗುರಿಯಾಗಿರಬೇಕು ; ಇದರಲ್ಲಿ ನಿರ್ಬಲರಿಗೆ ಪ್ರಥಮ ಸೇವೆ ಸಲ್ಲಬೇಕು. ನಾವು ದ್ವಿಪಾದ ಮಾನವರೆನಿಸಿದರೂ ಚತುಷ್ಪಾದ ಪಶುವಿನ ಲಕ್ಷಣವನ್ನು ನಾವಿನ್ನೂ ತ್ಯಜಿಸಬೇಕಾಗಿದೆ.

ಆಗಸ್ಟ್ ೭, ೧೯೩೨

ಪ್ರೇಮಾ ಬೆಹನ್‌ಳಿಗೆ ಹೀಗೆ ಬರೆದರು : “ ಅಂತರ್ವಾಣಿ ಎಂಬುದು ವರ್ಣನೆಗೆ ಸಿಲುಕವಂಥದಲ್ಲ. ಎಷ್ಟೋ ಸಲ ನಮಗೆ ಒಂದು ಅಂತರ್ಬೋಧೆಯಾದಂತೆ ಅನುಭವವಾಗುತ್ತದೆ. ಇದು ನನಗೆ ೧೯೦೬ರಿಂದ ಪ್ರಾರ್ಥನಾ ಸಮಯದಲ್ಲಿ ಗೋಚರವಾಗುತ್ತದೆ ಎನ್ನಬಹುದು. ನೀನು ಪ್ರಶ್ನಿಸಿರುವುದರಿಂದ ನೆನಪು ಮಾಡಿಕೊಂಡು ಹೇಳುತ್ತಿದ್ದೇನೆ. ಇದನ್ನು ಬಿಟ್ಟರೆ, ನನ್ನ ಜೀವನದಲ್ಲಿ ಬೇರಾವ ಕಾಲದಲ್ಲಿಯೂ ಹೊಸ ಅನುಭವ ಬಂದಂತೆ

ಇಲ್ಲ. ನಮ್ಮ ತಲೆಯ ಮೇಲಿನ ರೋಮವು ಹೇಗೆ ಗೋಚರವಿಲ್ಲದಂತೆ ಬೆಳೆಯುತ್ತದೆಯೋ ಹಾಗೆಯೇ ನನ್ನ ಆಧ್ಯಾತ್ಮಿಕ ಬೆಳವಣಿಗೆಯೂ ಆಗಿದೆ.

"ನನಗೆ ಹಿಂದೆಯೂ ವಿರೋಧಿಗಳಿದ್ದರು; ಈಗಲೂ ಇದ್ದಾರೆ. ಆದರೆ ಅವರ ಬಗೆಗೆ ನಾನು ಎಂದೂ ಕ್ರೋಧಗೊಂಡಿಲ್ಲ. ಕನಸಿನಲ್ಲೂ ಅವರ ಬಗೆಗೆ ನಾನು ಕೇಡನ್ನು ಬಯಸಿಲ್ಲ. ಹೀಗಾಗಿ, ಅನೇಕ ವಿರೋಧಿಗಳು ಗೆಳೆಯರಾಗಿದ್ದಾರೆ. ಇಂದಿನವರೆಗೂ ನನ್ನ ಬಗೆಗೆ ಆದ ಯಾವ ವಿರೋಧವೂ ಯಶಸ್ವಿಯಾಗಿಲ್ಲ. ಇಲ್ಲಿಯೇ ಈವರೆಗೆ ನನ್ನ ಮೇಲೆ ಮೂರು ಸಲ ದಾಳಿ ನಡೆದರೂ ನಾನು ಇನ್ನೂ ಇಲ್ಲೇ ಇದ್ದೇನೆ. ಇದರ ಅರ್ಥ — ವಿರೋಧಿ ಎಂದಿಗೂ ತನ್ನ ಗುರಿಯನ್ನು ಸಾಧಿಸಿಕೊಳ್ಳಲಾರ ಎಂದಲ್ಲ. ಅವನು ಯಶ ಪಡೆಯಲಿ ಬಿಡಲಿ, ಅದರ ಬಗೆಗೆ ನಾನು ಅನಾಸಕ್ತ. ಆತನಿಗೆ ಒಳ್ಳೆಯ ದನ್ನು ಆಶಿಸಿ, ಸಮಯ ದೊರೆತಾಗ ಸಹಾಯಮಾಡುವುದೇ ನನ್ನ ಕರ್ತವ್ಯ. ಈ ತತ್ತ್ವವನ್ನು ನನ್ನ ಶಕ್ತಿಮೀರಿ ಅನುಷ್ಠಾನಕ್ಕೆ ತರಲು ಯತ್ನಿಸಿದೇನೆ. ಇದು ನನ್ನ ಮನೋರಚನೆಯ ಒಂದು ಅಭಿನ್ನ ಅಂಗವೆಂದು ನಂಬಿದೇನೆ. ಸಹಸ್ರಾರು ಜನ ನನ್ನನ್ನು ಗೌರವಿಸಿದಾಗ ನನಗೆ ಪೇಚಾಟವಾಗುತ್ತದೆ. ಈ ಗೌರವಕ್ಕೆ ನಾನು ಪಾತ್ರನೆಂದು ನನಗೆ ಎಂದೂ ನಂಬಿಕೆ ಬಂದಿಲ್ಲ; ಇದಕ್ಕೆ ನಾನು ಪೂರ್ಣವಾಗಿ ಉದಾಸೀನಭಾವದಿಂದಿರುತ್ತೇನೆ; ಅಲ್ಲದೆ ನನ್ನ ಅಪಾತ್ರತೆಯ ಅರಿವಿನಿಂದ ಕೂಡಿರುತ್ತೇನೆ. ಯಾವ ಕಾಲಕ್ಕೂ ನಾನು ಗೌರವಕ್ಕಾಗಿ ಹಾತೊರೆದುದು ನನಗೆ ನೆನಪಿಲ್ಲ. ಆದರೆ ಸದಾ ಕೆಲಸಮಾಡಲು ಹಾತೊರೆದಿದೇನೆ. ನನ್ನನ್ನು ಗೌರವಿಸಿದವರನ್ನೆಲ್ಲ ನನ್ನ ಸಹೋದ್ಯೋಗಿಗಳನ್ನಾಗಿ ಪರಿವರ್ತಿಸಲು ಯತ್ನಿಸಿದೇನೆ. ಅವರು ಈ ಪರಿವರ್ತನೆಯನ್ನು ಪ್ರತಿಭಟಿಸಿದಾಗಲೂ ನಾನು ಅವರ ಆಕ್ರಮಣವನ್ನು ಪರಿಗಣಿಸಿಲ್ಲ. ನಾನು ನನ್ನ ಗುರಿಯನ್ನು ಹೊಂದಿದರೆ ಪಕ್ಷಿಯಂತೆ ಹರ್ಷ ಪಟ್ಟೇನು. ಆದರೆ ಅದು ಸದ್ಯಕ್ಕೆ ಒಂದು ಬಯಕೆ ಮಾತ್ರವಾಗಿದೆ.

"ಜಗತ್ತನ್ನು ಎದುರಿಸಿ ನಿಲ್ಲಲು ಅಹಂಕಾರವನ್ನಾಗಲೀ ಅಸಭ್ಯತೆ ಯನ್ನಾಗಲೀ ಯಾರೂ ಅಭ್ಯಸಿಸಬೇಕಾಗಿಲ್ಲ. ಜೀಸಸ್, ಬುದ್ಧ ಮತ್ತು ಪ್ರಹ್ಲಾದ ಇವರುಗಳು ಜಗತ್ತನ್ನು ಎದುರಿಸಿದರು. ಆದರೆ ಅವರೆಲ್ಲ ನಮ್ರತೆಯ, ಸೌಜನ್ಯದ ಪ್ರತೀಕವಾಗಿದ್ದರು. ಇದಕ್ಕೆ ಮುಖ್ಯವಾಗಿ

ಬೇಕಾದುದು ಆತ್ಮವಿಶ್ವಾಸ ಮತ್ತು ದೇವರಲ್ಲಿ ನಿಷ್ಠೆ. ಯಾರು ಜಗತ್ತನ್ನು ಅಹಂಕಾರದಿಂದ ಎದುರಿಸಿದರೋ ಅವರೆಲ್ಲರೂ ಹೇಳಹೆಸರಿಲ್ಲವಾಗಿದ್ದಾರೆ. ನಿನ್ನ ಅಹಂಕಾರ ಮತ್ತು ಕ್ರೋಧಭಾವ ಕೇವಲ ನಟನೆ. ಈ ನಟನೆಯೂ ಅನಪೇಕ್ಷಣೀಯ, ಏಕೆಂದರೆ ಇದು ಎಷ್ಟೋ ಸಲ ವಿನಾಕಾರಣ ಅಪಾರ್ಥಕ್ಕೆ ಕಾರಣವಾಗಿದೆ. ಇದರಿಂದ ಪಾರಾಗಲು ನಾವು ಎಚ್ಚರಿಕೆಯಿಂದ ನಡೆಯ ಬೇಕು.

"ಏಕಾಂಗಿಯಾದರೂ ಅಂತ್ಯದವರೆಗೆ ನಿಲ್ಲುವ ಶಕ್ತಿಯನ್ನು ಅತ್ಯಂತ ನಮ್ರತೆ ಇಲ್ಲದೆ ಬೆಳೆಸಿಕೊಳ್ಳಲು ಸಾಧ್ಯವಿಲ್ಲ. ಈ ಶಕ್ತಿಯಿಲ್ಲದ ಮನುಷ್ಯ ಏನೂ ಬೆಲೆಯಿಲ್ಲದವನಾಗುತ್ತಾನೆ. ಧೈರ್ಯಶಾಲಿಗಳೆನಿಸಿಕೊಂಡ ಎಷ್ಟೋ ಮಂದಿ ಎಂದೂ ಧೈರ್ಯದ ಪರೀಕ್ಷೆಗೆ ಗುರಿಯಾದವರಲ್ಲ."

ಆಗಸ್ಟ್ ೨೮, ೧೯೩೨

(ಯಾರೋ ಒಬ್ಬಾಕೆ ತಾನು ಆಜೀವಪರ್ಯಂತ ಅವಿವಾಹಿತಳಾಗಿ ಇರುವೆನೆಂದು ಬಾಪೂಗೆ ಸೂಚಿಸಿದಳು. ಅದಕ್ಕೆ ಅವರು ಹೀಗೆ ಬರೆದರು :)

ಈ ಅಭಿಪ್ರಾಯ ನನಗೆ ಪ್ರಿಯವಾದುದು. ಆದರೆ ಆತ್ಮವಂಚನೆ ಮಾಡಿಕೊಂಡಿರುವ ಅನೇಕ ಯುವಕ–ಯುವತಿಯರನ್ನೂ ನಾನು ಬಲ್ಲೆ. ಜಿತೇಂದ್ರಿಯತ್ವವನ್ನು ಪೂರ್ಣವಾಗಿ ಸಾಧಿಸಬಯಸುವವರು ಸತ್ಯಸಂಧ ರಾಗಿರಬೇಕು; ಅವರಲ್ಲಿ ಗೋಪ್ಯತೆ ಎನ್ನುವುದು ಇರಬಾರದು. ಬ್ರಹ್ಮ ಚರ್ಯದ ಇತಿಮಿತಿಗಳೆಲ್ಲ ತಿಳಿದಿರಬೇಕು. ಮೃಗಪ್ರವೃತ್ತಿಯನ್ನು ದಮನ ಮಾಡುವುದು ಸುಲಭಸಾಧ್ಯವಲ್ಲ. ಇದಕ್ಕೋಸ್ಕರ ಎಲ್ಲ ಬಗೆಯ ಇಂದ್ರಿಯ ಭೋಗಗಳನ್ನೂ ತ್ಯಜಿಸಬೇಕು; ಎಲ್ಲವನ್ನೂ ಅಗತ್ಯತೆಯ ದೃಷ್ಟಿಯಿಂದ ಮಾಡಬೇಕೇ ಹೊರತು ಭೋಗಾಪೇಕ್ಷೆಯಿಂದಲ್ಲ. ಅನಗತ್ಯವಾದುದನ್ನೆಲ್ಲ ತ್ಯಜಿಸಬೇಕು. ಇದೇ ನಿಯಮವನ್ನು ಆಹಾರ, ಪಾನ, ಉಡುಪು ಮತ್ತಿತರ ಎಲ್ಲ ವಿಷಯಗಳಲ್ಲಿಯೂ ಅನುಸರಿಸಬೇಕು. ಇವೆಲ್ಲ ನಿನಗೆ ಸಾಧ್ಯವೆನಿಸಿದರೆ ಒಳ್ಳೆಯದು; ಇಲ್ಲವಾದರೆ ಅಸಾಧ್ಯವೆಂದು ಒಪ್ಪಿಕೊಂಡು ಎಲ್ಲ ಬಾಲಕಿಯ ರಂತೆ ವರ್ತಿಸುವುದು ಮೇಲು. ಆಗ ನೀನು ಮಾಡುವುದು ಸರಿ ಎನಿಸುತ್ತದೆ. ನಿನ್ನ ಸಾಮರ್ಥ್ಯಕ್ಕೆ ಮೀರಿದ ಯಾವುದನ್ನೂ ಪ್ರಯತ್ನಿಸಬೇಡ.

## ೩. ಆಶ್ರಮದ ಕಾರ್ಯಕರ್ತರಿಗೆ

'ಸಿ'* ವರ್ಣಿಸಿರುವಂಥ ಅಸಹ್ಯ ಪರಿಸ್ಥಿತಿಯಲ್ಲಿ ತಾಳ್ಮೆಯೊಂದಲ್ಲದೆ ಬೇರೆ ಪರಿಹಾರವೇ ಇಲ್ಲ. ಟ್ರಾನ್ಸ್‌ವಾಲ್‌ನಲ್ಲಿ ನಾವು ನಡೆದುಕೊಂಡ ರೀತಿಯಲ್ಲಿಯೇ ನಮ್ಮ ಮಾತೃಭೂಮಿಯಲ್ಲಿಯೂ ನಡೆದುಕೊಳ್ಳಬೇಕೆಂಬ ಬಗೆಗೆ ನನಗೆ ಸಂಶಯವೇ ಕಾಣುತ್ತಿಲ್ಲ. ಆದರೆ ಫೀನಿಕ್ಸ್‌ನಂಥ ಸ್ಥಳದಲ್ಲಿ ಮಾತ್ರ ಅದಕ್ಕೆ ತರಬೇತುಹೊಂದಲು ಸಾಧ್ಯವೆಂದು 'ಸಿ' ಬರೆದಿರುವ ಪತ್ರದಿಂದ ತಿಳಿದುಬರುತ್ತದೆ. ಸ್ಮಶಾನದಲ್ಲಿ ಮಲಗಬೇಕಾಗಿಬಂದರೂ ನಾವು ಭಯಮುಕ್ತರಾಗಿರಬೇಕು. ಈ ಭಯವನ್ನು ಕಳೆದುಕೊಳ್ಳ ಬೇಕೆಂಬ ಪ್ರಯತ್ನದಲ್ಲಿಯೇ ನಾನು ಸ್ಮಶಾನದಲ್ಲಿ ಮಲಗಿಕೊಂಡರೆ, ಮೊದಲನೆಯ ದಿವಸವೇ ನಮ್ಮ ಪ್ರಾಣ ಹಾರಿಹೋದೀತು. ಇಂದಿನ ಭಾರತ ನಿಮಗೂ, ನನಗೂ ಒಂದು ಸ್ಮಶಾನಸದೃಶವಾಗಿದೆ. ಇಲ್ಲಿಯೇ ನಾವು ಮಲಗಲು ಹಾಸಿಗೆಗಳನ್ನು ಸಿದ್ಧಪಡಿಸಿಕೊಳ್ಳಬೇಕು. ಮೀರಾ ಬಾಯಿಯ ಈ ಗೀತೆಯನ್ನು ಹಾಡುತ್ತಾ : 'ಭಗವಂತನ ನಾಮಸ್ಮರಣೆ ವಿನಾ ಬೇರಾವ ಸ್ಮರಣೆಯೂ ಬರದಿರಲಿ.'

ಸಾವಿಗೆ ಅಂಜುವುದೆಂದರೆ ಜೀರ್ಣ ವಸ್ತ್ರವನ್ನು ತ್ಯಜಿಸಲು ಅಂಜಿ ದಂತೆಯೇ ಸರಿ. ನಾನು ಆಗಾಗ ಸಾವಿನ ಬಗೆಗೆ ಚಿಂತನೆಮಾಡಿದೇನೆ; ಅದಕ್ಕೆ ಅಂಜುವುದು ಕೇವಲ ಅಜ್ಞಾನದ ಪ್ರಭಾವವೆಂಬ ಬೌದ್ಧಿಕ ನಂಬಿಕೆಗೆ ಬಂದಿದೇನೆ. ಈ ನಂಬಿಕೆ ನನ್ನ ಆಧ್ಯಾತ್ಮಿಕ ನಂಬಿಕೆಯ ಅವಿಭಾಜ್ಯ ಅಂಗವಾಗಿವೆಯೆಂದು ಹೇಳಲಾರೆ. ಒಂದು ಹಾವನ್ನು ಕಂಡಾಗ ನನ್ನಲ್ಲಿ ಉಂಟಾಗುವ ಪ್ರತಿಕ್ರಿಯೆಯೇ ಇದಕ್ಕೆ ಉದಾಹರಣೆ. ಹೀಗಿದ್ದರೂ ನಾನು ಎಲ್ಲೇ ಇರಲಿ, ಹೇಗೇ ಇರಲಿ, ಸಾವು ಬಂದಾಗ ಅದನ್ನು ಸ್ವಾಗತಿಸುವ ಶಕ್ತಿ ಗಳಿಸಿಕೊಳ್ಳುವೆನೆಂಬ ಭಾವನೆಯಿದೆ. ಫೀನಿಕ್ಸ್‌ನಲ್ಲಿರುವ ಎಲ್ಲರೂ ಏಕರೀತಿ ನಿರ್ಭಯಶಾಲಿಗಳಾಗಲೆಂದು ಆಶಿಸುತ್ತೇನೆ.

---

* ಈ ಸಂಕೇತ ಯಾರಿಗೆ ಸಂಬಂಧಿಸಿದುದೆಂದೂ, ಸಂದರ್ಭ ಯಾವುದೆಂದೂ ಸ್ಪಷ್ಟವಿಲ್ಲ.

ಆ ವಿಚಾರ* ಕುರಿತು ನೀನು ನನ್ನೊಡನೆ ಸಂಭಾಷಣೆ ನಡೆಸಿದಂದಿನಿಂದ ನಾನು ಅದರ ಬಗೆಗೆ ಆಲೋಚನಾಮಗ್ನನಾಗಿದೇನೆ. ನಾನು ಆಲೋಚಿಸಿದಷ್ಟು ನೀನು ಆ ಹೊಸ ಉದ್ಯಮವನ್ನು ಕೈಗೊಳ್ಳಬಾರದೆಂದು ನನಗೆ ಮನವರಿಕೆಯಾಗುತ್ತಿದೆ. ನನಗೆ ಅದರಲ್ಲಿ ಅತಿಯಾಸೆಯೇ ಕಂಡು ಬರುತ್ತದೆ. ನಾನು ಸೂಚಿಸಿದ್ದ ರೀತಿಯಲ್ಲೂ ನೀನು ಅದನ್ನು ಕೈಗೊಳ್ಳಬಾರದೆಂದು ನನ್ನ ಆಶಯ. ಹೊಸ ಅಭಿಪ್ರಾಯಗಳನ್ನು ಹೊಂದುವ ಶಕ್ತಿ ನಿನ್ನಲ್ಲಿದ್ದರೆ—ನೀನಿನ್ನೂ ಚಿಕ್ಕವನೆಂದು ಭಾವಿಸುವುದರಿಂದ ನಿನಗದು ಇರಲೇಬೇಕು—ಆ ಶಕ್ತಿಯನ್ನು ಹರಿಜನರ ಮತ್ತು ಭಿಲ್ಲರ ಸೇವೆಗಾಗಿ ಹೊಸ ಮಾರ್ಗಗಳನ್ನು ಕಂಡುಹಿಡಿಯಲು ಉಪಯೋಗಿಸು. ನಿನ್ನ ಕೆಲಸಕ್ಕೆ ವೇಳೆಯೇ ಸಾಲದು. ಈ ಕೆಲಸವೊಂದಕ್ಕೇ ನಿನ್ನ ಮತ್ತು ನಿನ್ನಂಥವರ ಜೀವಮಾನವೇ ಸಾಲದು. ಸೇವೆ ಮಾಡಬೇಕೆಂಬ ಆಸೆಗೂ ಒಂದು ಮಿತಿ ಇದೆ. ಜಗತ್ತಿನಲ್ಲಿ ದುಃಖವನ್ನೇ ಹುಡುಕುತ್ತ ಹೊರಟರೆ ಅದಕ್ಕೆ ಪಾರವೇ ಇಲ್ಲ. ಪ್ರತಿಯೊಂದು ಹೆಜ್ಜೆಯಲ್ಲೂ ಸುಧಾರಣೆಗೆ ಅವಕಾಶವಿದೆ. ಈ ಅನ್ಯಾಯಗಳನ್ನೂ ನಾವೇ ಪರಿಹರಿಸಬೇಕೆಂಬುದು ದೇವರ ಇಚ್ಛೆಯಾಗಿರಲಾರದು. ಅವನಿಗೆ ಅಂಥ ಇಚ್ಛೆಯಾದರೂ ಇದ್ದರೆ ಅದನ್ನು ಮಾಡುವ ಕಲೆಯನ್ನೂ ಅವನು ನಮಗೆ ಕಳಿಸುತ್ತಾನೆ. ಅದು ಈ ರೀತಿ ಇದೆ: 'ಪರ್ವತಕ್ಕೆ ಸಮಾನವಾದ ದುಃಖದಲ್ಲಿ ಕಿಂಚಿತ್ತನ್ನು ಆರಿಸಿಕೊಂಡು ಅದನ್ನು ಪರಿಹರಿಸಲು ನಮ್ಮ ಮನಸ್ಸನ್ನೆಲ್ಲ ಕೇಂದ್ರೀಕರಿಸಿ, ಬೇರೆ ಯಾವುದನ್ನೂ ಮಾಡಲು ನಿರಾಕರಿಸಬೇಕು. ಇಷ್ಟನ್ನು ಮಾಡಿದರೆ ಇಡೀ ಪರ್ವತವನ್ನೇ ಎತ್ತಿದಂತಾಗುತ್ತದೆ.'—ಇದು ಸರಳ ನಿಯಮ. ಇದರಿಂದ ನಿನ್ನ ಮನಸ್ಸಿನ ಮೇಲೆ ಪ್ರಭಾವ ಬೀರಲು ನಾನು ಶಕ್ತನಾದರೆ, ಈ ಎರಡು ಬಗೆಯ ಕಾರ್ಯಗಳಲ್ಲದೆ ಬೇರೆ ಏನನ್ನೂ ಮಾಡುವುದಿಲ್ಲವೆಂಬ ಪ್ರತಿಜ್ಞೆಯನ್ನು ನೀನು ತೆಗೆದುಕೊಳ್ಳಬೇಕೆಂದೂ ಇಡೀ ಪ್ರಪಂಚವೇ ನಿನಗೆ ಕೊಡಲ್ಪಟ್ಟರೂ ಅತ್ತ ಕಡೆ ಮನಸ್ಸನ್ನು ಕೊಡಬಾರದೆಂದೂ ಬಿನ್ನವಿಸಿಕೊಳ್ಳುತ್ತೇನೆ. ಇಂಥ ಸೇವೆಯಲ್ಲಿ ನೀನು ತೊಡಗಿದ್ದರೂ ನಿನಗೆ

* ಇದು ಯಾವ ವಿಚಾರ, ಯಾರೊಂದಿಗೆ ಎಂಬುದು ಸ್ಪಷ್ಟವಾಗಿಲ್ಲ.

ವಿರಾಮವಿದೆಯೆಂದು ಭಾಸವಾದರೆ, ನನ್ನ ಬಳಿಗೆ ಬಾ. ನೀನು ಆರಿಸಿಕೊಂಡಿರುವ ಕಾರ್ಯದಲ್ಲೇ ಅನೇಕ ಅಂಶಗಳನ್ನು ಮಾಡದೆ ಬಿಟ್ಟಿರುವೆ ಎಂದು ನಾನು ನಿನಗೆ ತೋರಿಸಿಕೊಡುತ್ತೇನೆ.

* * * *

ರೋಮ್ ನಗರದ ಚಿತ್ರಶಾಲೆಗೆ ಭೇಟಿಕೊಟ್ಟು, ಅಲ್ಲಿನ ಚಿತ್ರಗಳನ್ನು ಬಹಳ ಆಸಕ್ತಿಯಿಂದ ನೋಡಿ ನಾನು ಆನಂದಪಟ್ಟೆ. ಆದರೆ ಕೇವಲ ಎರಡೇ ಘಂಟೆಗಳ ಕಾಲ ಭೇಟಿಕೊಟ್ಟುದರ ಪರಿಣಾಮವಾಗಿ ಮೂಡಿದ ಅಭಿಪ್ರಾಯಗಳನ್ನು ವ್ಯಕ್ತಪಡಿಸುವುದರಲ್ಲಿ ಬೆಲೆಯಾದರೂ ಏನುಂಟು? ನನಗಂತೂ ಕಟುವಿಮರ್ಶೆ ಮಾಡುವ ಸಾಮರ್ಥ್ಯವಿಲ್ಲ. ಅಲ್ಲಿ ನಾನು ಸಂದರ್ಶಿಸಿದ ಕೆಲವು ವಸ್ತುಗಳನ್ನು ಅತಿಶಯವಾಗಿ ಪ್ರೀತಿಸಿದೆ. ನಾನು ಅಲ್ಲಿಯೇ ಎರಡು–ಮೂರು ತಿಂಗಳು ಇರುವುದಾದರೆ, ಅಲ್ಲಿರುವ ಚಿತ್ರಗಳನ್ನೂ ಶಿಲಾಪ್ರತಿಮೆಗಳನ್ನೂ ಪ್ರತಿದಿನವೂ ವೀಕ್ಷಿಸಿ ಅಧ್ಯಯನವನ್ನು ಮಾಡಲು ಸಾಧ್ಯವಾದೀತು. ಶಿಲುಬೆ ಮೇಲಿನ ಕ್ರಿಸ್ತನ ಪ್ರತಿಮೆಯನ್ನು ನಾನು ನೋಡಿದೆ. ಅದು ಎಲ್ಲಕ್ಕಿಂತ ಹೆಚ್ಚಾಗಿ ನನ್ನನ್ನು ಆಕರ್ಷಿಸಿತು. ಐರೋಪ್ಯ ಕಲೆಯು ಭಾರತೀಯ ಕಲೆಗಿಂತ ಮೇಲ್ಮೆಯುಳ್ಳುದೆಂದು ನಾನು ಭಾವಿಸಲಿಲ್ಲ. ಈ ಎರಡೂ ಬಗೆಯ ಕಲೆಗಳು ಭಿನ್ನಮಾರ್ಗದಲ್ಲಿ ಬೆಳೆದಿವೆ. ಭಾರತೀಯ ಕಲೆ ಪ್ರಧಾನವಾಗಿ ಭಾವನಾತ್ಮಕವಾದುದು; ಐರೋಪ್ಯ ಕಲೆ ಪ್ರಕೃತಿಯ ಅನುಕರಣ. ಆದುದರಿಂದ ಅದನ್ನು ಅರಿತುಕೊಳ್ಳುವುದು ಸುಲಭ; ಆದರೆ ನಮ್ಮ ಗಮನವನ್ನು ಪ್ರಪಂಚದ ಕಡೆಗೆ ತಿರುಗಿಸುತ್ತದೆ; ಭಾರತೀಯ ಕಲೆಯನ್ನು ಅರ್ಥಮಾಡಿಕೊಂಡರೆ ಅದು ನಮ್ಮ ಭಾವಗಳನ್ನು ಪರಮಾರ್ಥದ ಕಡೆಗೆ ತಿರುಗಿಸುತ್ತದೆ. ನಿನ್ನಂಥ ವ್ಯಕ್ತಿಗೆ ಮಾತ್ರ ಇದನ್ನು ತಿಳಿಸುತ್ತೇನೆ. ಈ ಭಾವಗಳಿಗೆ ನಾನು ಯಾವ ಬೆಲೆಯನ್ನೂ ಕೊಡುವುದಿಲ್ಲ. ಬಹುಶಃ ಭಾರತದ ಬಗೆಗೆ ನನ್ನಲ್ಲಿ ಇರುವ ಅಗೋಚರ ಪಕ್ಷಪಾತಬುದ್ಧಿಯೋ ಅಥವಾ ಅಜ್ಞಾನವೋ ಈ ರೀತಿ ಹೇಳಲು ಕಾರಣವಾಗಿರಬಹುದು. ರಾಮಾಯಣ ಮತ್ತು ಮಹಾಭಾರತಗಳ ವಿಷಯವಾಗಿ ಬಹಳ ಕಡಮೆ ತಿಳಿದುಕೊಂಡಿರುವ ತಮ್ಮ ಮಕ್ಕಳಿಗೆ ಅದರ ಕಥೆಗಳನ್ನು

ಹೇಳುವ ತಂದೆತಾಯಿಗಳಂತೆ ನನ್ನನ್ನು ಭಾವಿಸು. ಕಲಾನುಭವದ ಶಕ್ತಿ ನನಗೂ ಇದೆಯೆಂದು ನಿನಗೆ ತಿಳಿದೀತು. ಆದರೆ ಅಂಥ ಸುಖಾನುಭವವನ್ನು ನಾನು ಬಿಟ್ಟುಬಿಟ್ಟಿದೇನೆ, ಅಥವಾ ಬಿಟ್ಟುಬಿಡಬೇಕಾಯಿತು. ನನ್ನ ಸತ್ಯಾನ್ವೇಷಣಕ್ಕೆ ಹೊಂದಿಕೊಳ್ಳುವ ಸುಖಾನುಭವವನ್ನು ನಾನು ಗಾಢವಾಗಿ ಹೀರಿಕೊಂಡಿದೇನೆ; ಅದೇ ಬಗೆಯ ಹೊಸ ಸುಖಾನುಭವದಲ್ಲಿ ಪಾಲುಗೊಳ್ಳಲು ಸದಾ ಸಿದ್ಧವಾಗಿದೇನೆ. ಸತ್ಯನಿಷ್ಠನಿಗೆ ಅವನ ಕರ್ಮಗಳು ಸಹಜವಾಗಿಯೇ ಪ್ರಾಪ್ತವಾಗುತ್ತವೆ; ಅವನು ಯಾವ ಪ್ರಯಾಸವೂ ಇಲ್ಲದೆ ಗೀತೆಯ ಮೂರನೆಯ ಅಧ್ಯಾಯದ, ಎಂದರೆ, 'ಕರ್ಮಯೋಗ'ದ ಅನುಯಾಯಿಯಾಗುತ್ತಾನೆ. ನಾನಂತೂ ಕರ್ಮಯೋಗವನ್ನು ಅಧ್ಯಯನ ಮಾಡುವುದಕ್ಕಿಂತಲೂ ಮುಂಚೆಯೇ ಅದರ ಉತ್ಕಾಂಕ್ಷಿಯಾಗಿದ್ದೆ. ಆದರೆ ಇದೆಲ್ಲ ಅಪ್ರಸ್ತುತ.

## ೪. ಕಾರ್ಯಕರ್ತರು ಮತ್ತು ಇತರರಿಗೆ

### (ಯರವಡಾ ಮಂದಿರದಿಂದ)

(ಈ ಪತ್ರಗಳನ್ನೂ ವಿ. ಜಿ. ದೇಸಾಯಿಯವರ 'ಆರಿಸಿದ ಪತ್ರಗಳು—ಮೊದಲನೆಯ ತಂಡ'ದಿಂದ ತೆಗೆದುಕೊಳ್ಳಲಾಗಿದೆ.)

ನಾವು ಇಂದ್ರಿಯನಿಗ್ರಹಕ್ಕೆ ಪ್ರಯತ್ನಿಸುವಾಗ ನಾವೆಲ್ಲ ದಿವ್ಯ ಚೇತನದ ಕಿಡಿಗಳೆಂದೂ, ಅದರ ಗುಣ ನಮ್ಮಲ್ಲಿಯೂ ಇದೆಯೆಂದೂ, ಆ ದಿವ್ಯಚೇತನಕ್ಕೆ ಇಂದ್ರಿಯಭೋಗವೆನ್ನುವುದು ಇಲ್ಲದಿರುವುದರಿಂದ ಅದು ಮಾನವಸ್ವಭಾವಕ್ಕೆ ಹೊರತಾದುದೆಂದೂ—ಈ ಭಾವನೆ ಒಂದು ಕ್ಷಣವೂ ನಮ್ಮ ಸ್ಮೃತಿಯಿಂದ ದೂರವಾಗಬಾರದೆಂದೂ ಗಮನದಲ್ಲಿಟ್ಟುಕೊಳ್ಳಬೇಕು. ಈ ಸಾಮಾನ್ಯ ವಿಷಯ ನಮ್ಮ ಹೃದಯಸ್ಥವಾದರೆ ಇಂದ್ರಿಯ ನಿಗ್ರಹವನ್ನು ಸಾಧಿಸುವುದು ಕಷ್ಟವೇನಲ್ಲ. ನಾವು ಪ್ರತಿದಿನವೂ ಗಾಯನ ಮಾಡುವ ಗೀತಾಶ್ಲೋಕಗಳು ಇದೇ ಅರ್ಥವನ್ನು ಸೂಚಿಸುತ್ತವೆ. ಪರಸತ್ಯ ಪ್ರತ್ಯಕ್ಷವಾಗಿ ಗೋಚರವಾದಾಗಲೇ ವಿಷಯಭೋಗ ನಿಲ್ಲಲು ಸಾಧ್ಯವೆಂದು ಇವುಗಳಲ್ಲಿ ಒಂದು ಶ್ಲೋಕ ಹೇಳುವುದನ್ನು ನೀನು ನೆನಪಿಗೆ ತಂದುಕೋ.

(ತಮ್ಮ ವಿವಾಹೋತ್ಸವದ ಅಚ್ಚಾದ ಆಹ್ವಾನಪತ್ರಿಕೆಯನ್ನು ಗಾಂಧೀಜೀಗೆ ಕಳಿಸಿ ಅವರ ಆಶೀರ್ವಾದವನ್ನು ಅಪೇಕ್ಷಿಸಿದ ದಂಪತಿಗಳಿಗೆ ಹೀಗೆ ಬರೆದರು :)

ನೀವಿಬ್ಬರೂ ನಿಸ್ವಾರ್ಥ ಸೇವೆಸಲ್ಲಿಸುವಿರೆಂದು ನಾವು ಆಶಿಸುತ್ತೇವೆ. ಅಚ್ಚಾದ ಆಹ್ವಾನಪತ್ರಿಕೆಯ ಮೇಲೆ ಆಶೀರ್ವಾದವನ್ನು ಅಪೇಕ್ಷಿಸುವುದು ಅದರ ಬೆಲೆಯನ್ನು ಕಡಮೆಮಾಡಿದಂತಾಗಿದೆ. ನೀವು ಆಶೀರ್ವಾದವನ್ನು ಅಪೇಕ್ಷಿಸಿದರೆ, ನಿಮ್ಮ ಹಸ್ತಾಕ್ಷರದಲ್ಲಿಯೇ ಬರೆದು ವಿವಾಹದ ಪವಿತ್ರ ಸಮಯದಲ್ಲಿ ನೀವು ಮಾಡಿಕೊಂಡ ಯಾವುದಾದರೂ ಒಳ್ಳೆಯ ಸಂಕಲ್ಪವಿದ್ದರೆ ತಿಳಿಸಿ.

*   *   *   *

ಸೌಂದರ್ಯವು ಶ್ಲಾಘಿಸಲ್ಪಡಬೇಕು. ಆದರೆ ಆ ಶ್ಲಾಘನೆ ಮೌನ ಸ್ವರೂಪದ್ದಾಗಿರಬೇಕು. ಅದನ್ನು ನೀವು ತ್ಯಾಗದ ಮೂಲಕವೇ ಅನುಭವಿಸಬೇಕು. (ತೇನ ತ್ಯಕ್ತೇನ ಭುಂಜೀಥಾಃ) ಆಕಾಶದ ಚೆಲುವನ್ನು ನೋಡಿ ಆಕರ್ಷಿತನಾಗದವನು ಯಾವುದರಿಂದಲೂ ಆಕರ್ಷಿತನಾಗಲಾರ. ಆದರೆ ಸ್ವರ್ಗಕ್ಕೆ ಸೋಪಾನ ಕಟ್ಟಲು ವೃಥಾ ಪ್ರಯತ್ನ ಮಾಡುವವನು ಹುಚ್ಚ ಎಂದೆನಿಸಿಯಾನು.

(ಬ್ರಹ್ಮಚರ್ಯವನ್ನು ಆಚರಿಸಬೇಕೆಂದು ಅಪೇಕ್ಷಿಸಿದ ಬಾಲಕಿಯೊಬ್ಬಳಿಗೆ ಹೀಗೆ ಬರೆದರು :)

ಬ್ರಹ್ಮಚರ್ಯವನ್ನು ಆಚರಿಸುವಾಗ ಎಲ್ಲ ಮನುಜರನ್ನೂ ಸೋದರರೆಂದು ಭಾವಿಸುವುದು ಅತಿಮುಖ್ಯ. ನಾವೆಲ್ಲ ಒಬ್ಬನೇ ತಂದೆಯ ಮಕ್ಕಳು. ಆದುದರಿಂದ ವಿವಾಹವನ್ನು ಕುರಿತು ಯೋಚಿಸಬಾರದು. ಆಹಾರವನ್ನು ಔಷಧದಂತೆ ಸೇವಿಸು; ಜಿಹ್ವಾಚಾಪಲ್ಯಕ್ಕಲ್ಲ. ಮನಸ್ಸು – ಶರೀರಗಳು ಸದಾ ಕರ್ಮನಿರತವಾಗಿರಲಿ. ಸತ್ಯಸ್ವರೂಪಿಯಾದ (ಸತ್ಯನಾರಾಯಣ) ದೇವರನ್ನು ಕುರಿತು ಧ್ಯಾನಿಸು. ನಿನ್ನ ಮಂಡೆಯನ್ನು ಪೂರ್ಣವಾಗಿ ವಪನಮಾಡಿಸಿಕೊಳ್ಳುವುದು ನಿನ್ನ ಕರ್ತವ್ಯವೆನಿಸಿದರೆ ಆ ರೀತಿ ಮಾಡು. ಜನರು ಏನೆಂದುಕೊಳ್ಳುವರೋ ಎಂದು ಲಕ್ಷಿಸಲೇಬೇಡ. ನಿನ್ನ ದೈವಭಕ್ತಿ ಮಾನವಸೇವೆಯಲ್ಲಿ ವ್ಯಕ್ತವಾಗಬೇಕು.

ರಾಗೋದ್ರೇಕವೇ ನಮ್ಮ ನಿಜಶತ್ರುಗಳು. ಅವುಗಳ ಮೇಲೆ ನಾವು ಸದಾ ಹೋರಾಟ ನಡೆಸಬೇಕು. ಈ ಹೋರಾಟವೇ ಮಹಾಭಾರತ ಕಥೆಯ ವಿಷಯ.

ಈ ಆರು ಮನುಷ್ಯನ ಗುಪ್ತ ಶತ್ರುಗಳೆಂದು ಈ ಶ್ಲೋಕ ಹೇಳುತ್ತದೆ :

ಕಾಮಃ ಕ್ರೋಧಸ್ತಥಾ ಲೋಭೋ ಮದಮೋಹೌ ಚ ಮತ್ಸರಃ ।

ಕಾಮ, ಕ್ರೋಧ, ಲೋಭ, ಮದ, ಮೋಹ, ಮಾತ್ಸರ್ಯ. ಕ್ರೈಸ್ತಧರ್ಮವೂ ಇವುಗಳನ್ನೇ ಏಳು ಮಹಾಪಾತಕಗಳೆಂದು ಪರಿಗಣಿಸುತ್ತದೆ : ಹೆಮ್ಮೆ, ಕ್ರೋಧ. ಈರ್ಷೆ, ಕಾಮ, ಹೊಟ್ಟೆಬಾಕತನ, ಲೋಭ ಮತ್ತು ಆಲಸ್ಯ.

ಮಾರ್ಚ್ ೨೧, ೧೯೩೨

(ಆಶ್ರಮದ ಮಕ್ಕಳಿಗೆ ಬರೆದುದು :)

ನಾನು ದೇವರನ್ನು ವರ್ಣಿಸಿರುವ ರೀತಿ ನಿಮಗೆ ನೆನಪಿದೆಯೆ? ದೇವರು ಸತ್ಯವೆನ್ನುವುದಕ್ಕೆ ಪ್ರತಿಯಾಗಿ ಸತ್ಯವೇ ದೇವರೆನ್ನುತ್ತೇನೆ ನಾನು. ನನಗೆ ಇದು ಯಾವಾಗಲೂ ಸ್ಪಷ್ಟವಾಗಿರಲಿಲ್ಲ. ನಾಲ್ಕು ವರುಷಗಳ ಹಿಂದೆ ಇದು ನನ್ನ ಅನುಭವಕ್ಕೆ ಬಂದಿತು. ಆದರೂ ನನ್ನ ನಡೆವಳಿಯೆಲ್ಲ ನನಗೆ ಗೋಚರವಿಲ್ಲದಂತೆಯೇ ಈ ಅನುಭವವನ್ನೇ ಅನುಸರಿಸಿದೆ. ಸತ್ಯರೂಪ ದಲ್ಲಿಯೇ ನಾನು ದೇವರನ್ನು ತಿಳಿದಿರುವುದು. ದೇವರ ಇರುವಿಕೆಯ ವಿಷಯದಲ್ಲಿ ನಾನು ಸಂಶಯಹೊಂದಿದ್ದ ಕಾಲವೊಂದಿತ್ತು ; ಆದರೆ ಸತ್ಯದ ಇರುವಿಕೆಯ ವಿಷಯದಲ್ಲಿ ಎಂದೂ ಸಂದೇಹಪಟ್ಟಿಲ್ಲ. ಈ ಸತ್ಯ ವಸ್ತು-ರೂಪದ ಸತ್ಯವಲ್ಲ, ಇದು ಶುದ್ಧ ಚಿತ್‌ಸ್ವರೂಪ. ಇದು ವಿಶ್ವದ ಪಾಲಕ ಶಕ್ತಿ ; ಆದುದರಿಂದ ಇದು ಈಶ್ವರ (ಪ್ರಭು). ನನಗೆ ಇದು ಬಹುಮಟ್ಟಿಗೆ ಅನುಭವವೇದ್ಯ. ಬಹುಮಟ್ಟಿಗೆ ಎನ್ನುತ್ತೇನೆ, ಏಕೆಂದರೆ ನಾನು ಸತ್ಯವನ್ನು ಪ್ರತ್ಯಕ್ಷವಾಗಿ ಕಂಡಿಲ್ಲ; ಎಲ್ಲೋ ಕ್ಷಣಿಕ ನೋಟ ಹೊಂದಿದೇನೆ. ಆದರೆ ನನ್ನ ನಂಬಿಕೆ ಅದಮ್ಯವಾದುದು.

* * * *

ನಮಗೆ ಎಷ್ಟೋ ಮಂದಿ ಸಹಕಾರ್ಯಕರ್ತರಿರಬಹುದು. ಆದರೆ ದೇವರೊಬ್ಬನೇ ನಮ್ಮ ಸಖನಾಗಬಲ್ಲ. ಮಾನವರೊಡನೆ ಹೊಂದುವ ಸಖ್ಯಭಾವ ಭಗವಂತನೊಡನೆ ಹೊಂದುವ ಸಖ್ಯಭಾವಕ್ಕೆ ಅಡ್ಡಿ ಬರುವುದು ಎಂದು ನನ್ನ ಅನುಭವ.

ಶ್ರೀಕೃಷ್ಣ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಅಲೌಕಿಕ ವಿಧಾನದಿಂದ ಹೋಗುವ ಶಕ್ತಿಯಿಂದ ಕೂಡಿದ್ದನೆಂದು ನಾನು ನಂಬುವು ದಿಲ್ಲ. ನಿಜವಾದ ಯೋಗಿಗಳು ಅಂಥ ಅಲೌಕಿಕ ಶಕ್ತಿಯನ್ನು ಗಳಿಸಲು ಯತ್ನಿಸುವುದಿಲ್ಲ; ಏಕೆಂದರೆ, ಅವರ ಯೋಗವು ಕೇವಲ ಮುಕ್ತಿಗೆ ಸಾಧನ. ಅವರು ತಮ್ಮ ಆಜನ್ಮ ಹಕ್ಕನ್ನು ದೇಹಸುಖಕ್ಕಾಗಿ ಮಾರಿ ಕೊಳ್ಳುವವರಲ್ಲ.

* * * *

ಎಲ್ಲ ಕಾಲಕ್ಕೂ ಎಲ್ಲ ಪರಿಸ್ಥಿತಿಯಲ್ಲೂ ನಿಲ್ಲುವುದೇ ನಿಜ ಬ್ರಹ್ಮಚರ್ಯ. ಇಂಥ ಸ್ಥಿತಿಯನ್ನು ಹೊಂದುವುದು ನಿಜವಾಗಿಯೂ ಕಷ್ಟವೇ. ಇದೇನು ಆಶ್ಚರ್ಯವಲ್ಲ, ಏಕೆಂದರೆ, ನಮ್ಮ ಜನ್ಮವೇ ವಿಷಯೋಪಭೋಗದ ಫಲ. ಆ ಕರ್ಮದಿಂದ ಲಭ್ಯವಾದ ಈ ದೇಹದ ಬಗೆಗೆ ನಾವು ಗಾಢವಾಗಿ ಆಸಕ್ತಿ ಹೊಂದಿದ್ದೇವೆ. ಹೀಗೆ ಸಹಜವಾಗಿ ಬಂದಿರುವ ಭೋಗಗುಣವನ್ನು ಗೆಲ್ಲುವುದು ಕಷ್ಟ. ಆದರೂ ಈ ದೇಹ ಪವಿತ್ರ ಆತ್ಮನಿಗೆ ದೇವಾಲಯದಂತೆ. ಪರತತ್ತ್ವವನ್ನು ನಾವು ಪ್ರತ್ಯಕ್ಷ ದರ್ಶಿಸಿದಾಗ ಬ್ರಹ್ಮಚರ್ಯ ಸಹಜ ಸ್ಥಿತಿಯಾಗುತ್ತದೆ. ಸುರಸುಂದರಿ ರಂಭೆ ನಮ್ಮನ್ನು ಆಕರ್ಷಿಸಲು ಬಂದರೂ ನಾವು ಆ ಸ್ಥಿತಿಯಿಂದ ಚಲಿತರಾಗೆವು. ನಮ್ಮೆಲ್ಲರಿಗೂ ನಮ್ಮ ತಾಯಿಯೇ ಸೌಂದರ್ಯದ ಆದರ್ಶ. ಆಕೆಯ ಸೌಂದರ್ಯವನ್ನು ಕುರಿತು ಚಿಂತಿಸಿದಾಗ ನಮ್ಮ ವಿಷಯಾಸಕ್ತಿ ಸ್ತಬ್ಧವಾಗುತ್ತದೆ. ನಾವು ಇನ್ನಾವ ಹೆಣ್ಣನ್ನು ಕುರಿತು ಚಿಂತಿಸಿದಾಗಲೂ ಹೀಗೆಯೇ ಆಗಬೇಕು.

ಶ್ರದ್ಧೆ ಗಾಢವಾದಂತೆ ಬುದ್ಧಿಯೂ ಚುರುಕಾಗುತ್ತದೆ. ದೇವರು ನಮಗೆ ಬುದ್ಧಿಯನ್ನು ನೀಡಬೇಕು; ಮಾನವನಾದರೋ ಶ್ರದ್ಧೆಯ ಸಂಪತ್ತನ್ನು ಹೆಚ್ಚಿಸಿಕೊಳ್ಳಬೇಕು. ಇದೇ ಗೀತೆಯ ಬೋಧೆಯೆಂದು ನನಗೆ ಭಾಸವಾಗುತ್ತದೆ. ಈ ಶ್ರದ್ಧೆ ಮತ್ತು ಬುದ್ಧಿಗಳ ಅರ್ಥವನ್ನು ನಾವು ಗ್ರಹಿಸಬೇಕು. ಈ ಗ್ರಹಿಕೆ ಸಿದ್ಧಾಂತಗಳ ವ್ಯಾಸಂಗದಿಂದ ಬರಲಾರದು. ಅದಕ್ಕೆ ವಿನೀತ ಭಾವ ಆವಶ್ಯಕ. ಯಾರು ತಿಳಿದಿರುವೆನೆಂದು ಭಾವಿಸುವನೋ ಅವನು ಏನನ್ನೂ ಅರಿಯ; ಯಾರು ಏನನ್ನೂ ತಿಳಿದಿಲ್ಲ ಎಂದು ಭಾವಿಸುವನೋ ಆತನಿಗೆ ಭಗವಂತನ ಕೃಪೆ ಲಭಿಸಿದಂತೆ ಜ್ಞಾನ ಲಭಿಸುತ್ತದೆ. ಅಂಚಿನವರೆಗೆ ತುಂಬಿರುವ ಕುಂಭಕ್ಕೆ ಒಂದು ಹನಿ ನೀರನ್ನೂ ಸೇರಿಸಲು ಸರ್ವಶಕ್ತನಾದ ಭಗವಂತನಿಗೂ ಶಕ್ಯವಿಲ್ಲ. ಆದುದರಿಂದಲೇ ನಾವು ಅನುದಿನವೂ ಅವನೆದುರಿಗೆ ರಿಕ್ತಹಸ್ತರಾಗಿ ನಿಂತು ಬೇಡಬೇಕು. ಇದನ್ನೇ ಅಪರಿಗ್ರಹ, ಅಸಂಗ್ರಹ ಅಥವಾ ಇಚ್ಛಾಪೂರ್ವಕ ಸ್ವೀಕರಿಸಿದ ದಾರಿದ್ರ್ಯ ಎನ್ನುವುದು.

   

ನಾನು ಕೆಲವರು ಶ್ರದ್ಧಾ ಚಿಕಿತ್ಸೆಯ (Christian Science) ಗೆಳೆಯರನ್ನು ಭೆಟ್ಟಿಯಾಗಿದೇನೆ. ಅವರಲ್ಲಿ ಹಲವರು ಶ್ರೀಮತಿ ಎಡ್ಡಿಯವರ ಕೃತಿಗಳನ್ನು ನನಗೆ ಕಳಿಸಿದಾರೆ. ಅವುಗಳನ್ನು ಓದಲು ನನಗೆ ಸಾಧ್ಯವೇ ಆಗಿಲ್ಲ. ಆದರೂ ಅಲ್ಲಿ ಇಲ್ಲಿ ಪುಟ ತಿರುವಿಹಾಕಿದೇನೆ. ಅವನ್ನು ನನಗೆ ಕಳುಹಿಸಿದ ಗೆಳೆಯರು ನಿರೀಕ್ಷಿಸಿದ್ದ ಪರಿಣಾಮ ನನ್ನ ಮನಸ್ಸಿನ ಮೇಲೆ ಆಗಿಲ್ಲ. ಆಧ್ಯಾತ್ಮಿಕ ಸಿದ್ಧಿಗಳನ್ನು ದೈಹಿಕ ರೋಗಗಳ ಪರಿಹಾರಕ್ಕೆ ಉಪಯೋಗಿಸಿಕೊಳ್ಳಬಾರದೆಂಬುದನ್ನು ನಾನು ಚಿಕ್ಕಂದಿನಿಂದ ಕಲಿತೆ; ನನ್ನ ಅನುಭವವೂ ಅದನ್ನೇ ಸ್ಥಿರಪಡಿಸಿದೆ. ಔಷಧಿಗಳ ಉಪಯೋಗವನ್ನೂ ವರ್ಜಿಸುವ ಬಗೆಗೆ ನಾನು ನಂಬಿದೇನೆ. ಇದು ಕೇವಲ ದೈಹಿಕ ಮತ್ತು ಆರೋಗ್ಯದ ಕಾರಣಗಳಿಗೋಸ್ಕರ. ಪೂರ್ಣವಾಗಿ ದೇವರ ಮೇಲೆ ಭರವಸೆ ಇಡುವುದನ್ನೂ ನಾನು ನಂಬುತ್ತೇನೆ. ಆದರೆ ಇದು ಅವನು ನನ್ನನ್ನು ಗುಣಪಡಿಸುವನೆಂಬ ಕಾರಣದಿಂದಲ್ಲ; ತಮಗೆ ಅಪೇಕ್ಷೆಯಿದ್ದರೂ ವೈಜ್ಞಾನಿಕ ಔಷಧಿಯ ಸಹಾಯವನ್ನು ಹೊಂದಲಾರದ ಸ್ಥಿತಿಯಲ್ಲಿರುವ ಲಕ್ಷಾಂತರ ಜನರ ದುರ್ವಿಧಿಯಲ್ಲಿ ಪಾಲುಗೊಳ್ಳುವುದಕ್ಕಾಗಿ. ನನ್ನ ನಂಬಿಕೆಯನ್ನು ಯಾವಾಗಲೂ ಕಾರ್ಯಗತಮಾಡುವ ಶಕ್ತಿ ನನ್ನಲ್ಲಿಲ್ಲವೆಂದು ಹೇಳಲು ನನಗೇ ದುಃಖವಾಗುತ್ತದೆ. ಹಾಗೆ ಸಾಧಿಸಬೇಕೆಂಬುದು ನನ್ನ ಸತತ ಪ್ರಯತ್ನ. ಅನೇಕ ಪ್ರಲೋಭನೆಗಳ ಮಧ್ಯೆ ಇರುವ ನನಗೆ ನನ್ನ ನಂಬಿಕೆಗಳನ್ನು ಪೂರ್ಣವಾಗಿ ಕಾರ್ಯರೂಪಕ್ಕೆ ತರುವುದು ಕಷ್ಟವಾಗಿ ಕಂಡುಬಂದಿದೆ.

* * * *

ನಮ್ಮ ಮಹಿಳೆಯರಲ್ಲಿ ನಾನೊಂದು ದೊಡ್ಡ ದೋಷವನ್ನು ಕಂಡುಹಿಡಿದಿದೇನೆ; ಅದು ಅವರು ತಮ್ಮ ಭಾವಗಳನ್ನು ವ್ಯಕ್ತಪಡಿಸದೆ ಮುಚ್ಚಿಟ್ಟುಕೊಳ್ಳುವುದು. ಇದರಿಂದ ಅವರ ವರ್ತನೆ ಕಪಟ ವರ್ತನೆ ಆಗುತ್ತದೆ. ಅದರಲ್ಲಿಯೂ ಅಸತ್ಯಕ್ಕೆ ಕಟ್ಟುಬಿದ್ದವರಿಗಂತೂ ಈ ಕಪಟ ವರ್ತನೆ ಸುಲಭವಾಗುತ್ತದೆ. ಕಪಟ ವರ್ತನೆಯಷ್ಟು ಅಪಾಯಕರವಾದುದು ಬೇರೊಂದಿಲ್ಲವೆಂದು ನಾನು ಭಾವಿಸುತ್ತೇನೆ. ಆದರೆ ನಮ್ಮ

ಮಧ್ಯಮವರ್ಗದ ಮಹಿಳೆಯರು ಯಾವಾಗಲೂ ಒತ್ತಡಕ್ಕೆ ಗುರಿಯಾಗಿರುತ್ತಾರೆ. ಇವರ ಕಪಟ ವರ್ತನೆ ಕೆಟ್ಟ ಹುಳುವಿನಂತೆ ಸತ್ತ್ವವನ್ನೇ ತಿನ್ನುತ್ತಿದೆ. ಆಗಾಗ ಇವರು ತಮಗೆ ಇಷ್ಟವಿಲ್ಲದಿದ್ದರೂ, ತಾವು ಮಾಡಲೇಬೇಕೆಂದು ನಂಬಿ ಕೆಲವಾರು ಕೆಲಸಗಳನ್ನು ಮಾಡುತ್ತಾರೆ. ಈ ವಿಷಯವನ್ನು ಕುರಿತು ಇವರೇ ಸ್ವಲ್ಪ ಚಿಂತಿಸಿದರೆ ಹೊರಗಿನ ಪ್ರಭಾವ ಎಲ್ಲಿಂದ ಬಂದರೂ ಅದಕ್ಕೆ ತಾವು ಒಳಗಾಗಬೇಕಾಗಿಲ್ಲವೆಂಬುದು ಅರಿವಾಗುತ್ತದೆ. ತಾವು ಸಹಜವಾಗಿ ಇರುವ ರೀತಿಯಲ್ಲಿಯೇ ಇವರು ಜಗತ್ತಿನ ಮುಂದೆ ನಿಲ್ಲುವ ಧೈರ್ಯವನ್ನು ಪ್ರಥಮ ಪಾಠವಾಗಿ ಕಲಿತರೆ ಎಲ್ಲವೂ ತಾನಾಗಿ ಸರಿಯಾಗುತ್ತದೆ.

(ಮೊಮ್ಮಗಳು ಮನೂಗೆ ಬರೆದ ಪತ್ರವಿದು :)

ಹರಿಲಾಲನ* ಚಿಂತಾಜನಕ ಸ್ಥಿತಿಯನ್ನು ನೀನು ಕಣ್ಣಾರೆ ಕಂಡುದು ಒಳ್ಳೆಯದೇ ಆಯಿತು. ಇದಕ್ಕೆ ಮುಂಚೆಯೇ ಎಲ್ಲವೂ ನನಗೆ ತಿಳಿದಿತ್ತು. ಏನೇ ಆದರೂ ನಾವು ಆಶಾಶೂನ್ಯರಾಗದಿರೋಣ. ಏಕೆಂದರೆ, ದೇವರ ಕೃಪೆ ಬಂದಾಗ ಎಲ್ಲ ಸಾಧ್ಯ. ಹರಿಲಾಲನಲ್ಲಿ ಇನ್ನೂ ಸ್ವಲ್ಪವೇನಾದರೂ ಒಳ್ಳೆಯ ಅಂಶವಿದ್ದರೆ, ಅದು ತಾನಾಗಿಯೇ ಪ್ರಕಟವಾದೀತು. ನಾವು ಅವನನ್ನು ಅತಿಯಾಗಿ ಲಾಲಿಸಲೂ ಬಾರದು, ಅಥವಾ ಅವನಿಗಾಗಿ ಕೃತಕ ದಯೆಯನ್ನೂ ತೋರಿಸಬಾರದು. ನಾವೇ ಹೆಚ್ಚು ಹೆಚ್ಚು ಶುದ್ಧರಾಗುತ್ತ ಹೋದರೆ, ನಮ್ಮ ಶುದ್ಧಿಯೇ ಅವನ ಮೇಲೆ ಸತ್ಪರಿಣಾಮ ಮಾಡೀತು. ನೀನು ಅವನ ವಿಷಯದಲ್ಲಿ ಕಠೋರವಾಗಿಯೇ ಇರಬೇಕು; ಅವನು ಕುಡಿತವನ್ನು ಬಿಟ್ಟ ಹೊರತು ಯಾವ ಸಂಬಂಧವೂ ಇಲ್ಲವೆಂದು ತಿಳಿಸಬೇಕು. ನಾವೆಲ್ಲ ಇಂಥ ಪ್ರಬಲ ಭಾವವನ್ನು ಹೊಂದಿದ್ದರೆ ಅವನು ತನ್ನ ಜಡತೆಯಿಂದ ಮುಕ್ತನಾದಾನು. ಹುಡುಗನಿಗೆ ಏನಾದರೂ ಉಗ್ರ ಆಘಾತವಾದರೆ ಅವನು ಕುಡಿತವನ್ನು ಬಿಡುವ ಸಂಭವವುಂಟು.

ನಿನ್ನ ವಿವಾಹದ ಬಗೆಗೆ ನಿನ್ನ ಅಭಿಪ್ರಾಯಗಳು ನನಗೆ ಒಪ್ಪಿಗೆ ಇದೆ. ನೀನು ಸಣ್ಣ ಮಗುವಾಗಿದ್ದಾಗ ಬಹಳ ರೋಗದಿಂದ ನರಳಿದೆ;

* ಗಾಂಧೀಜೀಯ ಹಿರಿಯ ಮಗ. ಮನೂ ಆತನ ಮಗಳು.

ಉಳಿಯುವೆಯೆಂಬ ಆಸೆಯೇ ಇರಲಿಲ್ಲ. ಆದರೆ 'ಬಾ' ಪ್ರೀತಿಯಿಂದ ಮಾಡಿದ ಆರೈಕೆಯ ಪರಿಣಾಮವಾಗಿಯೂ ಒಳ್ಳೆಯ ಔಷಧಿಯ ಪರಿಣಾಮವಾಗಿಯೂ ನಿನ್ನ ಜೀವ ಉಳಿಯಿತು. ಆದರೆ ಅದರ ಪ್ರಭಾವ ಅತ್ಯಂತ ಉಗ್ರವಾಗಿತ್ತು; ಐದು ವರುಷ ಕಾಲ ಒಳ್ಳೆಯ ಬೆಳವಣಿಗೆ ಕುಂಠಿತವಾಯಿತು. ಈಗಲೂ ನೀನು ಅಶಕ್ತಳೇ. ಬಾಲಿ ನಿನ್ನ ವಿಷಯ ವಾಗಿ ಅತಿಶಯ ಎಚ್ಚರಿಕೆಯಿಂದ ನೋಡಿಕೊಳ್ಳದಿದ್ದರೆ ನೀನು ಈಗಲೂ ರೋಗಪೀಡಿತಳಾಗಬಹುದು. ಆದುದರಿಂದ ನಿನ್ನನ್ನು ಯಾವಾಗಲೂ ನೀನು ಇರುವುದಕ್ಕಿಂತ ಐದು ವರುಷ ಚಿಕ್ಕವಳೆಂದು ನಾನು ಭಾವಿಸು ತ್ತೇನೆ. ನಮಗಂತೂ ಆಶ್ರಮದ ಯಾವ ಹುಡುಗಿಯೇ ಆಗಲಿ ವಿವಾಹದ ಯೋಚನೆ ಮಾಡಬೇಕಾದರೆ ಇಪ್ಪತ್ತೊಂದು ವಯಸ್ಸಾಗಿರಬೇಕು. ಈ ದೃಷ್ಟಿಯಿಂದ ನೋಡಿದರೆ ನಿನ್ನ ಇಪ್ಪತ್ತೈದನೆಯ ವಯಸ್ಸಿಗೂ ನೀನು ವಿವಾಹಕ್ಕೆ ಸಿದ್ಧಳಲ್ಲ. ಆದರೆ ನಿನ್ನನ್ನು ಯಾವ ಕಟ್ಟಿಗೂ ಸಿಲುಕಿಸು ವುದು ನನ್ನ ಉದ್ದೇಶವಲ್ಲ.

ಸದ್ಯಕ್ಕೆ ವ್ಯಾಸಂಗದ ಕಡೆ ನಿನ್ನ ಮನಸ್ಸನ್ನಿಡು; ದೃಢವಾದ ಶರೀರ ವನ್ನು ಬೆಳೆಸಿಕೊ; ಗೀತಾಬೋಧೆಯನ್ನು ಅರ್ಥಮಾಡಿಕೊಂಡು ಅದಕ್ಕೆ ಅನುಸಾರವಾಗಿ ನಿನ್ನ ಕರ್ತವ್ಯವನ್ನು ನೆರವೇರಿಸು.

(ನಾನಾಭಾಯಿ ಭಟ್ಟರಿಗೆ ಬರೆದುದು:)

ದಕ್ಷಿಣಾಮೂರ್ತಿಯ ಹಣಕಾಸಿನ ಸ್ಥಿತಿ ಕುರಿತು ನೀನು ಏಕೆ ಆತಂಕ ಪಡುತ್ತೀಯೆ? ಈ ವಿಷಯದಲ್ಲಿ ನನ್ನ ವಿಶೇಷಾನುಭವದಿಂದ ನೀನು ಪ್ರಯೋಜನ ಪಡೆಯಬಹುದು. ದೇಶ ನನ್ನನ್ನು 'ಮಹಾತ್ಮಾ' ಪಟ್ಟಕ್ಕೆ ಏರಿಸುವುದಕ್ಕೆ ಎಷ್ಟೋ ಮುಂಚೆಯೇ ನಾನು ಒಂದು ಪಾಠವನ್ನು ಕಲಿತೆ. ಕಡ ತಂದ ಬಂಡವಾಳದಿಂದ ವ್ಯಾಪಾರ ಮಾಡುವುದು ಹೇಗೆ ಸಲ್ಲದೋ ಅಂತೆಯೇ ಸಾಲ ತಂದು ಸಂಸ್ಥೆಗಳನ್ನು ನಡೆಸುವುದೂ ಸಲ್ಲದ್ದು. ಒಂದು ಸಂಸ್ಥೆ ತನ್ನ ಅತ್ಯಂತ ಸಮರ್ಥ ಕಾರ್ಯಕರ್ತನೊಬ್ಬನನ್ನು ನಿಧಿಶೇಖರಣೆಗೆ ಕಳಿಸುವುದಾದರೆ ಅದು ಕಡ ತರುವ ರೀತಿಯಿಂದೇ ನನ್ನ ಭಾವನೆ. ಇಂತಿಷ್ಟು ಹಣ ನಿನ್ನ ಗುರಿಯೆಂದು ನೀನು ಪರಿಗಣಿಸುವುದಕ್ಕೆ ಪ್ರತಿಯಾಗಿ

ಪ್ರವೇಶ ಸಂಖ್ಯೆಯನ್ನು ನಿಗದಿಮಾಡಿ ಅದರಿಂದ ಶೇಖರವಾಗುವ ಹಣದಿಂದಲೇ ಕಾರ್ಯ ನಡೆಸಬೇಕು. ನನ್ನ ಸಲಹೆಯಂತೆ ನಡೆಯುವುದು ಅತ್ಯಂತ ಸುಲಭ; ಪ್ರಪಂಚದಲ್ಲಿ ಅದಕ್ಕಿಂತ ಸುಲಭ ವಿಧಾನವಿನ್ನೊಂದಿಲ್ಲ. ನೀನು ಮನೋನಿಶ್ಚಯ ಮಾಡಬೇಕಾಗಿರುವುದೊಂದೇ ಅಗತ್ಯ. ವರ್ಷದ ಆರಂಭದಲ್ಲಿ ನಿನಗೆ ಬೇಕಾಗುವ ಹಣ ಎಷ್ಟೆಂಬುದನ್ನು ನಿಗದಿಮಾಡಬೇಕು. ಶಾಲೆಯ ನಿನ್ನ ಕರ್ತವ್ಯವನ್ನು ಬಿಡದೆ ಆ ಹಣ ನಿನಗೆ ದೊರಕದಿದ್ದರೆ ನೀನು ಶಾಲೆಯನ್ನೇ ಮುಚ್ಚಿಬಿಡು. ನಿನ್ನ ಶಾಲೆ ಒಳ್ಳೇ ಸೇವೆಸಲ್ಲಿಸಿದೆ; ಸಮರ್ಥ ಅಧ್ಯಾಪಕರನ್ನು ಹೊಂದಿದೆ. ಹೀಗಿರುವಾಗ ನಿನಗೇಕೆ ಭರವಸೆ ಇಲ್ಲ? ಎಲ್ಲವನ್ನೂ ಭಗವಂತನಿಗೆ ಅರ್ಪಿಸಿಬಿಡು. ಅವನ ಇಚ್ಛೆಯಂತೆ ಎಲ್ಲ ನಡೆದೀತು. ಒಬ್ಬ ಗುಜರಾತಿ ಕವಿ, 'ಭಗವಂತನು ಭಕ್ತರನ್ನೆಂದಿಗೂ ಕೈಬಿಡಲಾರ' ಎಂದು ಹೇಳಿದ್ದಾನೆ. ನಾನಾಗಲೀ ಸರದಾರರಾಗಲೀ ನಿನ್ನ ನೆರವಿಗೆ ಬಂದಿದ್ದರೆ ನೀನು ಕಷ್ಟದಿಂದ ಪಾರಾಗುತ್ತಿದ್ದೆಯೆಂದು ಹೇಳುತ್ತೀಯೆ. ಆದರೆ ಕಷ್ಟವೆಂಬುದು ಎಲ್ಲಿದೆ? ನಿನ್ನನ್ನು ಮುಂದಕ್ಕೆ ತರಲು ನಾವು ಯಾರು? ಒಬ್ಬ ಕುರುಡ ಮತ್ತೊಬ್ಬ ಕುರುಡನಿಗೆ ಮಾರ್ಗ ತೋರಿಸಲಾರ. ಆದುದರಿಂದ ನಿನ್ನ ಹೊರೆಯನ್ನೆಲ್ಲ ದೇವರ ಮೇಲೆ ಹಾಕಿಬಿಡು.

*            *            *            *

ಪಾಂಡಿತ್ಯ ಪಡೆದ ಬ್ರಾಹ್ಮಣರು ಒಳ್ಳೆಯ ಪುರುಷರಾದರೆ ಅವರು ಜನತೆಯಲ್ಲಿ ಉಪನಿಷತ್ತುಗಳ ಜ್ಞಾನವನ್ನು ಹರಡಬೇಕು. ಆದರೆ ಈ ಕಾಲದಲ್ಲಿ ಒಳ್ಳೆತನವೂ ಪಾಂಡಿತ್ಯವೂ ಜೊತೆಗೂಡಿರುವುದು ಅಪರೂಪ. ಆದುದರಿಂದ ಗೀತಾ ಅಥವಾ ರಾಮಾಯಣಗಳನ್ನು ಸಾರ್ವಜನಿಕವಾಗಿ ಪಾರಾಯಣ ಮಾಡುವುದರ ಬಗೆಗೆ ನಾನು ತಾತ್ಸಾರದಿಂದಿದ್ದೇನೆ. ಅರ್ಥವನ್ನರಿಯದೆ ಪಾರಾಯಣ ಮಾಡಿದರಾಗಲಿ, ಅಥವಾ ಅರಿತರೂ ತೋರಿಕೆಗೋಸ್ಕರ ಗಟ್ಟಿಯಾಗಿ ಓದುವುದಾಗಲಿ, ಅಥವಾ ಗಟ್ಟಿಯಾಗಿ ಓದುವುದೇ ಏನೋ ಒಂದು ಮಹಾಸಾಧನೆಯೆಂದಾಗಲಿ ಭಾವಿಸಿದರೆ ಅದು ನಿರರ್ಥಕ. ಇನ್ನೂ ಮುಂದೆ ಹೋಗಿ ಅದು ಅಪಾಯಕರವೆಂದೇ ನನ್ನ ಹೇಳಿಕೆ.

*            *            *            *

ನಮ್ಮ ಇರುವಿಕೆಯಲ್ಲಿ ಹೇಗೆ ನಂಬುವೆವೋ ಹಾಗೆಯೇ ದೇವರ ಇರುವಿಕೆಯಲ್ಲಿಯೂ ನಾವು ನಂಬಲೇಬೇಕು. ಜೀವಭರಿತವಾಗಿರುವುವೆಲ್ಲ 'ಇರುವಿಕೆ'ಯನ್ನು ಹೊಂದಿವೆ; ಹಾಗೆಯೇ ಸಮಸ್ತ ಜೀವದ ಮೊತ್ತವಾದ ದೇವರೂ ಇದ್ದಾನೆ.

ದೇವರಲ್ಲಿ ನಮಗೆ ನಂಬಿಕೆಯಿಲ್ಲವಾದರೆ ನಮ್ಮಲ್ಲಿಯೇ ನಂಬಿಕೆ ಇಲ್ಲದ ಹಾನಿ ತಂದಿಟ್ಟುಕೊಂಡಂತಾಗುತ್ತದೆ. ದೇವರಲ್ಲಿ ನಂಬಿಕೆ ಇಲ್ಲ ಎಂದರೆ, ಆತ್ಮಹತ್ಯೆ ಮಾಡಿಕೊಂಡಂತಾಗುತ್ತದೆ. ಆದರೆ ದೇವರಲ್ಲಿ ನಂಬಿಕೆಯನ್ನು ಹೊಂದಿರುವುದು ಒಂದು ರೀತಿ; ಅಂಥ ಜೀವಂತ ನಂಬಿಕೆಯನ್ನು ಹೊಂದಿ ಅದರಂತೆ ಆಚರಿಸುವುದು ಬೇರೆ ರೀತಿ. ಹಾಗೆ ನೋಡಿದರೆ, ಲೋಕದಲ್ಲಿ ನಿರೀಶ್ವರವಾದಿ ಎನ್ನುವವನೇ ಇಲ್ಲ; ನಿರೀಶ್ವರವಾದ ಎಂದು ಎನ್ನುವುದು ಕೇವಲ ನಟನೆ.

ಇಷ್ಟ–ಅನಿಷ್ಟ ಇವುಗಳಿಂದ ಯಾವ ವ್ಯಕ್ತಿ ಪೂರ್ಣವಾಗಿ ಮುಕ್ತನಾಗಿರುವನೋ ಅವನು ಪರಮಾತ್ಮಸಾಕ್ಷಾತ್ಕಾರವನ್ನು ಹೊಂದಿರುವನು; ಎಂದಿಗೂ ಬೇರೆ ಯಾವ ವಿಧಾನದಿಂದಲೂ ಹೊಂದಲಾರ. ಯಾವಾತನು ತಾನು ಸಾಕ್ಷಾತ್ಕಾರ ಹೊಂದಿರುವೆನೆಂದು ಹೇಳುವನೋ ಆತನು ತನ್ನ ಗುರಿಯಿಂದ ಬಹುದೂರ ಇರುವನೆಂದು ನನ್ನ ಅಭಿಪ್ರಾಯ. ಸಾಕ್ಷಾತ್ಕಾರ ಎನ್ನುವುದು ಅನುಭವದ ವಿಷಯ, ಅದನ್ನು ಮಾತಿನಿಂದ ವಿವರಿಸಲು ಸಾಧ್ಯವಿಲ್ಲ.

ದೇವರಲ್ಲಿ ನಂಬಿಕೆಯ ಧರ್ಮದಿಂದಲೇ ನಾನು ಬಾಳಬಲ್ಲೆ. ನನ್ನ ಮತದಲ್ಲಿ ಸತ್ಯದಿಂದ ಪ್ರತ್ಯೇಕವಲ್ಲ ದೇವರು. ಸತ್ಯವೇ ದೇವರು.

* * * *

ಉಪವಾಸತಜ್ಞನಾದ ನನ್ನ ಅನುಭವದಲ್ಲಿ ಉಪವಾಸ ಮುಗಿಸಿದ ಕೂಡಲೇ ಗಟ್ಟಿಯಾದ ಆಹಾರವನ್ನು ಸೇವಿಸುವುದು ಶರೀರಕ್ಕೆ ಅಪಾರ ಅಪಾಯಕರ.

(ರಾಜಕೋಟೆಯಿಂದ ಪುರುಷೋತ್ತಮದಾಸ್ ಗಾಂಧೀಯವರು ಬರೆಯುತ್ತಾ ಮೂರು ಪ್ರಶ್ನೆಗಳನ್ನು ಕೇಳಿದ್ದರು: (೧) ಜೈನರ ನಿರೀಶ್ವರವಾದಕ್ಕೂ ಗೀತೆಯ ಸೇಶ್ವರವಾದಕ್ಕೂ ಇರುವ ವ್ಯತ್ಯಾಸವೇನು? (೨) ದೇವರು ಅಕರ್ತನಾದರೆ ಕೃಪೆ ನೀಡುವವನಾರು? ಪ್ರಾರ್ಥನೆಯು ವ್ಯಕ್ತಿಯ ಅಭಿಲಾಷೆಗಳ ಅಭಿವ್ಯಕ್ತಿಯಲ್ಲದೆ ಬೇರೆ ಏನಾದರೂ ಆದೀತೆ? (೩) ಸತ್ಯವೇ ದೇವರು ಎಂದಾಗ ನಿಮ್ಮ ಅಭಿಪ್ರಾಯವೇನು? ಗಾಂಧೀಜೀ ಈ ರೀತಿ ಉತ್ತರವಿತ್ತರು:)

ಜೈನಸಿದ್ಧಾಂತಕ್ಕೂ ವೈದಿಕಸಿದ್ಧಾಂತಕ್ಕೂ ವಿರೋಧವಿದೆಯೆಂದು ನನಗೆ ಅನಿಸುವುದಿಲ್ಲ. ಅವು ಒಂದೇ ವಸ್ತುವನ್ನು ಬೇರೆ ಬೇರೆ ದೃಷ್ಟಿಗಳಿಂದ ನೋಡುವ ವಿಧಾನ ಮಾತ್ರ. ವೈದಿಕ ಹಿಂದೂ ಧರ್ಮದಂತೆ ದೇವರು ಕರ್ತನೂ ಹೌದು, ಅಕರ್ತನೂ ಹೌದು. ಅವನು ಜಗತ್ತಿನಲ್ಲೆಲ್ಲ ಅಂತರ್ಯಾಮಿಯಾಗಿದ್ದಾನೆ; ಆದುದರಿಂದ ಕರ್ತ; ಆದರೆ ಅವನು ಸಕಲ ಕರ್ಮಗಳಿಂದಲೂ ಅಲಿಪ್ತ, ಆದುದರಿಂದ ಅಕರ್ತ; ಅಲ್ಲದೆ ಅವನು ಯಾವ ಕರ್ಮದ ಫಲವನ್ನೂ ಭುಂಜಿಸುವುದಿಲ್ಲ. 'ಕರ್ಮ' ಶಬ್ದವನ್ನು ನೀನು ಉಪಯೋಗಿಸಿರುವ ಅರ್ಥದಲ್ಲಿ ಈ ಜಗತ್ತು ದೇವರ ಕರ್ಮದ ಫಲವಲ್ಲ. ಆದುದರಿಂದ ನೀನು ಉದಹರಿಸಿರುವ ಗೀತಾಶ್ಲೋಕಗಳಲ್ಲಿ ಯಾವ ವಿರೋಧವೂ ಇಲ್ಲ. ಗೀತೆ ಒಂದು ಕವನವೆಂಬುದು ನೆನಪಿರಲಿ. ದೇವರು ಏನನ್ನೂ ಹೇಳುವುದಿಲ್ಲ, ಏನನ್ನೂ ಮಾಡುವುದಿಲ್ಲ. ಅವನು ಅರ್ಜುನನಿಗೆ ಏನನ್ನೂ ಹೇಳಲಿಲ್ಲ. ಭಗವಂತ – ಅರ್ಜುನರ ಸಂವಾದ ಎಂಬುದು ಕಾಲ್ಪನಿಕ. ಐತಿಹಾಸಿಕ ಕೃಷ್ಣನಿಗೂ ಅರ್ಜುನನಿಗೂ ಅಂಥ ಸಂವಾದ ನಡೆಯಿತೆಂದು ನಾನು ಭಾವಿಸಲಾರೆ. ಗೀತೆಯ ಹಿನ್ನೆಲೆಯಲ್ಲಿ ಯಾವ ಬಗೆಯ ಅಯುಕ್ತವಾದುದಾಗಲೀ ಅಸತ್ಯವಾಗಲೀ ಇಲ್ಲ. ಧಾರ್ಮಿಕ ಗ್ರಂಥಗಳನ್ನು ಅಂಥ ರೂಪದಲ್ಲಿ ಬರಕಹೊಯ್ಯುವ ಪದ್ಧತಿಯೊಂದಿತ್ತು. ಇಂದಿಗೂ ಸಂಭಾವ್ಯ ವ್ಯಕ್ತಿಯೊಬ್ಬ ತನ್ನ ಭಾವಗಳನ್ನು ವ್ಯಕ್ತಪಡಿಸಲು ಅಂಥ ಸಾಧನವನ್ನು ಬಳಸಿಕೊಂಡರೆ ಅದನ್ನು ನಾವು ತಪ್ಪು ಎನ್ನಲಾರೆವು. ಜೈನರು ತಾರ್ಕಿಕ ರೀತಿಯಲ್ಲಿ ಕಾವ್ಯರಹಿತವಾಗಿ, ಶುಷ್ಕವಾಗಿ ನುಡಿದರು; ಜಗತ್ತಿಗೆ ಕರ್ತನಿಲ್ಲವೆಂದರು. ಹಾಗೆ ಹೇಳುವುದರಲ್ಲಿ ಯಾವ ತಪ್ಪೂ ಇಲ್ಲ. ಆದರೆ ಮನುಜಕುಲ ತರ್ಕದಿಂದಲೇ ಬಾಳಲಾರದು. ಅದಕ್ಕೆ

ಕಾವ್ಯವೂ ಬೇಕು. ಆದುದರಿಂದಲೇ ಜೈನತರ್ಕಪಾರಮ್ಯವಾದಿಗಳು ಕೇವಲ ತರ್ಕನಿಷಿದ್ಧವಾದ ದೇವಾಲಯಗಳೂ, ಪ್ರತಿಮೆ ಮತ್ತಿತರ ಸಾಧನಗಳೂ ಮಾನವನ ಆತ್ಮೋತ್ಕರ್ಷಕ್ಕೆ ಅಗತ್ಯವೆಂದು ಮನಗಂಡರು.

ನಿನ್ನ ಮೊದಲನೆಯ ಪ್ರಶ್ನೆಗೆ ಉತ್ತರ ಕೊಡುವುದರಲ್ಲಿಯೇ ಎರಡನೆಯದಕ್ಕೂ ಇತ್ತಿದೇನೆ. ಕೃಪೆ ಎಂಬುದು ಕಾವ್ಯದ ಭಾಷೆ. ಭಕ್ತಿಯೇ ಕಾವ್ಯ. ಆದರೆ ಕಾವ್ಯ ಅಯುಕ್ತವಲ್ಲ, ಹೀನವಲ್ಲ, ಅನಗತ್ಯ ವಸ್ತುವಲ್ಲ. ಇದಕ್ಕೆ ಪ್ರತಿಯಾಗಿ ಅದು ಅತ್ಯಂತ ಅಗತ್ಯ. ನೀರು ಜಲಜನಕ ಮತ್ತು ಆಮ್ಲಜನಕಗಳ ರಾಸಾಯನಿಕ ಸಂಯುಕ್ತವಸ್ತುವೆಂದು ವಿಜ್ಞಾನ ಹೇಳಿದರೆ ಕಾವ್ಯಭಾಷೆಯಲ್ಲಿ ಅದು ಭಗವಂತನ ಕೊಡುಗೆ. ನೀರಿನ ರಾಸಾಯನಿಕ ಸಂಯೋಗದ ವಿಷಯದಲ್ಲಿ ಇರಬಹುದಾದ ಅಜ್ಞಾನ ಎಳ್ಳಷ್ಟೂ ಪ್ರಭಾವ ಬೀರದಿದ್ದರೂ ಅಂಥ ಕಾವ್ಯದ ತಿಳಿವಳಿಕೆ, ಬಾಳಿಗೆ ಆವಶ್ಯಕ ಅಂಶ. ಸಂಭವಿಸುವುದೆಲ್ಲ ಕರ್ಮದ ಫಲವೆಂದು ಹೇಳುವುದು ಪೂರ್ಣ ತರ್ಕಬದ್ಧವಾದರೂ 'ಗಹನಾ ಕರ್ಮಣೋ ಗತಿಃ' (ಕರ್ಮದ ಗತಿ ಗಹನವಾದುದು —ಗೀತಾ., ೪–೧೭).

ಮರ್ತ್ಯರಾದ ನಮಗೆ ಒಂದು ಸಾಮಾನ್ಯ ಪ್ರಸಂಗದ ಕಾರಣಗಳನ್ನೂ ಅರಿಯಲಾರದಂಥ ಸ್ಥಿತಿಯೇ ಇದೆ. ಆದುದರಿಂದ ದೇವರ ಸಂಕಲ್ಪ ಮತ್ತು ಕೃಪೆ ಇವುಗಳು ಇದ್ದ ಹೊರತು ಏನೂ ಸಂಭವಿಸಲಾರದೆಂದು ಹೇಳುವುದು ಪೂರ್ಣ ಯುಕ್ತವಾದುದು. ಆತ್ಮಕ್ಕೆ ಈ ದೇಹವೇ ಒಂದು ಬಂಧನ; ಅದು ಕುಂಭದೊಳಗಿನ ವಾಯುವಿನಂತೆ. ಕುಂಭದೊಳಗಿನ ವಾಯುವು ಕುಂಭದ ಹೊರಗಡೆ ಆವರಿಸಿರುವ ವಾಯುವಿನಿಂದ ತಾನು ಭಿನ್ನ ಎಂದು ಭಾವಿಸಿರುವವರೆಗೂ ಅದು ಪ್ರಭಾವರಹಿತವಾಗಿರುತ್ತದೆ. ಇದೇ ರೀತಿ ದೇಹದಲ್ಲಿ ಬಂಧಿತವಾಗಿರುವ ಆತ್ಮ ತಾನೇ ಕರ್ತನೆಂದು ಭಾವಿಸಿರುವವರೆಗೂ ಸರ್ವಶಕ್ತಿಯ ಆಕರವಾದ ಭಗವಂತನಿಂದ ಶಕ್ತಿಯನ್ನು ಹೊಂದಲು ಅಸಮರ್ಥವಾಗಿರುತ್ತದೆ. ಆದುದರಿಂದ ಸಂಭವಿಸುವುದೆಲ್ಲ ಭಗವಂತನ ಸಂಕಲ್ಪವೆಂದು ನುಡಿಯುವುದು ಒಂದು ವಾಸ್ತವಿಕ ಅಂಶ. ಇಂಥ ವಿನೀತ ಭಾವದಿಂದ ಸತ್ಯಶೋಧಕನಿಗೆ ಹಿತವಾಗುತ್ತದೆ. ಸತ್ಯಪ್ರೇಮಿ ಸಾಧನೆಗೆ ಲಭಿಸುವ ಸದ್ಭಾವನೆಗಳನ್ನು ಮಾತ್ರ ಇಟ್ಟು

ಕೊಳ್ಳುತ್ತಾನೆ. ನಮ್ಮ ಆತ್ಮ ಸತ್ಯದಲ್ಲಿ ನೆಲೆಗೊಂಡುವಷ್ಟುಮಟ್ಟಿಗೆ ನಮ್ಮ ಪ್ರಾರ್ಥನೆಗಳು ಫಲಗೂಡುತ್ತವೆ. ವಿಶ್ವವು ನಮ್ಮಿಂದ ಭಿನ್ನವಾದುದಲ್ಲ, ನಾವೂ ವಿಶ್ವದಿಂದ ಭಿನ್ನರಲ್ಲ. ನಾವೆಲ್ಲ ಒಂದೇ ಸಂಸಾರದವರು, ಪರಸ್ಪರ ಕರ್ಮದಿಂದ ಪ್ರಭಾವಿತರಾಗುತ್ತೇವೆ. ಇಲ್ಲಿ ಕರ್ಮವೆಂದರೆ ಚಿಂತನೆಗಳೂ ಸೇರುತ್ತವೆ; ಎಂದರೆ, ಯಾವ ಒಂದು ಚಿಂತನೆಯೂ ಪರಿಣಾಮರಹಿತವಾದುದಲ್ಲ. ಆದುದರಿಂದಲೇ ನಾವು ಯಾವಾಗಲೂ ಸದ್ಭಾವಗಳನ್ನೇ ಅಭ್ಯಸಿಸುವ ಯತ್ನ ಮಾಡಬೇಕು.

ದೇವರು ನಿರಾಕಾರನಾಗಿರುವುದರಿಂದಲೂ, ಸತ್ಯವು ಅದೇ ರೀತಿ ಇರುವುದರಿಂದಲೂ, ಸತ್ಯವೇ ದೇವರೆನ್ನುವುದಿಲ್ಲ ನಾನು; ದೇವರ ಗುಣಗಳಲ್ಲಿ ಸತ್ಯವೊಂದೇ ನಮಗೆ ಅರ್ಥವಾಗುವುದರಿಂದ ಆ ರೀತಿ ಹೇಳುತ್ತೇನೆ. ಇತರ ಗುಣಗಳು ಸತ್ಯಸ್ವರೂಪಿಯಾದ ಸರ್ವೇಶ್ವರನ ಅಂಶಗಳನ್ನು ಮಾತ್ರ ವ್ಯಕ್ತಪಡಿಸುತ್ತವೆ. 'ಈಶ್ವರ' ಎನ್ನುವ ಶಬ್ದವೂ ಭಗವಂತನ ಒಂದು ಗುಣವರ್ಣನೆಯೇ. ಆದರ ಅರ್ಥ 'ಪ್ರಭು' ಎಂದು. ಅದು ಸ್ಫೂರ್ತಿ ನೀಡುತ್ತದೆ. ದೇವರನ್ನು 'ರಾಜಾಧಿರಾಜ' ಎಂದು ಸಂಬೋಧಿಸುವುದು ಬೌದ್ಧಿಕ ತೃಪ್ತಿಯನ್ನು ನೀಡಲಾರದು. ಈ ರೀತಿ ಚಿಂತಿಸುವುದರಿಂದ ನಮ್ಮ ಮನಸ್ಸಿನಲ್ಲಿ ಒಂದು ಬಗೆ ಭೀತಿ ಜನಿಸುತ್ತದೆ. ಇದರಿಂದ ಪಾಪ ಎಸಗಲು ಅಂಜಿ, ಪುಣ್ಯಕಾರ್ಯ ಮಾಡಲು ಉತ್ತೇಜನ ದೊರಕುತ್ತದೆ. ಆದರೆ ಭೀತಿಯಿಂದ ಜನಿಸಿದ ಪುಣ್ಯ ಪುಣ್ಯವೇ ಅಲ್ಲವೆನಿಸುತ್ತದೆ. ಯಾವ ಪ್ರತಿಫಲಾಪೇಕ್ಷೆಯೂ ಇಲ್ಲದೆ ಒಳ್ಳೆಯ ಕಾರ್ಯವನ್ನು ಮಾಡಬೇಕೆಂಬ ದೃಷ್ಟಿಯಿಂದಲೇ ಅದನ್ನು ಮಾಡೋಣ. ಈ ರೀತಿ ವಿಚಾರಮಾಡಿದಾಗ 'ದೇವರು ಸತ್ಯ'ವೆಂಬ ವಾಕ್ಯ ನನಗೆ ಅಪರಿಪೂರ್ಣವಾಗಿ ಕಂಡುಬಂದಿತು. 'ಸತ್ಯವೇ ದೇವರು' ಎಂಬುದು ಮಾನವನ ಭಾಷೆಯಲ್ಲಿ ವ್ಯಕ್ತಪಡಿಸಬಹುದಾದ ಪೂರ್ಣ ಅರ್ಥವನ್ನು ಸೂಚಿಸುತ್ತದೆ. 'ಸತ್' ಎಂಬ ಮೂಲದಿಂದ ಬಂದಿರುವ ಸತ್ಯ ಶಬ್ದದ ಉತ್ಪತ್ತಿಯನ್ನು ಪರಿಗಣಿಸಿದಾಗಲೂ ನಾವು ಇದೇ ನಿರ್ಣಯಕ್ಕೆ ಬರುತ್ತೇವೆ. 'ಸತ್' ಎಂದರೆ ಸನಾತನ; ಶಾಶ್ವತ. ಯಾವುದೂ ಎಲ್ಲ ಕಾಲಕ್ಕೂ ಇರುವುದೋ ಅದು ಸತ್ಯ. ಅದೊಂದೇ ಶಾಶ್ವತ, ಉಳಿದುದೆಲ್ಲ ನಶ್ವರ. ನಾವು ದೇವರನ್ನು

ಸತ್ಯವೆಂದು ಪರಿಭಾವಿಸಿದಾಗ ನಮ್ಮ ನಂಬಿಕೆ ಶಕ್ತಿಗುಂದಬಾರದು; ಅದು ವೃದ್ಧಿಯಾಗಬೇಕು. ಇದು ನನ್ನ ಅನುಭವ. ನಾವು ಸತ್ಯವನ್ನು ದೇವರು ಎಂಬುದಾಗಿ ಭಾವಿಸುವುದರಿಂದ ಎಷ್ಟೋ ಅಪಾಯಗಳಿಂದ ಪಾರಾಗುತ್ತೇವೆ. ಪವಾಡಗಳನ್ನು ನೋಡುವುದರಲ್ಲಾಗಲಿ, ಕೇಳುವುದರಲ್ಲಾಗಲಿ ನಮ್ಮ ಆಸಕ್ತಿಯೆಲ್ಲ ಕ್ಷೀಣವಾಗುತ್ತದೆ. ದೇವರ ಪ್ರತ್ಯಕ್ಷ ದರ್ಶನವೆನ್ನುವುದನ್ನು ಅರ್ಥಮಾಡಿಕೊಳ್ಳುವುದು ಕಷ್ಟ. ಸತ್ಯದರ್ಶನವೆನ್ನುವುದರಲ್ಲಿ ಯಾವ ಆತಂಕವೂ ಇಲ್ಲ. ಸತ್ಯದರ್ಶನವೂ ನಿಜವಾಗಿ ಪ್ರಯಾಸಪೂರಿತವಾದುವೆ. ಆದರೆ ನಾವು ಸತ್ಯದ ಬಳಿಸಾರಿದಂತೆಲ್ಲ ಆ ಸತ್ಯಸ್ವರೂಪಿ ಈಶ್ವರನ ಮಿನುಗುನೋಟ ಲಭಿಸುತ್ತದೆ; ಯಥಾ ಕಾಲದಲ್ಲಿ ಆವನ ಪೂರ್ಣ ದರ್ಶನವೂ ದೊರಕೀತೆಂಬ ನಂಬಿಕೆ ನಮ್ಮಲ್ಲಿ ಹೆಚ್ಚು ಹೆಚ್ಚು ಉಜ್ವಲಗೊಳ್ಳುತ್ತದೆ.

## ೫. ಕಾರ್ಯಕರ್ತರಿಗೆ

(ಈ ಕೆಳಗಿನ ಪತ್ರಗಳನ್ನು ಮಹಾದೇವ ದೇಸಾಯಿಯವರ ದಿನಚರಿಯಿಂದ ಆರಿಸಿಕೊಳ್ಳಲಾಗಿದೆ.)

### ಹರಿಲಾಲನಿಗೆ*

ಆಗಸ್ಟ್ ೨೭, ೧೯೩೨

(ಹರಿಲಾಲ್ ಗಾಂಧೀಜೀಗೆ ಒಂದು ಅಪಮಾನಕರ ಪತ್ರವನ್ನು ಬರೆದು, ತನ್ನ ನಾದಿನಿ ಬಾಲಿಯ ಪೋಷಣೆಯಲ್ಲಿದ್ದ ಮಗಳು ಮನೂ ಬಿಡುಗಡೆಹೊಂದಬೇಕೆಂದೂ, ಬಾಲಿ ತನ್ನ ಮೇಲೆ ದಾಳಿ ನಡೆಸಿದ್ದಾಳೆಂದೂ ದೂರಿಟ್ಟಿದ್ದನು. ಇದಕ್ಕೆ ಬಾಪೂ ಒಂದು ದೀರ್ಘ ಉತ್ತರವನ್ನು ಕೊಟ್ಟು, ಅದರ ಕೊನೆಯಲ್ಲಿ ಅತ್ಯಂತ ವೇದನೆಯಿಂದ ಹೀಗೆ ಬರೆದರು:)

ನನ್ನ ವಿಷಯದಲ್ಲಿ ನಾನು ಹೇಗೆ ನಿರಾಶೆಯೊಂದುವುದಿಲ್ಲವೋ ಹಾಗೆಯೇ ನೀನು ಸುಧಾರಣೆಹೊಂದುವೆ ಎಂಬ ವಿಷಯದಲ್ಲಿ ನಾನು ಇನ್ನೂ ಆಸೆಯನ್ನು ತೊರೆಯುವುದಿಲ್ಲ. ನೀನು ಜನಿಸುವುದಕ್ಕೆ ಪೂರ್ವದಲ್ಲಿ ನಾನೂ ದುರ್ಮಾರ್ಗಿಯಾಗಿದ್ದೆ. ಆದರೆ ಅಂದಿನಿಂದ ನಿಧಾನವಾಗಿ ಸನ್ಮಾರ್ಗಿಯಾಗುತ್ತಿದೇನೆ. ಆದುದರಿಂದ ನಾನು ನಿನ್ನ ವಿಷಯವಾಗಿ ಆಸೆಯನ್ನು ತ್ಯಜಿಸುವುದಕ್ಕೆ ಕಾರಣವೇ ಇಲ್ಲ. ನಾನು—ನೀನು ಇಬ್ಬರೂ ಜೀವಂತರಾಗಿರುವವರೆಗೂ ಆ ರೀತಿ ಆಶಾಭರಿತನಾಗಿರುತ್ತೇನೆ. ನನ್ನ ಸಾಮಾನ್ಯ ಪದ್ಧತಿಗೆ ವ್ಯತಿರಿಕ್ತವಾಗಿ ಈ ಪತ್ರವನ್ನು ರಕ್ಷಿಸಿ ಇಟ್ಟಿರುತ್ತೇನೆ. ಎಂದಾದರೊಂದು ದಿನ ಇಂಥ ಹುಚ್ಚುತನದ ಪತ್ರ ಬರೆದುದಕ್ಕೆ ನೀನೇ ಪಶ್ಚಾತ್ತಾಪಪಡುವೆ. ನಿನ್ನನ್ನು ಹಂಗಿಸುವುದಕ್ಕೆ ನಾನು ಈ ಪತ್ರವನ್ನು ರಕ್ಷಿಸಿಡುತ್ತಿಲ್ಲ; ನನ್ನ ಭಾಗದ ದೇವರು ಒಳ್ಳೆಯವನಾಗಿದ್ದರೆ ಇದರ ಬಗೆಗೆ ಹರ್ಷಪಡುವುದಕ್ಕಾಗಿ. ನಾವೆಲ್ಲ ತಪ್ಪುಮಾಡುವವರೇ. ಆದರೆ ಆ ತಪ್ಪನ್ನು ಸರಿಪಡಿಸಿಕೊಳ್ಳುವುದು ನಮ್ಮ ಕರ್ತವ್ಯ. ನಿನ್ನ ತಪ್ಪನ್ನು ನೀನು ತಿದ್ದಿಕೊಳ್ಳುವೆ ಎಂದು ನಂಬಿದೇನೆ.

---

* ಗಾಂಧೀಜೀಯ ಹಿರಿಯ ಮಗ. ಈತ ಮತಾಂತರಹೊಂದಿದ; 'ಹೀರಾಲಾಲ್' ಎಂದು ತನ್ನ ಹೆಸರನ್ನು ಪರಿವರ್ತಿಸಿಕೊಂಡಿದ್ದ.

## ಪರಶುರಾಮನಿಗೆ

ಮೇ ೨, ೧೯೩೨

(....ರ* ವಿವಾಹದ ವಿಷಯ ಕುರಿತು ಟೀಕೆಮಾಡಿದ ಪರಸುರಾಮನಿಗೆ ಹೀಗೆ ಉತ್ತರವಿತ್ತರು :)

ಇತರರ ತಪ್ಪನ್ನು ಕಂಡುಹಿಡಿದು ಅದರ ಬಗೆಗೆ ಟೀಕೆ ಮಾಡುವುದು ನಮ್ಮ ಕರ್ತವ್ಯವಲ್ಲ. ನಮ್ಮನ್ನು ಪರೀಕ್ಷಿಸಿಕೊಳ್ಳುವುದರಲ್ಲಿಯೇ ನಮ್ಮ ಸಾಮರ್ಥ್ಯವನ್ನೆಲ್ಲ ಬಳಸಬೇಕು. ನಮ್ಮಲ್ಲಿ ಒಂದು ಸಣ್ಣ ತಪ್ಪು ಕಂಡು ಬಂದರೂ ಅದಕ್ಕೋಸ್ಕರ ನಮ್ಮ ಬಂಧುಮಿತ್ರರು ನಮ್ಮನ್ನು ತ್ಯಜಿಸಬಾರ ದೆಂದು ಆಶಿಸುವುದಾದರೆ, ಇತರರ ನಡೆವಳಿಕೆ ಬಗೆಗೆ ನಾವೂ ಪ್ರವೇಶ ಮಾಡಬಾರದು. ಈ ರೀತಿ ನಾವು ಪ್ರವೇಶಿಸದಿದ್ದರೂ ಇತರರ ತಪ್ಪು ನಮ್ಮ ಗಮನಕ್ಕೆ ಬಂದಾಗ ಅವರಿಗೆ ತಿಳಿಯಹೇಳಬಹುದೆಂಬ ಸಾಮರ್ಥ್ಯ ನಮಗಿದೆ ಎನಿಸಿದರೆ, ಅವರಿಗೆ ಹೇಳಬೇಕೇ ಹೊರತು ಬೇರೆಯವರೊಂದಿಗೆ ಹೇಳುವ ಹಕ್ಕಿಲ್ಲ.

ಈಗ ನಿನ್ನ ಪ್ರಶ್ನೆಗೆ ಉತ್ತರ : ....ರ ಕ್ರಿಯೆ ನನಗೆ ಒಪ್ಪಿಗೆ ಇಲ್ಲದಿರ ಬಹುದು. ಆದರೆ ಆದರ ವಿಷಯವಾಗಿ ಅವರೇ ಏನನ್ನು ಹೇಳುವರು ಎಂಬುದನ್ನು ತಿಳಿದುಕೊಳ್ಳುವವರೆಗೂ ನಾನು ಯಾವ ನಿರ್ಣಯವನ್ನೂ ಮಾಡಬಾರದು. ಪ್ರವಾದಿಯೊಬ್ಬನು ಮಾಡಿದಂತೆ ಚಾಚೂ ತಪ್ಪದೆ ಅವನ ಅನುಯಾಯಿಯೂ ಮಾಡಲು ಸಾಧ್ಯವೆಂದು ನಿರೀಕ್ಷಿಸುವುದು ತಪ್ಪೆಂದು ನನ್ನ ಅಭಿಪ್ರಾಯ. ಮಹಾಪುರುಷನೊಬ್ಬ ಮಾಡಿದ ಎಲ್ಲವನ್ನೂ ಮಾಡುವ ಹಕ್ಕು ಸಾಮಾನ್ಯನಿಗಿಲ್ಲ. ಒಂದುವೇಳೆ ಮಾಡಲೆತ್ನಿಸಿದರೆ ಅದರ ಪರಿಣಾಮ ವಿನಾಶಕಾರಿಯಾದುದನ್ನು ನಾವು ಕಂಡಿದೇವೆ. ಆದರೆ ಹಿಂದೂಗಳಾಗಲಿ, ಮುಸ್ಲಿಮರಾಗಲಿ, ಬೇರೆ ಯಾರೇ ಆಗಲಿ ಈ ಸುವರ್ಣ ನಿಯಮವನ್ನು ಎಲ್ಲ ಸಂದರ್ಭದಲ್ಲಿಯೂ ಅನುಸರಿಸುವುದು ಕಂಡುಬರುವುದಿಲ್ಲ. ಇದಕ್ಕೆ ಪ್ರತಿಯಾಗಿ ಅವತಾರಪುರುಷರು ಹೇಗೆ ಸ್ವತಂತ್ರವಾಗಿ ವರ್ತಿಸಿದರೋ ತಾವೂ ಅಂತೆಯೇ ವರ್ತಿಸುವ ಸ್ವಾತಂತ್ರ್ಯಹೊಂದಿರುವೆವೆಂದು ವಾದ ಮಾಡುತ್ತಾರೆ; ಆ ರೀತಿ ವರ್ತಿಸುತ್ತಾರೆ. ಹೀಗಿರುವುದರಿಂದ ....ರು ಪ್ರವಾದಿಯ ಉದಾಹರಣೆ ಕೊಟ್ಟುದು ನನಗೆ ಅಚ್ಚರಿ ಎನಿಸುವುದಿಲ್ಲ.

## ಒಬ್ಬ ಕಾರ್ಯಕರ್ತನಿಗೆ

ಮೇ ೧೩, ೧೯೩೨

(ಯಾರೋ ಕೇಳಿದ ಪ್ರಶ್ನೆಗಳಿಗೆ ಹೀಗೆ ಉತ್ತರ ಬರೆದರು :)

ನುಡಿಯಂತೆ ನಡೆದು ಸನ್ಮಾರ್ಗಪಥ ತೋರುವವನೇ ಆಚಾರ್ಯ. 'ಅಹಂ' ಎಂಬುದನ್ನು ಶೂನ್ಯವಾಗುವಂತೆ ಮಾಡಿಕೊಳ್ಳುವುದೇ ಆತ್ಮ-ಧರ್ಮ. ನಿಸ್ವಾರ್ಥಸೇವೆಯೇ ಬಾಳಿನ ಗುಟ್ಟು. ವೀತರಾಗರಾಗುವುದೇ ನಮ್ಮ ಪರಮ ಆದರ್ಶ. ಋಷಿಗಳು ಸ್ವಾನುಭವದಿಂದ ನೀತಿನಿಯಮಗಳನ್ನು ರಚಿಸಿದರು. ಆತ್ಮಸಾಕ್ಷಾತ್ಕಾರಹೊಂದಿದವನೇ ಋಷಿ. ಕಾಮ್ಯ ಕರ್ಮಗಳನ್ನು ತ್ಯಜಿಸುವುದೇ ಗೀತೆ ಬೋಧಿಸುವ ಸಂನ್ಯಾಸ. ಶರೀರವನ್ನು ತನ್ನ ಅಂಕೆಯಲ್ಲಿಟ್ಟುಕೊಂಡವನೇ ಮಾನವ. ಬಾಹ್ಯ ಚಕ್ಷುಸ್ಸಿಗೆ ಅಗೋಚರವಾಗಿರುವ ಆಂತರಿಕ ಗುಣವೇ ಸೌಂದರ್ಯ.

## ಫೂಲ್‌ಚಂದನಿಗೆ

ಮೇ ೧೩, ೧೯೩೨

(ವಿಲಾಸಪುರದ ಸೆರೆಮನೆಯಲ್ಲಿರುವ ಫೂಲ್‌ಚಂದನಿಂದ ಒಂದು ಪತ್ರ ಬಂದಿದೆ. ಸೆರೆಮನೆಯ ಅಧಿಕಾರಿಗಳು ಅದರಲ್ಲಿ ಹದಿಮೂರು ಸಾಲುಗಳನ್ನು ಹೊಡೆದುಹಾಕಿದಾರೆ. ಅವನಿಗೆ ಬಾಪೂ ಕೊಟ್ಟ ಉತ್ತರವಿದು :)

ಇಂಥ ಘಟನೆಗಳಿಗೆ ನಾವು ಪೇಚಾಡಬಾರದು. ನಾವು ಬಂದಿಗಳು. ಸೆರೆಮನೆಯ ಅಧಿಕಾರಿ ಯಾವುದನ್ನು ಮಾಡಲು ನಮಗೆ ಸ್ವಾತಂತ್ರ್ಯ ಕೊಡುವನೋ ಅಷ್ಟೇ ನಮಗೆ. ಒಂದು ಕಾಲದಲ್ಲಿ ಬಂದಿಗಳಿಗೆ ಓದಲು ಪುಸ್ತಕಗಳನ್ನು ಕೊಡುತ್ತಿರಲಿಲ್ಲ, ಪತ್ರಗಳನ್ನು ಬರೆಯಲು ಅವಕಾಶ ಇರಲಿಲ್ಲ, ಸಾಕಷ್ಟು ಆಹಾರವನ್ನೂ ಕೊಡುತ್ತಿರಲಿಲ್ಲ, ಹಗಲು – ರಾತ್ರಿ ಬೇಡಿ ಇರುತ್ತಿತ್ತು, ಹುಲ್ಲಿನ ಮೇಲೆ ಮಲಗಬೇಕಾಗಿತ್ತು. ಆದುದರಿಂದ ಈಗ ನಮಗೆ ಲಭಿಸುವುದಕ್ಕೆಲ್ಲ ದೇವರನ್ನು ವಂದಿಸೋಣ. ಆದರೆ ನಮ್ಮ ಆತ್ಮಗೌರವರಕ್ಷಣೆಯೇ ಎಲ್ಲಕ್ಕಿಂತ ಪ್ರಧಾನ.

ಆ ಸೆರೆಮನೆಯಲ್ಲಿರುವ ನೀವೆಲ್ಲರೂ ಕಾಲವನ್ನು ಸದ್ವಿನಿಯೋಗ ಮಾಡುತ್ತಿದೀರೆಂದು ನಂಬಿದೇನೆ. ಸೆರೆಮನೆಯಲ್ಲಿ ನಮಗೆ ದೊರಕುವಷ್ಟು

ವಿರಾಮ ಹೊರಗಡೆ ದೊರಕುವುದಿಲ್ಲ. ನಮಗೆ ಸಿಕ್ಕುವ ಪುಸ್ತಕಗಳನ್ನು ಓದಬೇಕು. ಪುಸ್ತಕಗಳು ದೊರಕದೇ ಇದ್ದರೆ, ವಿಚಾರಮಾಡಬಹುದು. ಹೀಗೆ ಒಂದಲ್ಲ ಒಂದು ವಿಧದಲ್ಲಿ ನಾವು ಚಟುವಟಿಕೆಯಿಂದ ಇರಬೇಕು. ಸರಕಾರಕ್ಕೆ ಸೇರಿದ ವಸ್ತುವೋ ಅಥವಾ ಕಾಲವನ್ನು ನಮಗೆ ಸೇರಿದುದಲ್ಲ ಎಂಬ ನೆಪದ ಮೇಲೆ ಕಳೆಯಬಹುದೆಂಬ ದೊಡ್ಡ ತಪ್ಪನ್ನು ನಾವು ಮಾಡುತ್ತೇವೆ. ಸರಕಾರಕ್ಕೆ ಸೇರಿದ ವಸ್ತುವೆನ್ನುವುದೂ ಸಾರ್ವಜನಿಕ ವಸ್ತುವೇ; ಸದ್ಯದಲ್ಲಿ ಸರಕಾರದ ವಶದಲ್ಲಿ ಇರುತ್ತದೆ. ಆದುದರಿಂದ ಯಾವುದು ನಮ್ಮ ಹಸ್ತ ಸೇರಿದರೂ ಅದನ್ನು ಸದ್ವಿನಿಯೋಗ ಮಾಡೋಣ. ಸೆರೆಮನೆಯಲ್ಲಿ ದುಡಿದು ವಸ್ತುವನ್ನು ಉತ್ಪಾದನೆ ಮಾಡುವುದೆಂದರೆ ರಾಷ್ಟ್ರೀಯ ಸಂಪತ್ತನ್ನು ಹೆಚ್ಚಿಸಿದ ಹಾಗೆ. ಸರಕಾರವು ಪರಕೀಯರ ವಶದಲ್ಲಿದೆಯೆಂಬ ಕಾರಣ ನನ್ನ ವಾದವನ್ನು ಬದಲಿಸುವುದಿಲ್ಲ. ಇಲ್ಲಿಗೆ ನಿಲ್ಲಿಸುತ್ತೇನೆ; ಏಕೆಂದರೆ, ಮುಂದಕ್ಕೆ ಬರೆದರೆ ಅದು ರಾಜಕೀಯ ಎನಿಸೀತು. ಸೆರೆಯಾಳುಗಳಾದ ನಮಗೆ ರಾಜಕೀಯ ನಿಷಿದ್ಧ.

## ಪ್ಯಾರೇಲಾಲರ* ತಾಯಿಗೆ

ಮೇ ೧೭, ೧೯೩೨

(ಪ್ಯಾರೇಲಾಲರ ತಾಯಿ ದೇವರನ್ನು ಕಾಣುವ ಪರಿ ಎಂತು ಎಂದು ಪ್ರಶ್ನಿಸಿದ್ದರು. ಬಾಪೂ ಉತ್ತರವಿದು :)

ಈ ಕಣ್ಣುಗಳಿಂದ ನಾವು ದೇವರನ್ನು ಕಾಣಲಾರೆವು. ದೇವರು ನಿರಾಕಾರಸತ್ತ್ವ; ಆದುದರಿಂದ ಅವನು ನಂಬಿಕೆಯ ಕಣ್ಣಿಗೆ ಮಾತ್ರ ಗೋಚರವಾಗುತ್ತಾನೆ. ನಮ್ಮ ಮನಸ್ಸಿನಲ್ಲಿ ದುಷ್ಟ ಭಾವನೆಗಳಿಲ್ಲದೆ, ಭಯಲೇಶವಿಲ್ಲದೆ, ಹೃದಯದಲ್ಲಿ ಸದಾ ಆನಂದ ತುಂಬಿದ್ದರೆ ನಮ್ಮಲ್ಲಿಯೇ ದೇವರಿದ್ದಾನೆ ಎಂಬುದಕ್ಕೆ ಅದು ಸೂಚನೆ. ಅವನೇನೋ ಸದಾ ಇದ್ದೇ ಇರುತ್ತಾನೆ. ಆದರೆ ನಾವೇ ನಂಬಿಕೆರಹಿತರಾಗಿ ಅವನನ್ನು ಕಾಣಲಾರದಾಗುತ್ತೇವೆ. ತುಂಬ ಬವಣೆಗೆ ಗುರಿಯಾಗುತ್ತೇವೆ. ನಿಜವಾದ ನಂಬಿಕೆ ನಮ್ಮಲ್ಲಿ ಜನಿಸಿದರೆ ಯಾವ ಕ್ಲೇಶವೂ ನಮ್ಮನ್ನು ಏನೂ ಮಾಡಲಾರದು.

---

* ಗಾಂಧೀಜೀಯ ಕಾರ್ಯದರ್ಶಿಯಾಗಿದ್ದವರು.

## ಒಬ್ಬ ಕಾರ್ಯಕರ್ತನಿಗೆ

ಮೇ ೧೭, ೧೯೩೨

(ಒಬ್ಬಾತ ಪ್ರಾಣಾಯಾಮದ ವಿಷಯ ಕುರಿತು ಪ್ರಶ್ನಿಸಿದ. ಅದಕ್ಕೆ ಬರೆದ ಉತ್ತರ ಹೀಗಿತ್ತು :)

ನನಗೆ ಅದರ ಅನುಭವವಿಲ್ಲ. ಆದುದರಿಂದ ಅದರ ಬಗೆಗೆ ಏನನ್ನೂ ಹೇಳಲಾರೆ. ದೈಹಿಕ ಕ್ರಿಯೆಗಳಿಂದ ನಾವು ಭಗವಂತನ ಸಾನ್ನಿಧ್ಯವನ್ನು ಸೇರಲಾರೆವು. ಅದು ನಿಷ್ಠೆಯಿಂದಲೂ ನಿಷ್ಠೆಯಿಂದ ಸ್ಫೂರಿತವಾದ ಆಚಾರದಿಂದಲೂ ಸಾಧ್ಯ. ಪ್ರಾಣಾಯಾಮ ಮೊದಲಾದ ಕ್ರಿಯೆಗಳು ಕೇವಲ ಶುದ್ಧಿಯ ಕ್ರಿಯೆಗಳು ; ಅವುಗಳಿಂದ ಅಲ್ಪಸ್ವಲ್ಪ ಮನಶ್ಶಾಂತಿ ಲಭಿಸಬಹುದು, ಅಷ್ಟೆ.

## ಕಾರ್ಯಕರ್ತನಿಗೆ

ಮೇ ೧೭, ೧೯೩೨

(ಎಂದೆಂದಿಗೂ ಅಚಲನಾದ ವ್ಯಕ್ತಿಯೊಬ್ಬನನ್ನು ನೀವು ಕಂಡಿದೀರಾ ಎಂದು ಯಾರೋ ಒಬ್ಬಾತ ಬಾಪೂ ಅವರನ್ನು ಪ್ರಶ್ನಿಸಿದ್ದಕ್ಕೆ ಹೀಗೆ ಉತ್ತರವಿತ್ತರು :)

ತಳಮಳವಿಲ್ಲದ ಬಾಳು ಕಾಂತಿಹೀನ ಬಾಳು. ಅದು ನಿರೀಕ್ಷಿಸುವಂಥದಲ್ಲ. ಆದುದರಿಂದ ಬಾಳಿನ ಎಲ್ಲ ವಿಧದ ಕಷ್ಟಕಾರ್ಪಣ್ಯಗಳನ್ನು ಸಹಿಸಿಕೊಳ್ಳುವುದೇ ವಿವೇಕ. ರಾಮಾಯಣದಿಂದ ಇಂಥ ಒಂದು ಸಮೀಚೀನ ಪಾಠವನ್ನು ಕಲಿಯಬಹುದು.

ಮೇ ೧೯, ೧೯೩೨

('ಎಸ್' ಎನ್ನುವವರಿಂದ ಬಾಪೂಗೆ ಒಂದು ದೀರ್ಘ ಪತ್ರ ಬಂದಿತ್ತು ; ಸೆರೆಮನೆಯಲ್ಲಿ ವಿಶೇಷ ಸೌಲಭ್ಯಗಳು ದೊರಕುತ್ತವೆಂದು ನಿರೀಕ್ಷಿಸಬಾರದೆಂದು ಇತರರಿಗೆ ಹೇಳಿ ತಾವು ಮಾತ್ರ ವಿಶೇಷ ಸೌಲಭ್ಯಗಳನ್ನು ಹೊಂದುವುದೇಕೆ ಎಂಬ ಪ್ರಶ್ನೆ ಅದರಲ್ಲಿತ್ತು. ರೋಗಗ್ರಸ್ತನೊಬ್ಬ ಮರಣೋನ್ಮುಖನಾಗಿರುವಾಗ ನಾವು ದುಃಖಿಸುವುದೇಕೆ ? ಗುಣಮುಖವಾದರೆ ದೇವರನ್ನು ವಂದಿಸುವುದೇಕೆ ? ಅನೇಕ ದುಷ್ಟ ಜನ ಬಹುಕಾಲ ಬದುಕುವುದಕ್ಕೂ ಒಳ್ಳೆಯವರು ಯೌವನದಲ್ಲೇ ಮರಣ ಹೊಂದುವುದಕ್ಕೂ ಕಾರಣವೇನು ? ಈ ಪ್ರಶ್ನೆಗಳಿಗೆ ಬಾಪೂ ಹೀಗೆ ಉತ್ತರ ಕೊಟ್ಟರು :)

'ಎಸ್' ಅನುಭವಿಸುವ ವಿಶೇಷ ಸೌಲಭ್ಯಗಳನ್ನು ಬಲವಂತದಿಂದ ಬಿಡಿಸಲು ಸಾಧ್ಯವಿಲ್ಲ. ಆಕೆಯೇ ಅದನ್ನು ತ್ಯಜಿಸಲು ನಿರ್ಧರಿಸಿದರೆ ಆ ಮಾತು ಬೇರೆ. ನನ್ನ ಉದಾಹರಣೆ ತೆಗೆದುಕೊಳ್ಳುವುದು ಯುಕ್ತವೂ ಹೌದು, ಅಯುಕ್ತವೂ ಹೌದು. ಈ ಕಾರಣದಿಂದ ಯುಕ್ತ : ನಾನು ಚಟುವಟಿಕೆಯಿಂದ ಕ್ರಿಯೆಯಲ್ಲಿ ತೊಡಗಿರುವವರೆಗೆ ಅನೇಕರು ನನ್ನನ್ನು ಅನುಸರಿಸಬಹುದು, ಇದರಿಂದ ಮಾನಸಿಕ ಗೊಂದಲಕ್ಕೆ ಗುರಿಯಾಗಬಹುದು. ಇತರರು ನಡೆಸಬೇಕೆಂದು ನಾನು ಹೇಳುವ ಜೀವನವಿಧಾನದಲ್ಲಿ ನಾನೇ ನಡೆಯಲು ಅನೇಕ ಕಾರಣಗಳಿಂದ ಅಸಾಧ್ಯವಾಗಿದೆ. ಇದು ನನ್ನ ನಾಯಕತ್ವದ ನ್ಯೂನತೆಯೆಂದು ನನಗೆ ಗೊತ್ತಿದೆ. ಈ ಕಾರಣದಿಂದ ನನ್ನ ಉದಾಹರಣೆ ತೆಗೆದುಕೊಳ್ಳುವುದು ಅಯುಕ್ತ : ನನ್ನ ಶಾರೀರಕ ಅಶಕ್ತಿ, ಮಹಾತ್ಮಾಗಿರಿ ಮತ್ತು ವಿಶೇಷ ಪರಿಸ್ಥಿತಿ ಇವುಗಳಿಂದ ನನಗೂ ನನ್ನ ಸಹಕಾರ್ಯಕರ್ತರಿಗೂ ವ್ಯತ್ಯಾಸವಿದೆ. ನಾನು 'ಸಿ' ತರಗತಿಯ ಕೈದಿ ಆಗಿದ್ದರೂ ಇತರರ ಆಹಾರಕ್ಕೂ ನನ್ನ ಆಹಾರಕ್ಕೂ ವ್ಯತ್ಯಾಸವಿದ್ದೀತು, ದೇಹಸ್ಥಿತಿ ಮತ್ತು ಧಾರ್ಮಿಕ ಆಚಾರಗಳಿಗೆ ಅನುಗುಣವಾಗಿ. ಇದು ಸ್ವಲ್ಪ ಹೆಚ್ಚುಕಡಮೆ ಎಲ್ಲ ಕೈದಿಗಳಿಗೂ ಅನ್ವಯಿಸುತ್ತದೆ. ಆದರೆ ನನಗೆ ದೊರಕುವ ವಿಶೇಷ ರೀತಿಯ ಆಹಾರವೂ, ಸೌಲಭ್ಯವೂ ಅವರಿಗೆ ದೊರಕಲಾರದು. ಪ್ರತಿ ಮೂರು ತಿಂಗಳಿಗೆ ಒಂದು ಸಲಕ್ಕೆ ಪ್ರತಿಯಾಗಿ ವಾರಕ್ಕೆ ಒಂದು ಸಲ ನನ್ನ ಭೇಟಿಗೆ ಅವಕಾಶವಿದೆ. ನಾನು ಎಷ್ಟು ಬೇಕಾದರೂ ಪತ್ರವ್ಯವಹಾರ ನಡೆಸಬಹುದು. ಇದೆಲ್ಲವನ್ನೂ ನಾನು ಸರಿ ಎಂದುಕೊಂಡಿದ್ದೇನೆ, ಏಕೆಂದರೆ, ನನಗೆ ಆತ್ಮೀಯ ಗೆಳೆಯರು ಎನ್ನುವವರಿಲ್ಲ; ಬಂಧುಗಳೆಂದುಕೊಂಡು ನನ್ನನ್ನು ಭೇಟಿಮಾಡಬಯಸುವ ಬಂಧುಗಳಿಲ್ಲ. ಅವರನ್ನು ನಾನು ನೈತಿಕ ದೃಷ್ಟಿಯಿಂದ ಭೇಟಿಯಾಗುತ್ತೇನೆ. ನನ್ನ ಪತ್ರವ್ಯವಹಾರಕ್ಕೂ ಇದೇ ದೃಷ್ಟಿ. ನನಗೂ ಗೋಚರವಾಗದಂತೆ ಇದೆಲ್ಲದರ ಹಿಂದೆ ಸ್ವಲ್ಪ ಸ್ವಾರ್ಥವಿದ್ದೀತೋ ಹೇಗೋ ಹೇಳಲಾರೆ; ಅದು ಅಸಂಭವ, ಏಕೆಂದರೆ, ಎಲ್ಲ ಭೇಟಿಗಳೂ ಪತ್ರವ್ಯವಹಾರವೂ ನಿಂತರೆ ನನಗೇನೂ ವ್ಯಸನವಿಲ್ಲ. ೧೯೩೦ರಲ್ಲಿ ನನ್ನ ಷರತ್ತುಗಳು ಒಪ್ಪಿಗೆಯಾಗಲಿಲ್ಲವಾದ್ದರಿಂದ ಆಗ ಭೇಟಿಗಳೇ ಇರಲಿಲ್ಲ. ಹಾಗೆಯೇ ೧೯೨೨ರಲ್ಲಿ ನಾನು

ಪತ್ರಗಳನ್ನು ಬರೆಯುವುದನ್ನೇ ಬಿಟ್ಟುಬಿಟ್ಟಿದ್ದೆ. ಇದೆಲ್ಲವರ ಜೊತೆಗೆ ನನ್ನನ್ನು ಇತರ ಬಂದಿಗಳ ಜೊತೆಗಿಡದೆ ಬೇರೆ ಕಡೆ ಇಟ್ಟಿರುವುದನ್ನೂ ಗಮನಿಸಬೇಕು. ಈ ಎಲ್ಲ ಕಾರಣಗಳಿಂದ ನನ್ನನ್ನು ಇತರ ಬಂದಿಗಳ ಜೊತೆಗೆ ಹೋಲಿಸುವುದು ನ್ಯಾಯವಲ್ಲ. ಇವಕ್ಕೆಲ್ಲ ರುಜುವಾತು ಬೇಕಿಲ್ಲ ಎಂದು ಭಾವಿಸುವವರೆಗೂ ಏನು ವಾದ ಮಾಡಿದರೂ ನಿಷ್ಫಲ. ನ್ಯಾಯಾಧೀಶನೇ ಸ್ವ-ಇಚ್ಛೆಯಿಂದ ಕೆಲವರನ್ನು 'ಎ' ತರಗತಿ ಕೈದಿಗಳನ್ನಾಗಿ ಮಾಡಿರುವುದಕ್ಕೂ, ಮತ್ತೆ ಕೆಲವರನ್ನು ಹೊರಗಿನ ಶಕ್ತಿಗಳ ಪ್ರಭಾವಕ್ಕೆ ಒಳಗಾಗಿ ಆ ರೀತಿ ಮಾಡಿರುವುದಕ್ಕೂ ಸ್ವಲ್ಪ ವ್ಯತ್ಯಾಸವಿದೆ. ಆದರೆ ಇದರಿಂದ ಏನೂ ಪ್ರಯೋಜನವಿಲ್ಲ. ಯಾವ ವರ್ಗವೂ ಇಲ್ಲದಿರುವುದೇ ಆದರ್ಶ ನಿಜ. ಆದುದರಿಂದ ಯಾರು ಮೇಲಿನ ವರ್ಗವೆಂಬುದರಲ್ಲಿಡಲ್ಪಟ್ಟಿರುವರೋ ಅವರು ಅದನ್ನು ತಾವಾಗಿಯೇ ತ್ಯಜಿಸಬೇಕು. ಈ ಆದರ್ಶ ಆಚರಣೆಗೆ ಸುಲಭವಲ್ಲ. ಆದುದರಿಂದ ....ನಂಥ ಚಿಕ್ಕ ಹುಡುಗಿಯ ಮೇಲೆ ಇದನ್ನು ಹೇರುವಷ್ಟು ಕಠಿಣಹೃದಯ ನನಗಿಲ್ಲ. ಅವಳು ವಿಚಾರವಂತ ಹುಡುಗಿ. ಯಾವ ನಿಯಮಗಳನ್ನು ತಾನು ಅನುಸರಿಸಲು ಸಾಧ್ಯವೆಂಬುದನ್ನು ಅವಳು ಅನುಸರಿಸುತ್ತಲೇ ಇರಬೇಕು.

ಮಣಿಲಾಲನಿಗೆ* ಗುಣವಾಗಲೆಂದು ನಾನು ಪ್ರಾರ್ಥಿಸಿದೆ. ಇದು ವಿವೇಕದ ಚಿಹ್ನೆಯಲ್ಲದಿದ್ದರೂ ತಂದೆಯೊಬ್ಬನ ಪ್ರೇಮದ ಚಿಹ್ನೆ. ನಾವು ನಿಜವಾಗಿಯೂ ಮಾಡಬಹುದಾದ ಪ್ರಾರ್ಥನೆ ಒಂದೇ: 'ನಿನ್ನ ಸಂಕಲ್ಪವೇ ನಡೆದೀತು' ಎಂದು. ಈ ರೀತಿ ಪ್ರಾರ್ಥನೆ ಸಲ್ಲಿಸುವುದರಲ್ಲಿ ಅರ್ಥವೇನಿದೆ ಎಂದು ಯಾರಾದರೂ ಪ್ರಶ್ನಿಸಬಹುದು. ಅದಕ್ಕೆ ಉತ್ತರ ಹೀಗೆ: ಪ್ರಾರ್ಥನೆಯನ್ನು ಕೇವಲ ಬಾಹ್ಯರೂಪದಲ್ಲಿ ಭಾವಿಸಬಾರದು. ನಮ್ಮೆಲ್ಲರ ಹೃದಯಸ್ಥ ಪರಮಾತ್ಮನ ಅರಿವು ನಮಗಿದೆ. ನಮ್ಮನ್ನು ಆವರಿಸಿರುವ ಮೋಹದಿಂದ ಪಾರಾಗಲು ಪರಮಾತ್ಮ ನಮ್ಮಿಂದ ಪ್ರತ್ಯೇಕವಾಗಿದಾನೆಂದು ಭಾವಿಸಿ ಅವನಿಗೆ ಪ್ರಾರ್ಥನೆಮಾಡುತ್ತೇವೆ. ನಮ್ಮ ಮನ ಆಸೆ ಬಂದತ್ತ ಹೋಗದೆ ಭಗವಂತ ನಮ್ಮನ್ನು ಯಾವ ಕಡೆ ನಡೆಸುವನೋ ಅತ್ತ ಕಡೆ

* ಗಾಂಧೀಜೀಯ ಎರಡನೆಯ ಮಗ.

ಹೋಗಬೇಕೆಂಬುದೇ ನಮ್ಮ ಆಶಯ. ಬದುಕಿರುವುದು ಒಳ್ಳೆಯದೋ ಅಥವಾ ಸಾವು ಒಳ್ಳೆಯದೋ ನಮಗೆ ಅರಿವಿಲ್ಲ. ಆದುದರಿಂದ ಬದುಕಿಗಾಗಿ ಹರ್ಷವನ್ನೂ ಸಾವಿನ ಬಗೆಗೆ ತಲ್ಲಣವನ್ನೂ ನಾವು ತೋರಿಸಬಾರದು. ಎರಡರ ಬಗೆಗೂ ನಾವು ಸಮಚಿತ್ತವುಳ್ಳವರಾಗಿರಬೇಕು. ಅದೇ ಆದರ್ಶ. ಇದನ್ನು ಸಾಧಿಸಲು ದೀರ್ಘಕಾಲ ಬೇಕಾದೀತು, ಎಲ್ಲೋ ಕೆಲವು ಮಂದಿಗೆ ಮಾತ್ರವೇ ಸಾಧ್ಯವಾದೀತು. ಆದರೂ ಅದನ್ನು ಸದಾ ನೆನಪಿನಲ್ಲಿಟ್ಟು ಕೊಂಡಿದ್ದು, ಸಾಧನೆ ಕಷ್ಟ ಕಂಡುಬಂದಷ್ಟೂ ನಮ್ಮ ಪ್ರಯತ್ನವನ್ನೂ ಹೆಚ್ಚಿಸಬೇಕು. ಮಾನವನ ಆಯುಷ್ಯಪ್ರಮಾಣ ನೂರು ವರ್ಷವೊ, ಇನ್ನೂ ಹೆಚ್ಚಾಗಿಯೋ ಇರಬಹುದು. ಆದರೆ ಎಷ್ಟು ಕಾಲವೇ ಬದುಕಿರಲಿ, ಅದು ಸಾಗರೋಪಮವಾದ ಅನಂತದ ಒಂದೇ ತೊಟ್ಟಿನ ಲಕ್ಷೋಪಲಕ್ಷದ ಒಂದು ಅಂಶವೂ ಆಗುವುದಿಲ್ಲ. ಅದರ ಬಗೆಗೆ ಎಲ್ಲ ಅಭಿಮಾನವೂ, ಎಲ್ಲ ಎಣಿಕೆಗಳೂ ಅರ್ಥಶೂನ್ಯ. ನಮ್ಮ ಎಣಿಕೆಗಳು ಅನಿಶ್ಚಿತವಾಗಿಯೇ ಉಳಿದಾವು. ಒಬ್ಬ ವ್ಯಕ್ತಿ ಎಷ್ಟು ವರುಷ ಬದುಕಬಹುದೆಂಬ ಬಗೆಗೆ ನಾವು ಕೇವಲ ಊಹೆಮಾಡಬಹುದು; ಅಷ್ಟೆ. ಆರೋಗ್ಯಕರವಾಗಿರುವ ಮಕ್ಕಳೂ ಸಾವಿಗೆ ತುತ್ತಾಗುವುದನ್ನು ಕಾಣುತ್ತೇವೆ. ತನ್ನ ಬಾಳನ್ನು ಭೋಗವಿಲಾಸಗಳಿಗೆ ಈಡುಮಾಡಿದ ವ್ಯಕ್ತಿ ದೀರ್ಘಕಾಲ ಬದುಕಲಾರನೆಂದು ಹೇಳಲು ಸಾಧ್ಯವಿಲ್ಲ. ಯಾವ ವ್ಯಕ್ತಿ ಸರಳ, ಬ್ರಹ್ಮಚರ್ಯದ ಜೀವನವನ್ನು ನಡೆಸುವನೋ ಅವನು ದೀರ್ಘಾಯುವಾದಾನೆಂದು ಖಚಿತವಾಗಿ ಹೇಳಬಹುದು. ಆದರೆ ದೀರ್ಘಕಾಲ ಬದುಕಬೇಕೆಂಬ ಉದ್ದೇಶದಿಂದಲೇ ಇಂದ್ರಿಯನಿಗ್ರಹವನ್ನು ಮಾಡಲು ಹೊರಟರೆ ಬೆಟ್ಟದಂಥ ಶ್ರಮ ಮಾಡಿ ಮೂಷಕಪ್ರಸವವಾದಂತೆ ಆಗುತ್ತದೆ. ಆತ್ಮಸಾಕ್ಷಾತ್ಕಾರಹೊಂದಬೇಕೆಂಬ ದೃಷ್ಟಿಯಿಂದ ರಾಗದ್ವೇಷಗಳನ್ನು ದಮನಮಾಡಬೇಕು. ಈ ಸಂಸ್ಕಾರ ಹೊಂದುವ ಪ್ರಯತ್ನದಲ್ಲಿ ಬದುಕು ದೀರ್ಘವಾಗುವುದಕ್ಕಿಂತ ಹ್ರಸ್ವವಾಗುವುದು ಕಂಡುಬಂದರೆ ಅದಕ್ಕಾಗಿ ನಾವು ಚಿಂತಿಸಬೇಕಾದುದಿಲ್ಲ. ಆರೋಗ್ಯವೂ ಮತ್ತು ದೀರ್ಘಾಯುಷ್ಯವೂ ಇಂದ್ರಿಯನಿಗ್ರಹದ ಅತ್ಯಂತ ಗಣನೀಯವಲ್ಲದ ಫಲ.

## ಪ್ರಭುದಾಸನಿಗೆ*

ಮೇ ೨೦, ೧೯೩೨

(ಪ್ರಭುದಾಸ್ ಬಾಪೂಗೆ ಪತ್ರ ಬರೆದು ಗೀತಾ ೧೮ನೇ ಅಧ್ಯಾಯದ ೫೭ನೇ ಶ್ಲೋಕದಲ್ಲಿರುವ 'ಮತ್ಪರಃ' ಎಂಬ ಪದದ ಅರ್ಥ ಕೇಳಿದ್ದನು. ಇದಲ್ಲದೆ ತನ್ನ ಇತರ ಕಷ್ಟಗಳನ್ನೂ ಬಾಪೂ ಮುಂದೆ ಇಟ್ಟಿದ್ದನು. ದೇವರು ಸತ್ಯವಾದರೆ ಅದಕ್ಕೆ ಮಾನವ ಕೊಡುವ ಚಿಹ್ನೆ ಏನು? ರಾಮನಾಮ ಪಠನೆ ಮಾಡಬಹುದು, ಆದರೆ ರಾಮ ಯಾರು? ಅವನಿಗೆ ಬಾಪೂ ಕೊಟ್ಟ ಉತ್ತರವಿದು :)

'ಮತ್ಪರಃ' (ನನ್ನಲ್ಲಿ ಪರಾಯಣನಾದವನು) ಎಂದರೆ 'ಸತ್ಯ-ಪರಾಯಣಃ' (ಯಾರು ಸತ್ಯಪರಾಯಣನೋ ಅವನು).

'ಚರಣಪದ್ಮೇ ಮಮ ಚಿತ್ತನಿಷ್ಪಂದಿತ ಕರೋ ಹೇ'

ಎಂದು ಕವಿ ಹಾಡಿದಾಗ ಅವನು ಸತ್ಯಕ್ಕೆ ಒಂದು ರೂಪವನ್ನು ಕೊಟ್ಟಿದಾನೆ—ಎಂದರೆ ಸತ್ಯನಾರಾಯಣನ ಪಾದಕಮಲ ಎಂಬುದನ್ನು ತಿಳಿಸಿದಾನೆ. ಸತ್ಯಕ್ಕೆ ಯಾವ ಆಕಾರವೂ ಇಲ್ಲ. ಆದುದರಿಂದ ಸತ್ಯ ಯಾರಿಗೆ ಹೇಗೆ ಭಾಸವಾಗುತ್ತದೆಯೋ ಅದಕ್ಕೆ ತಕ್ಕಂತೆ ಅವರು ಭಾವವನ್ನೋ ಮೂರ್ತಿಯನ್ನೋ ಕೊಡುತ್ತಾರೆ; ಎಷ್ಟು ಮಾನವರಿರುವರೋ ಅಷ್ಟು ಸತ್ಯಕ್ಕೆ ಪ್ರತಿಮೆ ಇದ್ದೀತು. ಅವರೆಲ್ಲ ಬದುಕಿರುವವರೆಗೂ ಅವೆಲ್ಲ ನಿಜವಾಗಿರುತ್ತವೆ. ವಾಸ್ತವವಾಗಿ ನೋಡಿದರೆ, ಬ್ರಹ್ಮ, ವಿಷ್ಣು, ಈಶ್ವರ, ಭಗವಾನ್—ಇವು ಅರ್ಥಶೂನ್ಯ ಇಲ್ಲವೆ ಸಾಕಷ್ಟು ಅರ್ಥನೀಡಲಾರವು. ಆದರೆ 'ಸತ್ಯ' ಭಗವಂತನಿಗೆ ಪೂರ್ಣನಾಮ. ಯಾರಾದರೂ ದೇವರಿಗಾಗಿ ಸಾಯುತ್ತೇನೆಂದು ಹೇಳಿದರೆ ಇತರರಿಗೆ ಅದರ ಅರ್ಥ ಸ್ಪಷ್ಟವಾಗಲಾರದು; ಆತನೂ ಸ್ಪಷ್ಟ ಮಾಡಲಾರ. ಆದರೆ ಇದಕ್ಕೆ ಪ್ರತಿಯಾಗಿ ಯಾರಾದರೂ ಸತ್ಯಕ್ಕಾಗಿ ಮಡಿಯುವೆನೆಂದು ಹೇಳಿದರೆ ಆತನಿಗೂ ಅರ್ಥ ಸ್ಪಷ್ಟವಾಗಿರುತ್ತದೆ, ಅದನ್ನು ಕೇಳಿದವರಿಗೂ ಸ್ಪಷ್ಟವಾಗಿರುತ್ತದೆ.

ರಾಮ ಯಾರೆಂದು ಕೇಳಿದೀಯೆ. ನಾನು ಅದರ ಅರ್ಥವನ್ನು ನಿನಗೆ ವಿವರಿಸಬಹುದು. ಆಗ ನೀನು ಅದನ್ನು ಜಪಿಸುವುದು ನಿರರ್ಥಕವಾಗು

* ಒಬ್ಬ ಸತ್ಯಾಗ್ರಹಿ.

ತ್ತದೆ. ಆದರೆ ರಾಮ ನಿನ್ನ ಆರಾಧ್ಯವಸ್ತುವೆಂದು ಭಾವಿಸಿ ಆವನ ನಾಮ ವನ್ನು ಜಪಿಸಿದರೆ ಅದು ನಿನಗೆ ಕಾಮಧೇನುವಾದೀತು. ನೀನು ಗಿಳಿಯಂತೆ ಪುನಶ್ಚರಣೆ ಮಾಡಿದರೂ ಚಿಂತೆಯಿಲ್ಲ, ಅದು ಉಪಯುಕ್ತವಾಗುತ್ತದೆ; ಏಕೆಂದರೆ ಗಿಳಿಗೆ ಉದ್ದೇಶವಿಲ್ಲ, ನಿನಗೆ ಇದೆ. ಹೀಗೆ ಯಾವ ಚಿಹ್ನೆಯೂ ಬೇಕಿಲ್ಲ. ರಾಮನಿಗಿಂತ ರಾಮನಾಮವೇ ಹಿರಿದೆಂದು ತುಳಿಸೀದಾಸರು ಹೇಳಿದಾರೆ; 'ರಾಮ' ಎಂಬ ಶಬ್ದಕ್ಕೂ ಅದರ ಅರ್ಥಕ್ಕೂ ಯಾವ ಸಂಬಂಧವೂ ಇಲ್ಲವೆಂದು ಸೂಚಿಸಿದಾರೆ. ಭಕ್ತನ ಶ್ರದ್ಧೆಗೆ ಅರ್ಥವೂ ಕೂಡಿಬರುತ್ತದೆ. ಇದು ನಾಮಜಪದ ಸೊಬಗು. ಇಲ್ಲವಾದರೆ, ಅದು ಮೂಢನನ್ನೂ ಕೂಡ ಹೊಸ ಮನುಷ್ಯನನ್ನಾಗಿ ಮಾಡುತ್ತದೆಂಬುದನ್ನು ಸಾಕ್ಷಾತ್ತಾಗಿ ತೋರಿಸಲು ಸಾಧ್ಯವಿಲ್ಲ. ಭಕ್ತ ಕೇವಲ ಒಂದೇ ನಿಯಮ ವನ್ನು ಪಾಲಿಸಬೇಕು. ಅದು, ಅವನು ಮಾಡುವ ಪುನಶ್ಚರಣೆ, ಆಡಂಬರ ಅಥವಾ ಇತರರನ್ನು ಮರುಳುಗೊಳಿಸುವುದಕ್ಕೆ ಆಗಿರದೆ ದೃಢಸಂಕಲ್ಪ ದಿಂದಲೂ ನಂಬಿಕೆಯಿಂದಲೂ ಕೂಡಿರಬೇಕು. ಇಂಥ ರೀತಿಯಲ್ಲಿ ಪುನಶ್ಚರಣೆ ಮಾಡುವ ವ್ಯಕ್ತಿಗೆ ಅದು ಕಾಮಧೇನುವಾಗುವುದೆಂಬುದರಲ್ಲಿ ನನಗೆ ಲೇಶವೂ ಸಂಶಯವಿಲ್ಲ. ಇದಕ್ಕೆ ಆವಶ್ಯಕವೆನಿಸಿದ ತಾಳ್ಮೆ ಇರು ವವರೆಲ್ಲ ಸ್ವಾನುಭವ ಪಡೆಯಬಹುದು. ಕೆಲವು ದಿವಸಗಳವರೆಗೆ, ಕೆಲವು ವೇಳೆ ಹಲವು ವರುಷಗಳವರೆಗೂ ಮನಸ್ಸು ಅಸ್ಥಿರತೆಯಿಂದ ಅತ್ತಿತ್ತ ಹಾರಾಡುತ್ತಿರಬಹುದು, ಜಪ ಮುಂದುವರಿದಂತೆಯೇ ದೇಹ ನಿದ್ರೆಯನ್ನು ಬಯಸಬಹುದು. ಇನ್ನೂ ಹೆಚ್ಚು ನೋವನ್ನುಂಟುಮಾಡುವ ಸೂಚನೆಗಳು ಕಂಡುಬರಬಹುದು. ಸಾಧಕ ಇಷ್ಟೆಲ್ಲವನ್ನೂ ಸಹಿಸಿಕೊಂಡು ಜಪವನ್ನು ಮುಂದುವರಿಸಿದರೆ ಅದು ಫಲಗೊಡೀತು. ನೂಲುವುದು ಒಂದು ಜಡ ಸಾಧನ. ಅದೂ ಸಹನೆಯನ್ನು ಸಾಕಷ್ಟು ಉಗ್ರವಾಗಿ ಪರೀಕ್ಷಿಸಿಯೇ ಸಿದ್ಧಿಸುವುದು. ಆದುದರಿಂದ ನೂಲುವುದಕ್ಕಿಂತ ಹೆಚ್ಚು ಕಷ್ಟಕರವಾದ ವಿಷಯಗಳು ನಮ್ಮಿಂದ ಹೆಚ್ಚು ಪ್ರಯತ್ನವನ್ನೇ ಅಪೇಕ್ಷಿಸುತ್ತವೆ. ಪರಮಾರ್ಥವನ್ನು ಸಾಧಿಸಬಯಸುವವರು ಬಹುದೀರ್ಘಕಾಲದವರೆಗೆ ಆವಶ್ಯಕವೆನಿಸಿದ ಸಂಸ್ಕಾರವನ್ನು ಹೊಂದಲೇಬೇಕು; ನಿರಾಶರಾಗಬಾರದು. ಇಲ್ಲಿಯವರೆಗೆ ನಾನು ನಿನ್ನ ಪ್ರಶ್ನೆಗಳಿಗೆಲ್ಲ ಉತ್ತರವನ್ನು ಕೊಟ್ಟಿದೇನೆಂದು

ಭಾವಿಸುತ್ತೇನೆ. ನಿನಗೆ ನಂಬಿಕೆಯಿದ್ದರೆ ಸದಾ ನಾಮಜಪ ಮಾಡು ; ಕುಳಿತಿರುವಾಗ, ನಿಂತಿರುವಾಗ, ಮಲಗಿರುವಾಗ, ಊಟಮಾಡುವಾಗ, ಪಾನಮಾಡುವಾಗ — ಹೀಗೆ ಸಕಲ ಕಾಲಗಳಲ್ಲಿಯೂ, ಇದಕ್ಕಾಗಿ ನಿನ್ನ ಆಯುಷ್ಯವೆಲ್ಲ ಕಳೆದರೂ ನೀನು ನಿರಾಶೆಪಡಬೇಕಾದುದಿಲ್ಲ. ಪ್ರಯತ್ನ ಮಾಡುತ್ತಾ ಹೋದರೆ, ದಿನಗಳೆದಂತೆ ಹೆಚ್ಚು ಹೆಚ್ಚು ಮಾನಸಿಕ ಶಾಂತಿ ಯನ್ನು ಹೊಂದುವೆ.

## ಡಾ. ಪಿ. ಸಿ. ರೇ* ಅವರಿಗೆ

ಮೇ ೨೨, ೧೯೩೨

ನೀವು ಮಾಡುತ್ತಿರುವ ಕೆಲಸ ಕಷ್ಟವೆ. ಆದರೆ ನಮ್ಮ ಜನಕ್ಕೆ ಸಹಾಯ ನೀಡುವ ಮಾರ್ಗ ಅದೊಂದೇ ಆಗಿದೆ. ಚರಕಾಕ್ಕೆ ಪ್ರತಿ ಮತ್ತೊಂದಿಲ್ಲ.

ಯುವಕರನ್ನು ಸೇವಾಕಾರ್ಯದಲ್ಲಿ ಹಿಂದೆಹಾಕಿ, ಅವರು ನಿರಾಶೆಯ ಅಂಚಿನಲ್ಲಿರುವಾಗಲೂ ಅವರಿಗೆ ಸ್ಫೂರ್ತಿಕೊಟ್ಟು, ಭರವಸೆಯನ್ನಿತ್ತು, ಅತ್ಯಂತ ಕಳವಳದ ಸಮಯದಲ್ಲಿ ಹರ್ಷವನ್ನು ನೀಡುತ್ತಿರುವವರಿಗೆ ನೀವು ವಯಸ್ಸಾಯಿತೆನ್ನುವುದರಲ್ಲಿ ಅರ್ಥವಿಲ್ಲ.

## ಹನುಮಾನ್ ಪ್ರಸಾದ್ ಪೋದ್ದಾರರಿಗೆ†

ಮೇ ೨೩, ೧೯೩೨

(ಹನುಮಾನ್ ಪ್ರಸಾದ್ ಪೋದ್ದಾರರು ಗಾಂಧೀಜೀಗೆ ಒಂದು ಪತ್ರ ಬರೆದು, ಅವರ ಜೀವನದಲ್ಲಿ ಯಾವುದಾದರೂ ವಿಶೇಷ ಘಟನೆಯಿಂದ ದೇವರಲ್ಲಿ ನಂಬಿಕೆ ಹೆಚ್ಚಿದುದುಂಟೆ ? — ಎಂದು ಪ್ರಶ್ನೆಯನ್ನು ಕೇಳಿದ್ದರು. ಅದಕ್ಕೆ ಬಾಪೂ ಹೀಗೆ ಉತ್ತರಿಸಿದರು :)

---

* ಇವರು ರಸಾಯನಶಾಸ್ತ್ರಪ್ರವೀಣರಾಗಿದ್ದರು. 'ಬೆಂಗಾಲ್ ಕೆಮಿಕಲ್ಸ್' ಎಂಬ ಸಂಸ್ಥೆಯ ಸ್ಥಾಪಕರು. ಆಜೀವ ಬ್ರಹ್ಮಚಾರಿಗಳು. ಖಾದೀ ಪ್ರಚಾರಕ್ಕಾಗಿ ಅನವರತ ದುಡಿದರು.

† ಇವರು ಗೋರಖಪುರದ 'ಕಲ್ಯಾಣ' ಪತ್ರಿಕೆಯ ಸಂಪಾದಕರಾಗಿದ್ದರು.

ಅಂಥ ಯಾವ ಘಟನೆಯೂ ನನಗೆ ನೆನಪಿಲ್ಲ. ಮೊದಲು ಮೊದಲು ನನಗೆ ನಂಬಿಕೆ ಇರಲಿಲ್ಲ. ಧ್ಯಾನದಿಂದಲೂ ಧರ್ಮಗಳ ಅಧ್ಯಯನ ದಿಂದಲೂ ಅದನ್ನು ನಾನು ಗಳಿಸಿಕೊಂಡೆ. ಅದು ದಿನದಿನಕ್ಕೂ ಬಲ ಗೊಳ್ಳುತ್ತಿದೆ; ದೇವರು ನನ್ನ ಹೃದಯಸ್ಥನಾಗಿರುವ ಅಂಶ ಹೆಚ್ಚು ಅನುಭವಕ್ಕೆ ಬರುತ್ತಿದೆ. ಆದರೆ ಈ ಪ್ರಶ್ನೆಯನ್ನೇಕೆ ಕೇಳಿದಿರಿ? ನನ್ನ ಈ ಉತ್ತರವನ್ನು 'ಕಲ್ಯಾಣ'ದ ಬರುವ ಸಂಚಿಕೆಗಳಲ್ಲಿ ಪ್ರಕಟಿಸುವ ಯೋಜನೆಯನ್ನು ನೀವು ಇಟ್ಟುಕೊಂಡಿದ್ದರೆ, ಅದು ಏನೂ ಪ್ರಯೋಜನಕ್ಕೆ ಬರಲಾರದು. ನೀವು ಈ ಪ್ರಶ್ನೆಯನ್ನು ನಿಮಗೆ ಮಾರ್ಗದರ್ಶನ ಮಾಡುವ ದೃಷ್ಟಿಯಿಂದ ಕೇಳಿದ್ದರೆ, ಇಂಥ ವಿಷಯಗಳಲ್ಲಿ ಯಾರೊಬ್ಬನ ಅನುಭ ವವೂ ಮತ್ತೊಬ್ಬನಿಗೆ ಅನುಕೂಲವಾಗಲಾರದೆಂದು ಹೇಳಬಯಸುತ್ತೇನೆ. ಸತತ ಪ್ರಯತ್ನದಿಂದೊಡಗೂಡಿದ ಶ್ರದ್ಧೆಯಿಂದಲೇ ನಂಬಿಕೆಯು ಬಲ ಗೊಳ್ಳಲು ಸಾಧ್ಯ.

## ಒಬ್ಬ ಬಾಲಿಕೆಗೆ

ಮೇ ೨೪, ೧೯೩೨

(ಬಾಪೂ ಅಂತರ-ಜಾತೀಯ ವಿವಾಹಗಳಿಗೆ ಉತ್ತೇಜನ ಕೊಡುವುದರಿಂದ ಭಿನ್ನ ಭಿನ್ನ ಮತಧರ್ಮಗಳವರ ವಿವಾಹದಲ್ಲೂ ನಂಬಿಕೆಯನ್ನು ಇಟ್ಟಿರುವರೆ? — ಎಂದು ಬಾಲಿಕೆಯೊಬ್ಬಳು ಪ್ರಶ್ನೆ ಕೇಳಿದಳು. ಅದಕ್ಕೆ ಅವರು ಹೀಗೆ ಉತ್ತರ ಇತ್ತರು :)

ಮಕ್ಕಳು ಪ್ರಾಪ್ತವಯಸ್ಕರಾದ ತರುವಾಯವೇ ವಿವಾಹ ಮಾಡಿ ಕೊಳ್ಳಬೇಕು. ವಿವಾಹವಾಗತಕ್ಕವರು ಇದಕ್ಕೆ ಏರ್ಪಾಡು ಮಾಡಿಕೊಂಡು ತಮ್ಮ ತಂದೆತಾಯಿಗಳ ಒಪ್ಪಿಗೆಯನ್ನು ಪಡೆದುಕೊಳ್ಳಬೇಕು. ಇದಕ್ಕೆ ಯಾವ ಅಸಹಜ ನಿರ್ಬಂಧವೂ ಇರಬಾರದು. ಆದರೆ ಭಿನ್ನಭಿನ್ನ ಮತ ಧರ್ಮಗಳವರ ನಡುವೆ ಆಗುವ ವಿವಾಹ ಒಂದು ಅಪಾಯಕರ ಪ್ರಯೋಗ ಎಂದು ನನ್ನ ನಂಬಿಕೆ. ಅವರು ತಮ್ಮ ತಮ್ಮ ಮತಗಳನ್ನೇ ನಂಬಿ ಅದನ್ನೇ ಆಚರಿಸುವರಾದರೆ ತೊಂದರೆಗಳು ಸಂಭವಿಸಬಹುದು. ಹೀಗೆ, ಭಾಟಿಯಾ ಬಾಲಿಕೆ ತುಂಬ ಅಪಾಯವನ್ನು ಎದುರಿಸಿದ್ದಾಳೆ; ಆದರೆ ಆ

ವಿವಾಹ ಅಧರ್ಮವೆಂದು ನನ್ನ ಅಭಿಪ್ರಾಯವಲ್ಲ. ಆಕೆಯೂ ಆಕೆಯ ಮುಸ್ಲಿಂ ಗಂಡನೂ ಪರಸ್ಪರ ಶುದ್ಧಪ್ರೇಮದಿಂದ ಕೂಡಿರಬಹುದು, ಜೊತೆಗೆ ಅವರವರು ತಮ್ಮ ತಮ್ಮ ಮತಾಚಾರವನ್ನೇ ಅನುಸರಿಸಲು ಸಾಧ್ಯವಿರಬಹುದು. ಅಲ್ಲದೆ, ಇಂಥ ವಿವಾಹಗಳಲ್ಲಿ ಎರಡು ಕಡೆಯವರೂ ಆಹಾರದ ವಿಷಯದಲ್ಲಿ ಏಕಾಭಿಪ್ರಾಯವನ್ನು ಹೊಂದಿದ್ದರೆ ನಾನು ಅದನ್ನು ವಿರೋಧಿಸುವುದಿಲ್ಲ. ಆದರೆ ನಾನು ಅಂತರ-ಜಾತೀಯ ವಿವಾಹಕ್ಕೆ ಒಪ್ಪಿಗೆ ಕೊಟ್ಟಂತೆ ಕೊಡಲಾರೆ. ನಾನು ಅಂಥದರ ವಿರುದ್ಧ ಚಳುವಳಿ ನಡೆಸೆ. ಎಲ್ಲರಿಗೂ ಒಂದೇ ನಿಯಮ ಅನ್ವಯಿಸಲಾರದು.

## ದರ್ಬಾರಿ ಸಾಧುವಿಗೆ

ಮೇ ೨೫, ೧೯೩೨

(ದರ್ಬಾರಿ ಸಾಧು ಕಸ್ತಿ ಮತ್ತು ಸದ್ರ [ಪಾರಸೀಗಳು ಉಪಯೋಗಿಸುವ ಪವಿತ್ರ ನಡುಕಟ್ಟು ಮತ್ತು ಅಂಗಿ] ಇವುಗಳನ್ನು ತೆಗೆದುಹಾಕಿದುದರಿಂದ ಅವನ ಬಂಧುಗಳಿಗೆ ದುಃಖವಾಯಿತು. ಅವರಿಗೆ ಹೀಗೆ ಬರೆದರು ಬಾಪೂ :)

ಅವನು ಈ ಎರಡನ್ನೂ ತೆಗೆದುಹಾಕಲು ಕಾರಣವಿಲ್ಲ. ಅವನು ಮನೆಗೆ ಹಿಂತಿರುಗಿದಮೇಲೆ ಇವುಗಳನ್ನು ಪುನಃ ಧರಿಸುವನೆಂದು ನಾನು ನಂಬಿದೇನೆ. ಇವುಗಳನ್ನು ಧರಿಸುವುದು ಮೂಢನಂಬಿಕೆಯೂ ಅಲ್ಲ, ಪಾಪಕರವೂ ಅಲ್ಲ. ಇವುಗಳನ್ನು ಧರಿಸುವುದರಿಂದ ಯಾರಿಗೂ ಏನೂ ಅಪಾಯವಿಲ್ಲ; ಇದಕ್ಕೆ ಪ್ರತಿಯಾಗಿ ವಿಸರ್ಜಿಸಿದಾಗಲೇ ಪಾರಸೀಗಳಿಗೆ ಏನೋ ಅಸಮಾಧಾನವನ್ನುಂಟುಮಾಡುತ್ತದೆ. ಸಾರ್ವಜನಿಕ ಸೇವಕ ಇಂಥ ವಿನಾಕಾರಣ ಅಸಮಾಧಾನವನ್ನು ಎಂದಿಗೂ ಉಂಟುಮಾಡಬಾರದು. ಇದು ಅಹಿಂಸೆಯನ್ನು ಉಲ್ಲಂಘಿಸಿದಂತೆ. ಇಂಥ ಪ್ರಕರಣಗಳಿಗೆ ಯಾರೂ ವಿಶೇಷ ಮಹತ್ವ ಕೊಡದಿದ್ದರೆ ಉತ್ತಮ. ದಹ್ಯಾಭಾಯಿ ದರ್ಬಾರಿಗೆ ಪಾರಸೀ ಧಾರ್ಮಿಕ ಗ್ರಂಥಗಳನ್ನು ತಂದುಕೊಡಬೇಕೆಂದು ತಿಳಿಸಿದೇನೆ. ನಾನು ವೆಂಡಿಡಾದನ್ನು ಅದರ ಭಾಷಾಂತರದಲ್ಲಿ ಎಷ್ಟೋ ಕಾಲದ ಹಿಂದೆ ಓದಿದೆ. ಅದರಲ್ಲಿ ನೀತಿಯ ವಿಷಯಗಳು ಬಹಳವಾಗಿವೆ. ಝೋರೋಆಸ್ಟರ್ ಧರ್ಮ ಅತ್ಯಂತ ಪ್ರಾಚೀನವಾದರೂ ಅದರ ಧರ್ಮಗ್ರಂಥಗಳ

ಅನೇಕ ಭಾಗಗಳು ಇನ್ನೂ ಶಿಲವಾಗಿಲ್ಲ. ಬಹುಶಃ ಇವುಗಳಲ್ಲಿ ಉಪನಿಷತ್ತುಗಳಲ್ಲಿರುವಂತೆ ಅಂಶಗಳಿಲ್ಲ. ದರ್ಬಾರಿಯು ಇವುಗಳನ್ನು ಓದಿ ಚಿಂತನೆ ಮಾಡಬೇಕು. ಝೆಂಡ್† ಮತ್ತು ವೈದಿಕ ಸಂಸ್ಕೃತಗಳು ಬಹಳ ಮಟ್ಟಿಗೆ ಹೋಲುತ್ತವೆ. ಆದುದರಿಂದ ಪಾರಸೀ ಪವಿತ್ರ ಗ್ರಂಥಗಳಲ್ಲಿ ಯಾವ ವಿಷಯಕ್ಕಾದರೂ ಕೊರತೆಯಿದ್ದರೆ ಅದನ್ನು ವೇದಗಳಿಂದಲೂ ಉಪನಿಷತ್ತುಗಳಿಂದಲೂ ಕೂಡಿಸಿಕೊಳ್ಳುವುದು ಝೊರೋ ಆಸ್ಟರ್ ಧರ್ಮಕ್ಕೆ ಅಪಮಾನವೇನಲ್ಲ. ನಾವು ನಮ್ಮ ಧರ್ಮವನ್ನು ಬಿಡದೆ ಇತರ ಧರ್ಮಗಳಿಂದ ಅಂಗೀಕಾರಾರ್ಹವಾದ ಅಂಶಗಳನ್ನು ಸ್ವೀಕರಿಸುವುದು ಯುಕ್ತ. ಯುಕ್ತವಷ್ಟೇ ಅಲ್ಲ, ಅದು ನಮ್ಮ ಕರ್ತವ್ಯವೂ ಹೌದು. ಇತರ ಧರ್ಮಗಳಿಂದ ನಾವು ಸ್ವೀಕರಿಸುವಂಥದೇನೂ ಇಲ್ಲವೆಂದು ಭಾವಿಸುವುದು ಧರ್ಮಾಂಧತೆ ಎಂದೆನಿಸುತ್ತದೆ. ದೇವರ ದಯೆ; ನಾವೆಲ್ಲ ಅದರಿಂದ ದೂರವಾಗಿದೇವೆ.

## ಭುಷ್ಕುಟೆಯವರಿಗೆ

ಮೇ ೨೫, ೧೯೩೨

(ಸತ್ಯವೇ ದೇವರೆಂದೂ ಸೃಷ್ಟಿಕರ್ತ ಇಲ್ಲವೆಂದೂ ನಂಬಿರುವಾಗ ತಮ್ಮ ಅಂತರಂಗವಾಣಿಯು ಕೋರಿಕೆಯಂತೆ ಹೇಗೆ ನಡೆದರೆಂದು ಭುಷ್ಕುಟೇ ಗಾಂಧೀಜೀ ಅವರನ್ನು ಪ್ರಶ್ನೆಮಾಡಿದ್ದರು. ಬಾಪೂ ಉತ್ತರವಿತ್ತರು :)

ಈ ಪ್ರಶ್ನೆ ನನ್ನ ಅಭಿಪ್ರಾಯದ ಬಗೆಗೆ ಅಜ್ಞಾನವನ್ನು ತೋರಿಸುತ್ತದೆ. ಸತ್ಯವೇ ದೇವರೆನ್ನುತ್ತೇನೆ ನಾನು. ಆದುದರಿಂದ ಸತ್ಯವೇ ಸೃಷ್ಟಿಕರ್ತ. ಆದರೆ ಇಲ್ಲಿ 'ಸೃಷ್ಟಿಕರ್ತ' ಎಂಬ ಪದಕ್ಕೆ ಸಾಮಾನ್ಯ ಅರ್ಥವಲ್ಲ. ಆದುದರಿಂದ ಸತ್ಯವು ಸೃಷ್ಟಿಕರ್ತನೂ ಅಲ್ಲ ಮತ್ತು ಆಗಿದ್ದಾನೆ. ಇದು ಕೇವಲ ತರ್ಕವನ್ನು ಛೇದಿಸುವುದಕ್ಕೆ. ಇಂತಹ ವಿಷಯಗಳಲ್ಲಿ ಅವರವರಿಗೆ ಯುಕ್ತವೆನಿಸಿದಂತೆ ನಂಬಲು ಸ್ವಾತಂತ್ರ್ಯವಿದೆ; ಏಕೆಂದರೆ, ಯಾರಿಗೂ ದೇವರ ಪೂರ್ಣ ಜ್ಞಾನವಿಲ್ಲ; ಒಂದುವೇಳೆ ಒಬ್ಬಾತನಿಗೆ ಸ್ವಲ್ಪ

† ಝೆಂಡ್-ಆವೆಸ್ತಾ—ಪಾರಸೀ ಧರ್ಮಗ್ರಂಥ.

ಅರಿವಿದ್ದರೂ ಅವನು ಅದನ್ನು ಇತರರಿಗೆ ತಿಳಿಸಲಾರ. ಯಾವುದೇ ನಿರ್ಣಯ ಮಾಡಲು ನಾನು ಕೇವಲ ಬುದ್ಧಿಯನ್ನೇ ಅವಲಂಬಿಸದೆ, ಅಂತರಂಗದ ವಾಣಿ ಕೇಳಿಬರುವವರೆಗೂ ತಡ ಮಾಡುತ್ತೇನೆಂಬುದು ನಿಜ. ಅದೊಂದು ರಹಸ್ಯ ಶಕ್ತಿಯೋ ಏನೋ ನಾನು ಕಾಣೆ. ಅದರ ಬಗೆಗೆ ವಿಚಾರ ಮಾಡುವ ಆವಶ್ಯಕತೆಯೇ ನನಗೆ ಕಂಡುಬಂದಿಲ್ಲ. ಅದು ಬುದ್ಧಿಗೆ ಮೀರಿದುದೆಂದು ನಾನು ನಂಬಿದೇನೆ, ತಿಳಿದಿದೇನೆ; ಇಷ್ಟು ನನಗೆ ಸಾಕು. ನನಗೇ ಅರಿವಿಲ್ಲದಿರುವುದರಿಂದ ನಾನು ಇನ್ನು ಹೆಚ್ಚಿನ ವಿವರಣೆ ಏನನ್ನೂ ನೀಡಲಾರೆ.

## ಕೆ. ನಟರಾಜನ್* ಅವರಿಗೆ

ಮೇ ೨೫, ೧೯೩೨

(ಶ್ರೀ ಕೆ. ನಟರಾಜನ್ ಅವರಿಂದ ಪತ್ರ ಬಂದಿತು. ಅದು ಹೀಗಿದೆ: 'ಮಾಯಾಜಾಲದ ವಿಷಯವಾಗಿ ನಾನು ಬರೆದಿರುವ ವಾಕ್ಯವ್ಯಂದ ಇನ್ನೂ ತೀಕ್ಷ್ಣವಾಗಿರಬಹುದಾಗಿತ್ತೆಂದು ನೀವು ಅಭಿಪ್ರಾಯ ಪಡುತ್ತೀರಿ. ಇದು ವಿಚಿತ್ರ! ನನಗಂತೂ ತೀಕ್ಷ್ಣವಾಗಿ ಬರೆಯುವ, ಅದರಲ್ಲೂ ವ್ಯಕ್ತಿಗಳನ್ನು ಟೀಕೆ ಮಾಡುವಾಗಲಂತೂ, ತೀಕ್ಷ್ಣವಾಗಿರಬೇಕಾಗಿರುವ ಹವ್ಯಾಸವೇ ಹೋಗಿಬಿಟ್ಟಿದೆ. ತೀಕ್ಷ್ಣವಾಗಿ ಬರೆಯೋಣವೆಂದು ನನ್ನ ಲೇಖನಿಯನ್ನು ತೆಗೆದುಕೊಂಡ ಕೂಡಲೇ ಎದುರಾಳಿ ನನ್ನ ಕಣ್ಣೆದುರಿಗೆ ನಿಂತು, ಹೀಗೆ ಹೇಳುವಂತೆ ಭಾಸವಾಗುತ್ತದೆ: 'ನನ್ನ ವಿಚಾರವಾಗಿ ನಾನೇನು ಹೇಳುವೆನೆಂಬುದು ನಿಮಗೆ ಗೊತ್ತಿಲ್ಲ. ನನಗೂ ಆದರ್ಶಗಳಿವೆ; ಅವು ನನ್ನ ನಡತೆಯಿಂದ ಎಷ್ಟೋ ದೃಷ್ಟಿಗೆ ಗೋಚರವಿಲ್ಲದೆ ಇರಬಹುದು. ನಿಮ್ಮನ್ನು ನೀವು ಹೇಗೆ ವಿಮರ್ಶಿಸಿಕೊಳ್ಳುವಿರೋ ನನ್ನನ್ನೂ ಹಾಗೆಯೇ ವಿಮರ್ಶಿಸಿ. ನಾನು ವಿಮರ್ಶೆ ಮಾಡುವಾಗ ಎಲ್ಲ ವಿಶೇಷಣಗಳನ್ನೂ ವಿಷದಂತೆ ಕಾಣುತ್ತೇನೆ, ನಾನು ಹೇಳುವುದರಲ್ಲೆಲ್ಲ ಪೂರ್ಣವಾಗಿ ವಾಸ್ತವಿಕತೆಯಿಂದ ಇರಲು ಪ್ರಯತ್ನಿಸುತ್ತೇನೆ. ಇದು ನನಗೆ ರೂಢಿಯಾಗಿಹೋಗಿದೆ. ಇದು ಎಲ್ಲ ಸಂದರ್ಭಗಳಲ್ಲಿಯೂ ಕ್ಷೇಮಕರ ಎಂಬುದರಲ್ಲಿ ನನಗೆ ಸಂಶಯವಿಲ್ಲ. ಈ ವಿಶೇಷ ವಿಷಯದಲ್ಲಂತೂ ಆ ವ್ಯಕ್ತಿ ತನ್ನ ಹಿಡಿಯಲ್ಲೇ ಜೀವವನ್ನು ಹಿಡಿದುಕೊಂಡಿರುವನೆಂಬ ಅಂಶ ನನ್ನ ಮನಸ್ಸಿನ ಮೇಲೆ ಪ್ರಬಲ ಪ್ರಭಾವವನ್ನು ಬೀರಿದೆ. ಕೌತುಕದ ಜನಸಮೂಹಕ್ಕಂತೂ, ಈ ರೀತಿ

* ಇವರು 'ಇಂಡಿಯನ್ ಸೋಷಿಯಲ್ ರಿಫಾರ್ಮರ್' ಎಂಬ ಪತ್ರಿಕೆಯ ಸಂಪಾದಕರು.

ಭಾಸವಾದೀತು ; ದಿನನಿತ್ಯದ ಸಾಮಾನ್ಯ ಅಂಶಗಳ ಕಿರುಕುಳವನ್ನು ಮೀರಿ ಒಬ್ಬ ವ್ಯಕ್ತಿಯಾದರೂ ತಮಗಿಂತ ಮೇಲುಮಟ್ಟಕ್ಕೆ ಹೋಗಲು ಸಾಧ್ಯವಾಗುವ ದೃಶ್ಯವನ್ನು ನೋಡಿದೆವೆಂಬ ಮನಸ್ತೃಪ್ತಿ.' ಬಾಪೂ ಹೀಗೆ ಉತ್ತರ ಬರೆದರು :)

ಇಂದ್ರಜಾಲದ ಶಕ್ತಿದುರುಪಯೋಗದ ಬಗೆಗೆ ನಿಮ್ಮ ಭಾಷೆ ಇನ್ನೂ ತೀಕ್ಷ್ಣವಾಗಿರಬಹುದಾಗಿತ್ತೆಂದು ನಾನು ಹೇಳಿದಾಗ ಆ ಗುಣವಾಚಕವನ್ನು ಇತರ ಸ್ಪಷ್ಟವಾದ ಕೆಡುಕುಗಳ ಬಗೆಗೆ ಉಪಯೋಗಿಸುವ ಅರ್ಥದಲ್ಲಿಯೇ ಉಪಯೋಗಿಸಿದೆ. ಕೆಟ್ಟತನ ಮಾಡಿದವರ ಬಗೆಗೆ ನಾವು ಉದಾರತೆಯಿಂದ ಇದ್ದರೂ ಕೆಟ್ಟತನವನ್ನು ಖಂಡಿಸುವುದರಲ್ಲಿ ನಾವು ಉದಾರತೆಯಿಂದಿರಬಾರದೆಂದು ನನ್ನ ಭಾವನೆ. ಕೆಟ್ಟದೆಂದು ಅರಿವಾದುದನ್ನು ಆ ಅರಿವು ಇರುವವರೆಗೂ–ಸಾಧ್ಯವಾದಷ್ಟು ಸ್ಪಷ್ಟವಾಗಿ ಖಂಡಿಸುವುದಕ್ಕೂ ಪೂರ್ಣ ಸಭ್ಯತೆಗೂ ಅಸಂಗತವಿಲ್ಲ ; ಇದರಿಂದ ನಮ್ಮ ತೀರ್ಮಾನ ದೊಡ್ಡ ತಪ್ಪಾಗಿತ್ತೆಂದು ಮುಂದೆ ಕಂಡುಬಂದರೆ ಅದಕ್ಕಾಗಿ ನಾವು ವ್ಯಸನಪಡಬೇಕಾದ ಕಾರಣವಿರಲಾರದು. ಪರಸತ್ಯದ ನಮ್ಮ ಅನ್ವೇಷಣೆಯಲ್ಲಿ, ಕಾಲಕಾಲಕ್ಕೆ ನಮಗೆ ಲಭಿಸುವ ಸಾಪೇಕ್ಷ ಸತ್ಯದಿಂದಲೇ ನಾವು ತೃಪ್ತರಾಗಬೇಕು. ಆಯಾ ಅಂತಸ್ತಿನಲ್ಲಿ ಆ ಸಾಪೇಕ್ಷ ಸತ್ಯವೇ ಪರಸತ್ಯವಿದ್ದಂತೆ. ಇಂಥ ಆತ್ಮವಿಶ್ವಾಸವಿಲ್ಲವಾದರೆ ಪ್ರಗತಿ ಎನ್ನುವುದೇ ಇರದೆಂದು ಸುಲಭವಾಗಿ ತೋರಿಸಬಹುದು. ನಮ್ಮ ನಿಲುವಿನ ನಿಖರತೆಯ ವಿಷಯದಲ್ಲಿ ಶಂಕೆ ಏನಾದರೂ ಇದ್ದರೆ ನಮ್ಮ ಭಾಷೆ ಶಂಕೆಯಿಂದಲೂ ಸಂದೇಹದಿಂದಲೂ ಕೂಡಿರುವುದು. ಪ್ರಕೃತ ವಿಷಯದಲ್ಲಿ ಪ್ರದರ್ಶನವಿತ್ತವನ ಉದ್ದೇಶ ಎಷ್ಟು ಉದಾತ್ತವಾಗಿದ್ದರೂ ಅಂಥ ಪ್ರದರ್ಶನವನ್ನು ನಡೆಸುವುದಕ್ಕೆ ಯಾವ ಸಮರ್ಥನೆಯೂ ಇರಲಾರದು. ಅಲ್ಲದೆ ಪ್ರೇಕ್ಷಕರು ಅಂಥ ಪ್ರದರ್ಶನದಲ್ಲಿ ನೆರೆದಿದ್ದ ಬಗೆಗೆ ಪರಿಣಾಮಗಳನ್ನು ಕುರಿತು ವಿಚಾರಮಾಡದಿದ್ದರೆಂಬುದೇ ಸಮರ್ಥನೆಯ ಕಾರಣವಾಗಲಾರದು. ಆದರೆ ಈ ವಿಷಯವನ್ನು ನಾನು ಇನ್ನೂ ಹೆಚ್ಚು ವಿಮರ್ಶಿಸಬಾರದು. ನೀವು ನಿಮ್ಮ ಪತ್ರದಲ್ಲಿ ವಿವರಿಸಿರುವ ನಿಲುವನ್ನು ನಾನು ಒಪ್ಪಲಾರೆನೆಂದು ಭಾವಿಸಿದುದರಿಂದ ನನ್ನ ವಾದವನ್ನು ನಿಮ್ಮ ಪರಿಶೀಲನೆಗೆ ಇಡಬೇಕು, ಅಷ್ಟೆ.

## ದೇವದಾಸ್ ಗಾಂಧೀಗೆ*

ಮೇ ೨೭, ೧೯೩೨

(ದೇವದಾಸ್ ಗಾಂಧೀ ಉರ್ದೂ ವ್ಯಾಸಂಗ ಮಾಡುತ್ತಿದ್ದ ವಿಚಾರ ಕುರಿತು ಹೀಗೆ ಬರೆದರು :)

ಪ್ರತಿಯೊಂದು ಓದುವ ಪುಸ್ತಕದಲ್ಲಿಯೂ ಚರಿತ್ರೆ ಬಗೆಗೆ ಪಾಠಗಳಿವೆ. ಕೆಲವು, ಪೈಗಂಬರ್ ಮೊಹಮ್ಮದ್ ಮತ್ತು ಅವರ ಕಾಲವನ್ನು ಕುರಿತುದು ; ಕೆಲವು, ಭಾರತದ ಮುಸ್ಲಿಂ ಆಡಳಿತಗಾರರನ್ನು ಕುರಿತುದು. ಇವು ಯಾವ ಉದ್ದೇಶದಿಂದ ಬರೆಯಲ್ಪಟ್ಟಿವೆ ಎಂಬುದು ಎಲ್ಲರಿಗೂ ಗೊತ್ತಾಗಬೇಕು. ಉರ್ದೂ ವ್ಯಾಸಂಗದ ಪ್ರಾಧಾನ್ಯತೆ ನನಗೆ ಹೆಚ್ಚು ಅರಿವಾಗುತ್ತಿದೆ. ಒಂದು ಭಾಷೆಯನ್ನು ಅದರ ಲಿಪಿಯಲ್ಲಿಯೇ ಕಲಿತರೆ ಅದರಲ್ಲೇ ಪತ್ರಗಳನ್ನೂ ಬರೆಯಬಹುದು ; ಅಲ್ಲದೆ ಭಾಷೆಯ ಮೇಲೆ ಹೆಚ್ಚು ಪ್ರಭುತ್ವ ಪಡೆಯಬಹುದು, ಇತರರಿಂದ ಬರುವ ಪತ್ರಗಳನ್ನು ಸುಲಭವಾಗಿ ಓದಿ ತಿಳಿದುಕೊಳ್ಳಲು ಸಾಧ್ಯವಾಗುತ್ತದೆ. ಮುಸ್ಲಿಂ ಕಾರ್ಯಕರ್ತರಿಗೆ ಉರ್ದೂವಿನಲ್ಲಿ ಬರೆಯಬೇಕೆಂಬುದೇ ನನ್ನ ಆಶಯ. ಅವರಿಗೂ ನಾವು ಇಂಗ್ಲೀಷಿನಲ್ಲೇ ಬರೆಯುತ್ತಿದ್ದರೆ ಹಿಂದೀ ಎಂದಿಗೂ ರಾಷ್ಟ್ರಭಾಷೆಯಾಗಿ ತನ್ನ ನ್ಯಾಯಬದ್ಧ ಸ್ಥಾನವನ್ನು ಹೊಂದಲಾರದು. ಆದುದರಿಂದಲೇ ಉರ್ದೂವಿನಲ್ಲಿ ಬರೆಯುವ ಶಕ್ತಿಯನ್ನು ಹೊಂದುವುದು ನಮ್ಮ ಮಾನಸಿಕ ಶಿಕ್ಷಣದ ಒಂದು ಪ್ರಧಾನ ಅಂಶವೆಂದು ನಾನು ಭಾವಿಸುತ್ತೇನೆ.

ಇದರ ತರುವಾಯ ರಹಿಯಾ ತ್ಯೆಯಬ್ಜೀಯವರಿಗೆ ತಾವು ಉರ್ದೂವಿನಲ್ಲಿ ಪತ್ರ ಬರೆಯಬೇಕಾಗಿ ಬಂದ ಪ್ರಸಂಗವನ್ನು ಅರುಹಿ, 'ಇವೆಲ್ಲ

---

* ಗಾಂಧೀಜೀಯವರ ಕಿರಿಯ ಮಗ. ದಕ್ಷಿಣ ಭಾರತದಲ್ಲಿ ಹಿಂದೀ ಭಾಷೆಯ ಪ್ರಚಾರಕ್ಕೆ ಕೆಲಸಮಾಡಿದರು. 'ಹಿಂದೂಸ್ಥಾನ್ ಸ್ಟ್ಯಾಂಡರ್ಡ್' ಎಂಬ ಆಂಗ್ಲ ಪತ್ರಿಕೆಯ ಸಂಪಾದಕರಾಗಿದ್ದರು. ಕೆಲವು ಕಾಲ ಗಾಂಧೀ ಸ್ಮಾರಕ ನಿಧಿಯ ಅಧ್ಯಕ್ಷರಾಗಿದ್ದರು. ಕೆಲವು ವರುಷಗಳ ಹಿಂದೆ ದೈವಾಧೀನರಾದರು.

ಮುಸ್ಲಿಮರೊಡನೆ ಸ್ನೇಹವನ್ನು ಬೆಳೆಸಲು ಅಹಿಂಸಕವೂ, ಸೂಕ್ಷ್ಮವೂ ಆದ ಮಾರ್ಗಗಳು' ಎಂದು ತಿಳಿಸಿದರು.

## ಡಾ. ಎ. ಮೆಹತಾರವರ* ಮಗನಿಗೆ

(ಸೋಮವಾರ ಬಾಪೂಗೆ ಮೌನದಿನ. ಅಂದು ಅವರು ಬರೆದ ಪತ್ರಗಳು ಸಾಮಾನ್ಯವಾಗಿ ಪ್ರಾಮುಖ್ಯತೆಯುಳ್ಳವಾಗಿರಬೇಕು, ಅಥವಾ ವೈಯುಕ್ತಿಕ ಕಾರಣಗಳ ದೆಸೆಯಿಂದ ಅವರೇ ಬರೆಯುವಂಥವಾಗಿರಬೇಕು. ಅವರು ಡಾ. ಪ್ರಾಣಜೀವನದಾಸ್ ಮೆಹತಾರವರೊಂದಿಗೆ ಆತ್ಮೀಯ ಸಂಬಂಧವನ್ನು ಬೆಳೆಸಿದ್ದರು. ಆದುದರಿಂದ ಅವರ ಮಗನ ವಿಷಯವಾಗಿ ಪುತ್ರವಾತ್ಸಲ್ಯಕ್ಕಿಂತಲೂ ಹೆಚ್ಚು ರೀತಿಯಲ್ಲಿ ಕಾಣುತ್ತಿದ್ದರು. ಆತನಿಗೆ ಹೀಗೆ ಬರೆದರು :)

ವೆನಿಸ್ಸಿನಿಂದ ಬರೆದ ಪತ್ರ ತಲಪಿತು. ಜಹಜಿನ ಮೇಲೆ ಕಾಲವನ್ನು ಹೇಗೆ ಕಳೆದೆ, ಪ್ರಯಾಣಕಾಲದಲ್ಲಿ ಏನೇನು ವಸ್ತುಗಳನ್ನು ವೀಕ್ಷಿಸಿದೆ, ಹಣವನ್ನು ಹೇಗೆ ವೆಚ್ಚಮಾಡಿದೆ—ಇವನ್ನೆಲ್ಲ ನೀನು ತಿಳಿಸಿದರೆ, ಇದರಿಂದ ನಿನ್ನ ವರ್ಣನಾಸಾಮರ್ಥ್ಯವನ್ನೂ ಯಾವುದನ್ನು ನೀನು ಸರಳತೆ ಎಂದು ಎನ್ನುವೆಯೋ ಅದನ್ನೂ ಅರಿತುಕೊಳ್ಳಲು ನನಗೆ ಅವಕಾಶವಾಗುತ್ತದೆ. ವ್ಯಾಯಾಮಕ್ಕೋಸ್ಕರ ಸಂಚಾರ ಮಾಡು. ನಿನ್ನ ದೈಹಿಕ ಆರೋಗ್ಯವನ್ನು ಚೆನ್ನಾಗಿ ಇಟ್ಟುಕೊ. ನೀನೇ ಯಾವುದನ್ನು ಮಾಡಿಕೊಳ್ಳಲು ಸಾಧ್ಯವೋ ಅದಕ್ಕೆ ಇತರರನ್ನು ಆಶ್ರಯಿಸಬೇಡ. ನೀನು ಕಾಲುನಡಿಗೆಯಿಂದಲೇ ತಲಪಬಹುದಾದ ಸ್ಥಳಕ್ಕೆ ವಾಹನವನ್ನು ಉಪಯೋಗಿಸಬೇಡ. ನೀನು ವ್ಯಾಯಾಮ ಮಾಡಿ ಚಳಿಯ ಕೊರೆತವನ್ನು ಕಳೆದುಕೊಳ್ಳಬೇಕೇ ಹೊರತು ಬೆಂಕಿಯ ಮುಂದೆ ಕುಳಿತುಕೊಳ್ಳಬೇಡ.

ನಿಮ್ಮ ತಂದೆಗೆ ತಪ್ಪದೆ ಪತ್ರ ಬರೆ. ಆಗಾಗ ಅವರಿಗೆ ವೆಚ್ಚದ ಪಟ್ಟಿಯನ್ನು ಕಳಿಸಿಕೊಡು. ತಂದೆತಾಯಿಗಳಿಗೆ ಮಕ್ಕಳಿಂದ ಎಷ್ಟು

---

* ಡಾ. ಪ್ರಾಣಜೀವನದಾಸ್ ಮೆಹತಾರವರ ಪುತ್ರ. ಡಾ. ಪ್ರಾಣಜೀವನದಾಸ್‌ರವರು ಗಾಂಧೀಜೀ ಇಂಗ್ಲೆಂಡಿಗೆ ಪ್ರಥಮತಃ ಭೇಟಿಯಿತ್ತಾಗ (ವಿದ್ಯಾಭ್ಯಾಸಕ್ಕಾಗಿ) ಅವರನ್ನು ಸ್ವಾಗತಿಸಿದರು. ಇಂಗ್ಲಿಷರ ನಡೆನುಡಿಗಳ ಬಗೆಗೆ ಪರಿಚಯ ಮಾಡಿಕೊಟ್ಟರು.

ಕಾಗದ ಬಂದರೂ ಅವರಿಗೆ ತೃಪ್ತಿಯಿಲ್ಲ ಎಂಬುದನ್ನು ನೆನಪಿನಲ್ಲಿಡು. ಅವರು ಅತ್ಯಂತ ಸಣ್ಣ ಅಂಶಗಳನ್ನೂ ತಿಳಿದುಕೊಳ್ಳಲು ಇಷ್ಟಪಡುತ್ತಾರೆ. ನಿಮ್ಮ ತಂದೆ ನಿನ್ನ ವಿಷಯವಾಗಿ ಇಟ್ಟುಕೊಂಡಿರುವ ಆಸೆಯನ್ನು ಈಡೇರಿಸು.

## ಕಾರ್ಯಕರ್ತನೊಬ್ಬನಿಗೆ

ಮೇ ೨೯, ೧೯೩೨

ಹೃದಯ ಭಾವಮಯ. ಅದನ್ನು ನಾವು ಶುದ್ಧವಾಗಿ ಇಡದಿದ್ದರೆ ತಪ್ಪು ಮಾರ್ಗ ಹಿಡಿದೀತು. ಮನೆಯನ್ನೂ ಅದರಲ್ಲಿರುವ ಎಲ್ಲ ವಸ್ತುಗಳನ್ನೂ ಸ್ವಚ್ಛವಾಗಿ ಇಟ್ಟಹಾಗೆ ಅದು. ಹೃದಯವೇ ಭಗವಂತನ ಜ್ಞಾನವು ಜನಿಸುವ ಮೂಲಸ್ಥಳ. ಆ ಮೂಲಸ್ಥಳ ಕಲುಷಿತವಾದರೆ ಉಳಿದೆಲ್ಲ ಪರಿಹಾರಗಳೂ ನಿರರ್ಥಕ. ಅದರ ಪರಿಶುದ್ಧತೆಯೊಂದಿದ್ದರೆ ಬೇರೆ ಏನೂ ಆವಶ್ಯಕವಿಲ್ಲ.

ಮೇ ೩೦, ೧೯೩೨

(ಬಾಪೂ ಅನೇಕ ಕಾಗದಗಳನ್ನೂ, 'ಸಾವಿನಿಂದ ಕಲಿಯಬೇಕಾದ ಪಾಠಗಳು' ಎಂಬ ವಿಷಯ ಕುರಿತು ಆಶ್ರಮಕ್ಕೆ ವಾರದ ಪತ್ರವನ್ನೂ ಬರೆದರು. ಅವರು ಕೆಲವು ಪತ್ರಗಳನ್ನು ಹೇಳಿ ಬರೆಸಿದರು. 'ಎಸ್' ಬಾಪೂಗೆ ಕಾಲ್ಪನಿಕ ಪ್ರಶ್ನೆಗಳನ್ನು ಹಾಕಿ ಅವುಗಳಿಗೆ ಉತ್ತರ ಪಡೆಯಲಿಚ್ಛಿಸುವುದು ವಾಡಿಕೆಯಾಗಿಹೋಗಿದೆ. ಅವನ ವಿಷಯದಲ್ಲಿ ಬಾಪೂಗೆ ಸಹೃದಯತೆ ಇರುವುದರಿಂದ ದೀರ್ಘವಾಗಿ ಉತ್ತರವನ್ನು ಬರೆಯುತ್ತಾರೆ. ಅವನು ಈಗ ಈ ಪ್ರಶ್ನೆಗಳನ್ನು ಕೇಳಿದ: ಅಪಹೃತ ಸ್ತ್ರೀ ಗರ್ಭಿಣಿಯಾದರೆ ಹೇಗೆ? ಮಾನಭಂಗಹೊಂದಿದ ಸ್ತ್ರೀಯರು ಆತ್ಮಹತ್ಯೆ ಮಾಡಿಕೊಂಡರೆ ಹೇಗೆ? ಬಾಪೂ ಇವುಗಳಿಗೆ ಕೊಡುವ ಉತ್ತರವನ್ನು ಪ್ರಕಟಿಸಲು ತಾನು ಯೋಚಿಸುತ್ತಿರುವುದಾಗಿಯೂ ಬರೆದ. ಬಾಪೂ ಅವನಿಗೆ ಬರೆದ ಉತ್ತರವಿದು :)

ಯಾವ ಸ್ತ್ರೀಯೂ ಒಪ್ಪಿಗೆಯಿಲ್ಲದೆ ಸಂಭೋಗಹೊಂದಲಾರಳೆಂದು ನನ್ನ ಅಭಿಪ್ರಾಯ; ವೈದ್ಯರೂ ಇದನ್ನು ಒಪ್ಪುತ್ತಾರೆ. ಆಕೆ ತನ್ನ ಮಾನವನ್ನು ರಕ್ಷಿಸಿಕೊಳ್ಳುವುದಕ್ಕೋಸ್ಕರ ಪ್ರಾಣವನ್ನು ತ್ಯಜಿಸಲು ಸಿದ್ಧ

ಇರುವುದಿಲ್ಲವಾದ್ದರಿಂದ ಪಾಪಿಯು ವಶವಾಗುತ್ತಾಳೆ. ಆದರೆ ಸಾವಿನ ಭಯದಿಂದ ಪೂರ್ಣವಾಗಿ ಮುಕ್ತರಾದವರು ಮಾನಭಂಗಹೊಂದುವುದಕ್ಕೆ ಪೂರ್ವಭಾವಿಯಾಗಿಯೇ ತಮ್ಮ ಅಸುವನ್ನು ನೀಗಿಕೊಂಡಾರು. ಈ ರೀತಿ ಬರೆಯುವುದು ಸುಲಭ, ಆಚರಿಸುವುದು ಕಷ್ಟ. ಆದುದರಿಂದ ತನ್ನ ಇಷ್ಟವಿಲ್ಲದೆ ಪಾಪಿಯ ವಶವಾದ ಸ್ತ್ರೀ ಮಾನಭಂಗಹೊಂದಿಲ್ಲವೆಂದು ನಾವು ಭಾವಿಸಬಹುದು. ಇಂಥ ಮಾನಭಂಗದ ಪರಿಣಾಮವಾಗಿ ಗರ್ಭಿಣಿಯಾದರೆ ಆಕೆ ಗರ್ಭಪಾತ ಮಾಡಿಕೊಳ್ಳುವುದಿಲ್ಲ. ಇಂಥ ಸ್ತ್ರೀ ದೋಷಮುಕ್ತಳು, ಕರುಣೆಗೆ ಪಾತ್ರಳು. ಹೀಗೆ ಮಾನಭಂಗಹೊಂದಿದ ಸ್ತ್ರೀಯು ಅದನ್ನು ಮುಚ್ಚಿಡಲು ಅಪೇಕ್ಷಿಸಿದರೆ, ಆಕೆ ಗರ್ಭಪಾತ ಮಾಡಿಕೊಳ್ಳುವ ಹಕ್ಕನ್ನು ಹೊಂದಿರುವಳೋ ಹೇಗೋ ಹೇಳಬಲ್ಲವರು ಯಾರು? ಭಯಗ್ರಸ್ತಳಾದ ಸ್ತ್ರೀ ಅಂಥ ಹಕ್ಕನ್ನು ವಾಸ್ತವವಾಗಿ ಹೊಂದಿರದಿದ್ದರೂ ಹೊಂದಿದೇನೆಂದು ತಿಳಿದುಕೊಂಡು ತನ್ನ ಮನಸ್ಸಿಗೆ ಬಂದಂತೆ ವರ್ತಿಸುವಳು. ಮಾನಭಂಗ ವಾದಮೇಲೆ ಆ ಸ್ತ್ರೀ ಆತ್ಮಹತ್ಯೆ ಮಾಡಿಕೊಳ್ಳುವ ಹಕ್ಕನ್ನು ಹೊಂದಿಲ್ಲ; ಅದಕ್ಕೆ ಕಾರಣವೂ ಇಲ್ಲ.

ಈ ಉತ್ತರಗಳನ್ನು ನಾನು ಸೆರೆಮನೆಯಿಂದ ಬರೆಯುತ್ತಿದೇನೆ. ಆದುದರಿಂದ ಇವು ಪ್ರಕಟವಾಗಬಾರದು. ಇಲ್ಲಿಂದ ನಾನು ಎಷ್ಟೋ ಪತ್ರಗಳನ್ನು ಬರೆಯುತ್ತೇನೆ; ಅವು ಆಗಾಗ ಪ್ರಕಟವಾದರೆ ನನಗೇನೂ ಗೌರವವೆನಿಸುವುದಿಲ್ಲ. ಇಂಥ ಪ್ರಕಟನೆಯನ್ನು ಸರಕಾರವೂ ಸಹಿಸ ಬಹುದು, ಆದರೆ ಸತ್ಯಾಗ್ರಹಿ ಈ ಬಗೆಯ ಸ್ವಾತಂತ್ರ್ಯವನ್ನು ತೆಗೆದು ಕೊಳ್ಳಲಾರ. ಅವನು ಸ್ವ-ಇಚ್ಛೆಯಿಂದ ತಾನಾಗಿಯೇ ವಿಧಿಸಿಕೊಳ್ಳುವ ನಿಯಮಗಳಲ್ಲಿ ಒಂದು ಇದು. ಈ ಪ್ರಪಂಚ ನಾನು ಮಾಡಿದಂತೆ ಕೇಳಲು ಅಥವಾ ನನ್ನ ಅಭಿಪ್ರಾಯಗಳಂತೆ ನಡೆಯಲು ಆತುರವಿಲ್ಲದೆ ಇಲ್ಲ. ಒಂದುವೇಳೆ ಇದ್ದರೂ ಅದು ಸದ್ಯಕ್ಕೆ ಶಾಂತಿಯಿಂದ ಇರಬೇಕು. ವಾಸ್ತವ ವಾಗಿ ನಾನೇ ನನ್ನ ಅಭಿಪ್ರಾಯಗಳಿಗೆ ಅಷ್ಟೊಂದು ಬೆಲೆಯನ್ನು ಕೊಟ್ಟಿಲ್ಲ. ಪ್ರತಿಯೊಂದು ವಿಷಯದಲ್ಲಿಯೂ ಇಂದು ನಾನು ಹೊಂದಿರುವ ಅಭಿಪ್ರಾಯಗಳನ್ನು ನಾಳೆ ಬದಲಿಸಬೇಕಾದ ಆವಶ್ಯಕತೆ ಇರಲಾರದೆಂದು ಹೇಳಲಾರೆ. ನಿನ್ನಂಥವರಿಗೆ ನಾನು ವೈಯಕ್ತಿಕವಾಗಿ ಉತ್ತರವನ್ನೂ

ಕಳಿಸುವುದರಲ್ಲಿ ಯಾವ ಆಕ್ಷೇಪವೂ ಇಲ್ಲ. ಏಕೆಂದರೆ ನೀನು ನನ್ನ ಸ್ವಭಾವವನ್ನೂ ನನ್ನ ಮನಸ್ಸಿನ ಅಪೂರ್ಣತೆಗಳನ್ನೂ ಅರಿತುಕೊಂಡು ನನ್ನ ಅಭಿಪ್ರಾಯಗಳಿಗೆ ಎಷ್ಟು ಬೆಲೆ ಕೊಡಬಹುದೆಂಬುದೂ ನಿನಗೆ ತಿಳಿದಿದೆಯೆಂದು ಭಾವಿಸುತ್ತೇನೆ.

ನಿನ್ನ ಕೆಲವು ಪ್ರಶ್ನೆಗಳು ಕೇಳಲೇಬಾರದಂಥವು. ಯಾವ ಅನ್ವೇಷಕನೂ ತಾನು ಯಾರಲ್ಲಿ ನಂಬಿಕೆ ಇಟ್ಟಿರುವನೋ ಅವರಿಂದ ಕಾಲ್ಪನಿಕ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಭಾವಪ್ರಧಾನ ನಿರ್ಣಯಗಳನ್ನು ಹೊಂದಲು ಪ್ರಯತ್ನಿಸಬಾರದು. ಯಾರು ತಮ್ಮ ಮುಂದಿನ ಹೆಜ್ಜೆಗೆ ಸಂಬಂಧಿಸಿದಂತೆ ಪ್ರಶ್ನೆ ಮಾಡುವರೋ ಅದು ಯುಕ್ತವಾದುದು. ಪ್ರಶ್ನೆ ಹಿಂದೆ ನಡೆದ ವಿಷಯವೊಂದಕ್ಕೆ ಸಂಬಂಧಿಸಿದ್ದರೆ ಆ ವಿಷಯ ಪೂರ್ಣವಾಗಿ ವಿವರಿಸಲ್ಪಡಬೇಕು; ಸಾಮಾನ್ಯಕ್ಕೆ ಅನ್ವಯಿಸುವ ಪ್ರಶ್ನೆಯಾಗಬಾರದು; ಏಕೆಂದರೆ, ಅದನ್ನು ಸಾಮಾನ್ಯ ಮಾಡುವುದರಿಂದ ಒಂದಲ್ಲ ಒಂದು ಪ್ರಮುಖ ಅಂಶವನ್ನು ಬಿಡಲೇಬೇಕಾಗುತ್ತದೆ. ಹೀಗೆ ಸಾಮಾನ್ಯ ಪ್ರಶ್ನೆಯೊಂದಕ್ಕೆ ನೀಡಿದ ಉತ್ತರವನ್ನು ವಾಸ್ತವಿಕ ಘಟನೆಗಳಿಗೂ ಅನ್ವಯಿಸುವ ಅಪಾಯವುಂಟು.

## ಭಾವೂಗೆ

ಮೇ ೩೦, ೧೯೩೨

(ವಿನೋಬಾನ ಸಹಕಾರ್ಯಕರ್ತ ಭಾವೂಗೆ ಬಾಪೂ ಹೀಗೆ ಬರೆದರು:)

ಜೀವಂತ ವ್ಯಕ್ತಿಗಳ ಪ್ರತಿಮೆಯನ್ನಿಟ್ಟುಕೊಂಡು ಧ್ಯಾನಿಸುವುದು ಯೋಗ್ಯವಲ್ಲ. ನಮ್ಮ ಧ್ಯಾನದ ವಸ್ತುವಿಗೆ ನಾವು ಗುಣಪೂರ್ಣತೆಯನ್ನು ಕೊಡಬೇಕು. ಆದರೆ ಯಾವ ಜೀವಂತ ವ್ಯಕ್ತಿಯೂ ಪೂರ್ಣನೆನಿಸಲಾರ. ರಾಮಾಯಣದ ನಿದರ್ಶನಗಳು ಸರಿಯಲ್ಲ, ಆದರೆ ನಿನಗೆ ಪ್ರತಿಮೆಯೊಂದಾದರೂ ಏಕೆ ಆವಶ್ಯಕ? ದೇವರು ನಿರ್ಗುಣ, ನಿರಾಕಾರ. ಅವನನ್ನೇ ಕುರಿತು ಏಕೆ ಧ್ಯಾನಿಸಬಾರದು? ಅದು ಅಸಾಧ್ಯವಾದರೆ 'ಓಂ'ಕಾರವನ್ನು ಜಪಿಸೋಣ, ಅಥವಾ ನಾವೇ ಕಲ್ಪಿಸಿಕೊಂಡ ಪ್ರತಿಮೆಯನ್ನು ಧ್ಯಾನಿಸೋಣ. ಗೀತಾಮಾತೆಯನ್ನು ಏಕೆ ಧ್ಯಾನಿಸಬಾರದು?

ಆಕೆ ಕಾಮಧೇನುವಿನಂತೆ. ಈ ಕಾಮಧೇನುವನ್ನೇ ಕುರಿತು ಧ್ಯಾನಿಸೋಣ. ಜೀವಂತರಾಗಿರುವ ವ್ಯಕ್ತಿಗಳನ್ನು ಕುರಿತು ಧ್ಯಾನಿಸುವುದರಿಂದ ಅಪಾಯ ವಾದೀತು, ಆದುದರಿಂದ ಅದರ ಗೊಡವೆಗೆ ಹೋಗಬಾರದು.

## ಜಾಲ್ ಎ. ಡಿ. ನವರೋಜೀಯವರಿಗೆ

ಜೂನ್ ೪, ೧೯೩೨

(ಸದ್ಯಕ್ಕೆ ಪಂಚಗಣಿಯಲ್ಲಿರುವ ಮತ್ತು ಉಗ್ರರೋಗದಿಂದ ಪಾರಾಗಿ ಉಳಿದ ಜಾಲ್ ಎ. ಡಿ. ನವರೋಜೀ ಅವರಿಂದ ಕಾಗದ ಬಂದಿದೆ. ಆತ ಇನ್ನೂ ಹಾಸಿಗೆ ಹಿಡಿದಿದ್ದಾರೆ, ಆದರೆ ಪುಸ್ತಕಗಳನ್ನು ಓದುವ ಮತ್ತು ತನ್ನ ವ್ಯಾಸಂಗಗಳನ್ನು ಮುಂದುವರಿಸುವ ಶಕ್ತಿಯಿಂದಿದ್ದಾರೆ. ವ್ಯವಸಾಯೋತ್ಪನ್ನವನ್ನು ಶೇ. ೧೫ರಿಂದ ೧೫೦ರ ವರೆಗೆ ಹೆಚ್ಚಿಸುವ ಹೊಸದಾದ ನೇಗಿಲನ್ನು ನಿರ್ಮಾಣಮಾಡಿರುವ ಕೂಪರ್ ಎಂಬಾತನ ಬಗೆಗೆ ಜಾಲ್ ಬರೆದಿದ್ದಾರೆ. ಆತನಿಗೆ ಬಾಪುವಿನ ಉತ್ತರವಿದು :)

ಮಿ. ಕೂಪರ್‌ನ ನೇಗಿಲು ಆತ ಹೇಳುವ ರೀತಿಯಲ್ಲಿದ್ದರೆ ಅದು ಉಕ್ಕಿನ ನೇಗಿಲಾಗಿರುವುದರಿಂದಲೂ, ಅದರ ಪರಿಣಾಮವಾಗಿ ಹಳ್ಳಿಯ ಬಡಗಿಗೆ ಅವನ ಉದ್ಯೋಗದ ಒಂದು ಭಾಗವು ಇಲ್ಲದೆ ಹೋದೀತೆಂಬ ಕಾರಣದಿಂದ, ಅದನ್ನು ಉಪಯೋಗಿಸಲು ನನ್ನ ಯಾವ ಆಕ್ಷೇಪವೂ ಇಲ್ಲ. ನೇಗಿಲು ರೈತನ ಉತ್ಪತ್ತಿಯನ್ನು ಹೆಚ್ಚಿಸುವುದರಿಂದ ಬಡಗಿಯ ಉದ್ಯೋಗದ ಒಂದು ಭಾಗ ಇಲ್ಲದೆ ಹೋಗುವಂತಾಗುವುದಕ್ಕೆ ನಾನು ಚಿಂತಿಸುವುದಿಲ್ಲ. ಆದರೆ ಮಿ. ಕೂಪರ್ ತಮ್ಮ ನೇಗಿಲಿನ ವಿಷಯವಾಗಿ ಹೇಳಿಕೊಳ್ಳುವ ಗುಣಗಳ ಬಗೆಗೆ ನನಗೆ ತೀವ್ರ ಅನುಮಾನವಿದೆ. ನಾವು ಸಾಬರಮತಿಯಲ್ಲಿ ಭಾರತದಲ್ಲೂ ಮತ್ತು ಇತರ ಕಡೆಗಳಲ್ಲೂ ತಯಾರಾದ ಬಹುತೇಕ ಎಲ್ಲ ಬಗೆ ಸುಧಾರಿತ ನೇಗಿಲನ್ನೂ ಪ್ರಯೋಗಮಾಡಿ ನೋಡ ಲಾಯಿತು ; ಆದರೆ ಎಲ್ಲವೂ, ಅವುಗಳ ಬಗೆಗೆ ಹೇಳಿಕೊಳ್ಳಲಾದ ಗುಣ ಉತ್ತರೋತ್ತರ ನಿಜವೆನಿಸಲಿಲ್ಲ. ಅನುಭವಶಾಲಿಯೊಬ್ಬರು ಭಾರತದ ಹಳೆಯ ನೇಗಿಲು ಇಲ್ಲಿನ ಭೂಮಿಗೆ ವಿಶೇಷತಃ ಹೊಂದಿಕೊಳ್ಳುವಂತೆ ರಚಿತವಾಗಿದೆಯೆಂದು ಹೇಳಿದ್ದಾರೆ. ಅದು ಭೂಸಾರವನ್ನು ಸಂರಕ್ಷಿಸುತ್ತದೆ, ಏಕೆಂದರೆ, ರೈತನ ವ್ಯವಸಾಯಕ್ಕೆ ಎಷ್ಟು ಬೇಕೋ ಅಷ್ಟು ಮಾತ್ರ ಆಳವಾಗಿ

ಉಳುವುದೇ ಹೊರತು ಹೆಚ್ಚು ಆಳವಾಗಿ ಉತ್ತು ನಷ್ಟವನ್ನುಂಟುಮಾಡು ವುದಿಲ್ಲ. ನನಗೆ ವ್ಯವಸಾಯದ ವಿಷಯವಾಗಿ ಏನೋ ಗೊತ್ತಿದೆಯೆಂದು ಹೇಳಿಕೊಳ್ಳಲಾರೆ. ಈ ವಿಷಯಗಳಲ್ಲಿ ಗಮನೀಯವಾದ ಅನುಭವವುಳ್ಳವರ ಸಾಕ್ಷ್ಯವನ್ನು ಮಾತ್ರ ನಾನು ಹೇಳಬಲ್ಲೆ ಸುಧಾರಿತ ಉಪಕರಣ ಯಾವುದೇ ಆಗಲಿ ಅದು ಭಾರತದ ವೈಶಿಷ್ಟ್ಯದ ಪರಿಸ್ಥಿತಿಗೆ ಹೊಂದಿಕೊಳ್ಳಬೇಕು ಎಂಬುದನ್ನು ನಾವು ನೆನಪಿನಲ್ಲಿ ಇಟ್ಟುಕೊಳ್ಳಬೇಕು. ಯಂತ್ರಚಾಲಿತ ನೇಗಿಲೇ ಏನೂ ಕೆಡುಕಲ್ಲ, ಸಾವಿರಾರು ಎಕರೆ ಜಮೀನು ಇರುವಾತನಿಗೂ, ಸಾಮಾನ್ಯವಾಗಿ ಹಳೆಯ ಮಾದರಿ ನೇಗಿಲಿಗೆ ಹರಿಯದ, ಬೀಟೊಡೆದು ಹೆಪ್ಪುಕಟ್ಟಿದ ಭೂಮಿಗೂ ಅದು ಅನುಕೂಲವಾದೀತು. ಆದರೆ ಒಂದು ಎಕರೆಯಿಂದ ಮೂರು ಎಕರೆ ಭೂಮಿ ಇರುವ ಸಣ್ಣ ಹಿಡುವಳಿದಾರರಿಗೂ ಸರಿಹೋಗುವಂಥ ಉಪಕರಣ ಆವಶ್ಯಕ.

(ಜಾಲ್ 'ಬಹುಜನದ ಬಹುಸುಖವಾದ'ದ ವಿಚಾರವಾಗಿಯೂ ಬರೆದಿದ್ದರು. ಅದನ್ನು ಕುರಿತು ಬಾಪೂ ಕೊಟ್ಟ ಉತ್ತರ ಹೀಗಿತ್ತು :)

'ಬಹುಜನದ ಬಹುಸುಖವಾದ'ದಲ್ಲಿ ನನಗೆ ನಂಬಿಕೆ ಇಲ್ಲ. ಅದರ ನಿಜ ಅರ್ಥ ಹೀಗೆ: ಶೇಕಡಾ ೫೧ಕ್ಕೆ ಅನುಕೂಲವಾದೀತೆಂಬ ಭಾವನೆ ಯಿಂದ ಶೇಕಡಾ ೪೯ರ ಹಿತ ಬಲಿಯಾದರೂ ಅಥವಾ ಬಲಿಯಾಗಲೇಬೇಕು. ಅದು ಹೃದಯಶೂನ್ಯ ಸಿದ್ಧಾಂತ; ಅದರಿಂದ ಮಾನವತೆಗೆ ಹಾನಿ ತಟ್ಟಿದೆ. ನಿಜವಾದ, ಗೌರವಯುತವಾದ, ಮಾನವೀಯ ಸಿದ್ಧಾಂತವೆಂದರೆ ಸರ್ವರ ಸುಖ. ಇದು ಕೈಗತವಾಗಬೇಕಾದರೆ ಅತ್ಯಂತ ಆತ್ಮತ್ಯಾಗವೊಂದೇ ಮಾರ್ಗ.

## ಕುಮಾರಿ ಪೀಟರ್‌ಸನ್‌ಗೆ

ಜೂನ್ ೪, ೧೯೩೨

'ಕ್ಷುಲ್ಲಕದ ಬಗೆಗೂ ಎಚ್ಚರಿಕೆಯಿಂದಿರು' ಎಂಬ ಒಂದು ಸೂತ್ರ ನನ್ನ ಮನಸ್ಸಿನಮೇಲೆ ಪರಿಣಾಮ ಮಾಡಿ ಸ್ಥಾಯಿಯಾಗಿ ನಿಂತಿದೆ. ದೇವರು ಇರುವುದಾದರೆ ನಾನೇಕೆ ಚಿಂತಿಸಬೇಕು? ಅವನು ಎಂದಿಗೂ ತಪ್ಪದ

ರಕ್ಷಕ. ಪೂರ್ಣ ರಕ್ಷಣೆ ಇದ್ದರೂ ಏನೇನೋ ರಂಪ ಮಾಡುವವನು ದಡ್ಡನೇ ಸರಿ.

ಕೀರ್ತಿಕರ್ ತನ್ನ 'ವೇದಾಂತದ ಅಧ್ಯಯನ'ದಲ್ಲಿ ಮೂರ್ತಿ ಪೂಜೆಯ ಬಗೆಗೆ ಹಿಂದೂ ಭಾವನೆಯನ್ನು ಚೆನ್ನಾಗಿ ವಿವರಿಸಿದಾರೆ. ಹಿಂದೂಗಳು ವಿಗ್ರಹವನ್ನಲ್ಲ ಪೂಜಿಸುವುದು, ಭಗವಂತನ ಪ್ರತೀಕವನ್ನು. ಇದನ್ನು ಸಮರ್ಥಿಸುವುದಕ್ಕಾಗಿ ಅವರು ತುಕಾರಾಮರ ಅಭಂಗ 'ಕೇಲಾ ಮತಿಚಾ ಪಶುಪತಿ' ಇತ್ಯಾದಿಯನ್ನು ಉದಹರಿಸಿದಾರೆ.

, ಶಿವನ ವಿಗ್ರಹ ಮಣ್ಣಿನಿಂದ ಮಾಡಿದರೆ ಮಣ್ಣಿಗೇನಾಯಿತು? ಪೂಜೆ ಶಿವನಿಗೆ ತಲಪುತ್ತದೆ, ಮಣ್ಣು ಮಣ್ಣಿನೊಂದಿಗೆ ಸೇರಿಹೋಗುತ್ತದೆ. ವಿಷ್ಣುವಿನ ವಿಗ್ರಹ ಕಲ್ಲಿನಿಂದ ಮಾಡಿದರೆ ಕಲ್ಲಿಗೇನಾಯಿತು? ಪೂಜೆ ವಿಷ್ಣುವಿಗೆ ತಲಪುತ್ತದೆ—ಕಲ್ಲು ಕಲ್ಲೇ. ಜಗದಂಬೆಯ ವಿಗ್ರಹ ಕಂಚಿನಿಂದ ಮಾಡಿದರೆ ಕಂಚು ಕಂಚಾಗಿಯೇ ಇರುತ್ತದೆ. ಹಾಗೆಯೇ ನಾವು ಸಂತರೆಂದು ಗೌರವಿಸಲ್ಪಟ್ಟರೆ ಆ ಗೌರವ ಯಾವ ಭಗವಂತನ ಸೇವಕರು ನಾವೋ ಅವನಿಗೆ ತಲಪುತ್ತದೆ.

## ಕಾರ್ಯಕರ್ತನೊಬ್ಬನಿಗೆ

ಜೂನ್ ೯, ೧೯೩೨

('ವೈ' ಎಂಬಾತನಿಗೆ ಬಾಪೂ ಹೀಗೆ ಬರೆದರು :)

ಮನಸ್ಸು ಕೆಟ್ಟ ಭಾವನೆಗಳಿಂದ ಆವೃತವಾಗಿ ಅದರಿಂದ ಚಿಂತೆಗೆ ಒಳಗಾಗುವುದು ಸ್ವಯಂ ಸೃಷ್ಟಿಸಿಕೊಂಡ ನರಕವೇ ಸರಿ. ಇದನ್ನು ನೀನು ಅರಿತುಕೊಂಡರೆ ಅದರಿಂದ ಪಾರಾಗುವ ಮಾರ್ಗಗಳನ್ನು ನೀನು ಅರಿಯುವುದು ಸುಲಭ. ನಿನ್ನ ಮನಸ್ಸಿಗೆ ಬಂದ ದುಷ್ಟ ಯೋಚನೆಗಳ ಬಗೆಗೆ ಪದೇ ಪದೇ ಯೋಚಿಸಬೇಡ; ಅವು ಬರದಿದ್ದರೆ ಹೇಗೆ ಇರುತ್ತಿದ್ದೆಯೋ ಹಾಗೆ ಮುಂದುವರಿ. ನಡೆಯುವ ವ್ಯಕ್ತಿ ಮುಗ್ಗರಿಸಬಹುದು, ಆದರೆ ಅವನು ಹೇಗೆ ಮುಗ್ಗರಿಸಿದೆನೆಂದೂ ಈ ಬೀಳುವಿಕೆಯಿಂದ ಏನು ಪರಿಣಾಮವಾದೀತೆಂದೂ ಯೋಚಿಸುತ್ತಲೇ ಕೂಡಬಾರದು. ಅಷ್ಟೆಲ್ಲ ಆದರೂ ಅವನು ಮುಂದುವರಿಯಬೇಕು; ಆ ರೀತಿ ಮಾಡುವುದರಿಂದ

ಅವನ ಪ್ರಗತಿಯ ಶಕ್ತಿ ವೃದ್ಧಿಯಾಗುತ್ತದೆ. ಈ ಶಕ್ತಿವೃದ್ಧಿಯಿಂದ ಅವನು ಇನ್ನೊಮ್ಮೆ ಮುಗ್ಗರಿಸುವ ಸಂದರ್ಭಗಳು ಕಡಮೆಯಾಗುತ್ತವೆ.

## ಛಗನ್‌ಲಾಲ್ ಜೋಷೀ* ಅವರಿಗೆ

ಜೂನ್ ೧೦, ೧೯೩೨

(ಛಗನ್‌ಲಾಲ್ ಜೋಷೀಯವರಿಗೆ ಬಾಪೂ ಬರೆದ ಕಾಗದ ಮುಖ್ಯವಾಗಿತ್ತು :)

ಆಶ್ರಮದ ಬಹುಮಟ್ಟಿನ ಕೆಲಸವನ್ನು ಆಶ್ರಮವಾಸಿಗಳೇ ಮಾಡುತ್ತಾರೆ. ಇನ್ನೂ ಕೆಲವರು ಕೂಲಿಯಾಳುಗಳು ಇದ್ದಾರೆ; ಆದರೆ ಅವರು ಆಶ್ರಮನಿಯಮಾವಳಿಯನ್ನು ಪಾಲಿಸುವಂಥವರು. ಅವರೊಂದಿಗೆ ಆಶ್ರಮವಾಸಿಗಳೂ ಕೆಲಸಮಾಡುತ್ತಾರೆ. ಆಶ್ರಮವಾಸಿಗಳು ನಿಧಾನವಾಗಿ ದೈಹಿಕ ಶ್ರಮದ ವಿವರಗಳನ್ನೆಲ್ಲ ಕರಗತ ಮಾಡಿಕೊಳ್ಳುತ್ತಿದ್ದಾರೆ. ಮಕ್ಕಳೂ ಇದರಲ್ಲಿ ಭಾಗವಹಿಸುತ್ತಾರೆ. ಹೊಸದಾಗಿ ಬಂದವರಿಗೆ ಪ್ರಾರ್ಥನೆ ಮತ್ತು ಗೀತೆಗಳನ್ನು ಕಲಿಸುವುದೇ ಪ್ರಥಮ ಕೆಲಸ. ಇವುಗಳನ್ನು ಚೆನ್ನಾಗಿ ಕಲಿತಮೇಲೆ ಇಂಗ್ಲಿಷನ್ನು ಕಲಿಯಲು ಬಯಸುವವರು ಅದನ್ನು ಕಲಿಯಬಹುದು. ಎಲ್ಲರೂ ಒಂದು ಘಂಟೆಯ ಕಾಲ ಸೂತ್ರಯಜ್ಞ ಮಾಡಲೇಬೇಕು. ೨೦ನೇ ನಂಬರು ದಾರಕ್ಕಿಂತ ಒರಟಾದುದನ್ನು ಸೂತ್ರಯಜ್ಞವೆಂದು ಪರಿಗಣಿಸುವುದಿಲ್ಲ. ಪ್ರತಿದಿನವೂ ಉತ್ಪನ್ನವಾದ ನೂಲು ಅದೇ ದಿನ ಆಶ್ರಮದ ಕಾರ್ಯಾಲಯಕ್ಕೆ ಸೇರಬೇಕು. ಆಶ್ರಮವಾಸಿಗಳು ಒಪ್ಪುವುದಾದರೆ, ಯಾರೂ ತಮ್ಮ ನೂಲನ್ನು ಪುನಃ ಕೊಂಡುಕೊಳ್ಳಲು ಅವಕಾಶವಿರಬಾರದೆಂದು ನನ್ನ ಸಲಹೆ. ಈ ರಿಯಾಯಿತಿ ಇರುವವರೆಗೂ ಯಜ್ಞ ಅಪೂರ್ಣವೆಂದೇ ನನ್ನ ಭಾವನೆ. ಯಾವ ಬಗೆಯ ಕೆಲಸವೇ ಆಗಲಿ, ಘಂಟೆಗೆ ಒಂದಾಣೆಯಂತೆ ಮಜೂರಿ ಲೆಕ್ಕ ಮಾಡಿ ಎಲ್ಲರ ಹೆಸರಿಗೂ ಖಾತೆ ಇಟ್ಟು, ಅದಕ್ಕೆ ಜಮಾ ಮಾಡಬೇಕು. ಈ ದರದಂತೆ ಮಜೂರಿಯನ್ನು ಕೊಡುವುದಕ್ಕೆ ಎಲ್ಲರ ಒಪ್ಪಿಗೆಯೂ ಬೇಕಿಲ್ಲ. ಈ ವಿಷಯ ನಾರಾಯಣದಾಸರಿಗೆ ಒಪ್ಪಿಗೆಯಾದರೆ ಅವರು ಲೆಕ್ಕವಿಡಲು ಆರಂಭಿಸ

---

* ಸಾಬರಮತಿ ಆಶ್ರಮದ ಮೇಲ್ವಿಚಾರಣೆ ಹೊತ್ತವರಲ್ಲಿ ಒಬ್ಬರು.

ಬೇಕೆಂದು ನಾನು ಸಲಹೆಮಾಡುತ್ತೇನೆ. ಈ ಲೆಕ್ಕದ ಪುಸ್ತಕ ಸಾಮಾನ್ಯ ವಾಗಿ ಇಡುವ ಲೆಕ್ಕದ ಪುಸ್ತಕಗಳ ಜೊತೆಗೆ ಇರಬೇಕು. ಇದು ಫಲಿತಾಂಶ ಗಳ ಬಗೆಗೆ ಕಿಂಚಿತ್ ಅಭಿಪ್ರಾಯ ಕೊಟ್ಟೀತು. ಇದು ಬಹುಮಟ್ಟಿನ ಅಂಕಿ–ಅಂಶಗಳನ್ನು ಒದಗಿಸಿ, ಆಶ್ರಮದ ಎಲ್ಲರಿಗೂ ಸಮಾನ ಮಜೂರಿ ಯನ್ನು ನೀಡಲು ಮಾರ್ಗದರ್ಶಕವಾದೀತು. ನೂಲುವುದಾಗಲಿ, ನೇಯ್ಗೆ ಯಾಗಲಿ, ಸ್ವಚ್ಛತಾ ಕಾರ್ಯವಾಗಲಿ, ಬೇರಾವ ಬಗೆಯ ಸಾಮಾಜಿಕ ಸೇವೆಯಾಗಲಿ ಎಲ್ಲಕ್ಕೂ ಘಂಟೆಯೊಂದಕ್ಕೆ ಒಂದು ಆಣೆಯಂತೆ ಸಮಾನ ವಾಗಿ ಕೊಡುವಂತಾಗಬೇಕು. ಈ ಪ್ರಶ್ನೆಯನ್ನು ಕುರಿತು ಎಲ್ಲ ದೃಷ್ಟಿ ಗಳಿಂದಲೂ ಮುಂಚೆಯೇ ಚರ್ಚಿಸಿದ್ದುದು ನಿನಗೆ ನೆನಪಿರಬಹುದು. ನಾರಾಯಣದಾಸನಿಗೆ ನಾನು ಬರೆದಿರುವ ಇತ್ತೀಚಿನ ಪತ್ರಗಳಲ್ಲಿ ಇದನ್ನು ಪುನಃ ತಿಳಿಸಿದೇನೆ. ಇಂಥ ಅಭಿಪ್ರಾಯಗಳನ್ನು ಕಾರ್ಯರೂಪಕ್ಕೆ ತರುವ ಬಗೆಗೆ ನಾರಾಯಣದಾಸನಿಗೆ ಇರುವ ಸಾಮರ್ಥ್ಯ ಈಗ ಇನ್ನೂ ಹೆಚ್ಚಿದೆ. ಆದುದರಿಂದ ಅವನು ನನ್ನ ಸಲಹೆಯನ್ನು ಸ್ವಾಗತಿಸಿದಾನೆ. ಈ ಲೆಕ್ಕದ ಪುಸ್ತಕವನ್ನು ಇಡುವುದಕ್ಕೆ ಹೆಚ್ಚು ಕಾಲ ತೆಗೆದುಕೊಳ್ಳಬೇಕಾಗಿಲ್ಲ. ಈಗ ಪ್ರಾಯೋಗಿಕ ದೆಸೆಯಲ್ಲಿರುವುದು ವಾಸ್ತವ ಆಚರಣೆಗೆ ಬಂದಾಗ ಬಹಳ ಸುಲಭವಾಗುತ್ತದೆ. ಸಾಮಾನ್ಯ ಗುಜರಾತಿಯನ್ನು ಬಲ್ಲ ಯಾರೊಬ್ಬರೂ ಇದನ್ನು ಇಡಬಲ್ಲರು. ಇದರ ಯಶಸ್ಸು ವ್ಯಕ್ತಿಗಳ ಗುಣವನ್ನೇ ಅವಲಂಬಿ ಸಿದೆ. ಯಾರೊಬ್ಬರೂ ಕರ್ತವ್ಯಲೋಪ ಮಾಡಿದರಾಗಲಿ, ಅಥವಾ ತಾತ್ಸಾರದಿಂದ ಕೆಲಸ ಮಾಡಿದರಾಗಲಿ, ಲೆಕ್ಕದ ಪುಸ್ತಕಗಳು ವಾಸ್ತ ವಾಂಶಗಳನ್ನು ಚಿತ್ರಿಸಲಾರವು; ಎಂದರೆ, ಸಂಪಾದಿಸಿದ ಹಣವೂ ಕದ್ದ ಹಣವೂ ಮಿಶ್ರಿತವಾಗುತ್ತವೆನ್ನಬಹುದು.

ಮಕ್ಕಳ ಶಿಕ್ಷಣದ ವಿಷಯವನ್ನೂ ನನ್ನ ಪತ್ರದಲ್ಲಿ ತಿಳಿಸಿದೇನೆ. ಈ ವಿಷಯವಾಗಿ ಆಶ್ರಮವಾಸಿಗಳಲ್ಲಿ ಎಷ್ಟು ಮಂದಿ ನನ್ನ ಅಭಿಪ್ರಾಯ ಗಳನ್ನು ಸ್ವೀಕರಿಸಲು ಸಿದ್ಧವಿರುವರೋ ನಾನರಿಯೆ. ಆದರೆ ಈ ಪತ್ರದಲ್ಲಿ ಅದನ್ನೆಲ್ಲ ಕುರಿತು ನಾನು ನಿನಗೆ ಬರೆಯಲಾರೆ.

ನಮಗೆ ದೊರೆಯುವ ಅಮೂಲ್ಯ ವಿರಾಮವನ್ನು ಆದಷ್ಟು ಚೆನ್ನಾಗಿ ಉಪಯೋಗ ಮಾಡಿಕೊಳ್ಳಬೇಕು. ಬಹುಶಃ ಸ್ವತಂತ್ರ ವಿಚಾರಶಕ್ತಿ

ಯನ್ನು ಅಭ್ಯಾಸಮಾಡುವುದೇ ಅತ್ಯಂತ ಶ್ರೇಷ್ಠವೆನಿಸುತ್ತದೆ. ನಾವು ಆಗಾಗ ವಿಚಾರಶೂನ್ಯರಾಗಿರುತ್ತೇವೆ, ಆದುದರಿಂದ ಪುಸ್ತಕಗಳನ್ನು ಓದುವುದರಲ್ಲೊ ಅಥವಾ ಇನ್ನೂ ಹೀನವೆಂದರೆ ಮಾತನಾಡುವುದರಲ್ಲೋ ಒಲವನ್ನು ಇಟ್ಟೇವು. ನಮ್ಮಲ್ಲಿ ಕೆಲವರು ವಿಚಾರಮಾಡಿದರೂ ಗಾಳಿ ಗೋಪುರ ಕಟ್ಟುತ್ತೇವೆ. ನಿಜವಾಗಿ ನೋಡಿದರೆ, ವ್ಯಾಸಂಗವೆಂಬ ಕಲೆ ಹೇಗಿದೆಯೋ ಹಾಗೆಯೇ ವಿಚಾರವೆಂಬ ಒಂದು ಕಲೆಯೂ ಇದೆ. ನಾವು ಸರಿಯಾದ ವಿಚಾರವನ್ನು ಸಕಾಲದಲ್ಲಿ ಚಿಂತಿಸಬೇಕು; ನಿರರ್ಥಕ ವಿಚಾರಗಳಲ್ಲೂ ನಿರರ್ಥಕ ಪುಸ್ತಕಗಳನ್ನು ಓದುವುದರಲ್ಲೂ ನಿರತರಾಗಬಾರದು. ಅಂಥ ಅಭ್ಯಾಸದ ಪರಿಣಾಮವಾಗಿ ಉತ್ಪನ್ನವಾದ ಮತ್ತು ಶೇಖರಿಸಲ್ಪಟ್ಟ ಮಾನಸಿಕ ಶಕ್ತಿ ನಿಜವಾಗಿಯೂ ಹಿರಿದು. ಪ್ರತಿಸಲವೂ ನಾನು ಸೆರೆಮನೆಗೆ ಸೇರಿಸಲ್ಪಟ್ಟಾಗ ಯಾವುದಾದರೂ ಉದ್ದೇಶ ಕುರಿತು ವಿಚಾರಮಾಡಲು ಸದವಕಾಶ ದೊರಕುತ್ತದೆಂಬುದು ನನ್ನ ಅನುಭವವಾಗಿದೆ. ಆದುದರಿಂದ ನೀವೆಲ್ಲ ಗಾಢಚಿಂತನೆ ಮಾಡುವ ಕಲೆಯನ್ನು ಅಭ್ಯಸಿಸಬೇಕೆಂದು ನನ್ನ ಬುದ್ಧಿವಾದ. ನೀವು ಈ ರೀತಿ ಮಾಡಿದರೆ ನನ್ನನ್ನು ಹೆಚ್ಚಿಗೆ ಪ್ರಶ್ನೆ ಕೇಳುವ ಸಂಭವವೇ ಇರುವುದಿಲ್ಲ. ಆದರೆ ಯಾರೂ ಈ ಬುದ್ಧಿವಾದವನ್ನು ತಪ್ಪಾಗಿ ತಿಳಿದುಕೊಳ್ಳಬಾರದು. ನೀವು ಪ್ರಶ್ನೆಗಳನ್ನು ಕೇಳುವ ಬಗೆಗೆ ನಾನು ನಿರೋಧಮಾಡುವುದಿಲ್ಲ; ನೀವು ಪರಾವಲಂಬನೆಯಿಂದ ಪಾರಾಗಬೇಕೆಂಬುದೇ ನನ್ನ ಹಂಬಲ. ಉಳಿದ ವಿಚಾರಕ್ಕೆ ನಾನೇ ಇದ್ದೇನೆ. ನನ್ನ ವಿಚಾರಗಳಿಂದಲೂ ಅನುಭವಗಳಿಂದಲೂ ಲಾಭ ಪಡೆಯುವುದು ನಿಮ್ಮ ಹಕ್ಕು ಅಷ್ಟೇ ಅಲ್ಲ, ಕರ್ತವ್ಯವೂ ಆಗಿದೆ.

## ಭಾರತೀಗೆ

ಜೂನ್ ೧೧, ೧೯೩೨

(ಭಾರತೀ ಬರೆದ ಪತ್ರಕ್ಕೆ ಗಾಂಧೀಜೀಯ ಉತ್ತರವಿದು :)

ಸೊಗಸಾದ ಹಸ್ತಾಕ್ಷರದ ನಿನ್ನ ಪತ್ರ. ಇಂಥ ಪತ್ರಗಳನ್ನು ಓದಲು ನನಗೆ ಎಂದಿಗೂ ಬೇಸರವಾಗುವುದಿಲ್ಲ.

ನೀವೆಲ್ಲ ಸೋದರರೂ ಸೋದರಿಯರೂ ಶೀತೋಷ್ಣಗಳನ್ನು ತಡೆದುಕೊಳ್ಳುವಂಥ ಗಟ್ಟಿಯಾದ ಆರೋಗ್ಯವನ್ನು ಪಡೆದುಕೊಳ್ಳಲೇಬೇಕು. ಆದರೆ ನೀವು ನಿಧಾನವಾಗಿ ಮುಂದುವರಿಯಬೇಕು. ಉದಾಹರಣೆಗೆ, ಒಮ್ಮೆಗೇ ಸಿಮ್ಲಾದ ಉಷ್ಣವನ್ನು ನೀವು ಸಹಿಸಬೇಕೆಂಬುದು ನನ್ನ ಉದ್ದೇಶವಲ್ಲ. ಯಾವಾಗಲೂ ಮೃದುವಾಗಿರುವವರು ಸನ್ನಿವೇಶ ಬಂದ ಕೂಡಲೇ ಕಷ್ಟಸಹಿಷ್ಣುಗಳಾಗುತ್ತಾರೆಂದು ಭಾವಿಸುವುದು ತಪ್ಪಾದೀತು. ಅದು ಪ್ರಕೃತಿಗೂ ವಿರುದ್ಧವೇ. ಇಂಥ ಎಷ್ಟೋ ನೂರಾರು ಸಂಗತಿಗಳನ್ನು ನಾನು ನೆನಪಿಗೆ ತಂದುಕೊಳ್ಳಬಲ್ಲೆ.

ಸಾಹಿತ್ಯವನ್ನು ಓದಲು ನನಗೆ ಬಹಳ ಇಚ್ಛೆಯೇ. ಪಾಠಶಾಲೆಯಲ್ಲಿ ಪಠ್ಯಪುಸ್ತಕಗಳನ್ನು ಬಿಟ್ಟು ಹೆಚ್ಚಿಗೆ ಓದಲಾಗಲಿಲ್ಲ. ಪಾಠಶಾಲೆಯನ್ನು ಬಿಟ್ಟಮೇಲೆ ಒಂದಲ್ಲ ಒಂದು ಕಾರ್ಯದಲ್ಲಿ ತೊಡಗಿದ ನನಗೆ, ಸೆರೆಮನೆ ಹೊರತು ಬೇರೆ ವಿರಾಮವೇ ಸಿಕ್ಕಲಿಲ್ಲ. ಸೆರೆಮನೆಯಲ್ಲಿಯೇ ನಾನು ಸ್ವಲ್ಪ ವ್ಯಾಸಂಗಮಾಡಲು ಸಾಧ್ಯವಾಯಿತು. ಇದರಿಂದ ನನಗೇನೂ ವಿಶೇಷ ನಷ್ಟವಾಯಿತೆಂದು ಅನಿಸುವುದಿಲ್ಲ; ಏಕೆಂದರೆ ನಾನು ಹೆಚ್ಚಿಗೆ ಓದಲು ಅವಕಾಶವಾಗದಿದ್ದರೆ, ನಾನು ವಿಶೇಷವಾಗಿ ವಿಚಾರಮಾಡಲು ಅವಕಾಶವಾಯಿತು. ಜೀವನಶಾಲೆ ಪುಸ್ತಕಶಾಲೆಗಿಂತಲೂ ಎಂದಿದ್ದರೂ ಮೇಲು.

'ಕಲೆಗಾಗಿ ಕಲೆ' ಎಂದು ವಾದಿಸುವ ಜನ ಅದನ್ನು ಸಮರ್ಥಿಸಲಾರರು. ಕಲೆ ಎಂದರೇನು? ಎಂಬ ಪ್ರಶ್ನೆ ಒತ್ತಟ್ಟಿಗಿದ್ದರೂ, ಜೀವನದಲ್ಲಿ ಕಲೆಗೆ ಸ್ಥಾನವಿದೆ. ಆದರೆ ಕಲೆ ನಮ್ಮ ಉದ್ದಿಷ್ಟ ಗುರಿಗೆ ಕೇವಲ ಒಂದು ಸಾಧನ; ಇದಕ್ಕೆ ಪ್ರತಿಯಾಗಿ ಕಲೆಯೇ ಗಮ್ಯವಾದರೆ ಅದು ಮಾನವತೆಯನ್ನು ದಾಸ್ಯಕ್ಕೆ ಗುರಿಮಾಡಿ ಅದನ್ನು ಅವನತಿಗೆ ಇಳಿಸುತ್ತದೆ.

ಸತ್ಯವೆಂದರೆ ದೇವರು. ಕಳೆದ ಕೆಲವಾರು ವರುಷಗಳಿಂದ 'ದೇವರು ಸತ್ಯ'ವೆನ್ನುವುದಕ್ಕೆ ಬದಲಾಗಿ ಸತ್ಯವೇ ದೇವರೆಂದೆನ್ನುತ್ತಿದೇನೆ ನಾನು. ಇದರಲ್ಲಿ, ಮೊದಲನೆಯ ವಾಕ್ಯ ವಸ್ತುಸ್ಥಿತಿಗೆ ಹೊಂದಿಕೊಳ್ಳುತ್ತದೆ; ಏಕೆಂದರೆ ಈ ಜಗತ್ತಿನಲ್ಲಿ ಸತ್ಯ ಹೊರತು ಬೇರೆ ಏನೂ ಇಲ್ಲ. ಈ ಸತ್ಯವನ್ನು ವಿಶಾಲವಾದ ಅರ್ಥದಲ್ಲಿ ತಿಳಿಯಬೇಕು. ಇದು ಚಿತ್‌ಸ್ವರೂಪ. ಸತ್ಯಸ್ವರೂಪನಾದ ದೇವರೂ ಅವನ ನಿಯಮವೂ ಬೇರೆಬೇರೆಯಲ್ಲ—

ಎರಡೂ ಒಂದೇ. ಆದುದರಿಂದ ಇದು ಚಿತ್‌ಪೂರ್ಣ. ಈ ಜಗತ್ತು ಸತ್ಯದ ಕರ್ಮವೆಂದಾಗಲೀ ಅಥವಾ ನಿಯಮದ ಕರ್ಮವೆಂದಾಗಲೀ ಹೇಳಿದರೆ ಎರಡೂ ಒಂದೇ. ಈ ಸತ್ಯ ಅನಂತಶಕ್ತಿಭರಿತ. ಗೀತೆಯ ೧೦ನೇ ಅಧ್ಯಾಯದ ಭಾಷೆಯಲ್ಲಿ ಅದರ ಒಂದು ಅಂಶದಿಂದ ಈ ವಿಶ್ವ ಆಧಾರಿತವಾಗಿದೆ. ಆದುದರಿಂದ 'ದೇವರು' ಎಂಬ ಶಬ್ದ ಬರುವ ಕಡೆಗಳಲ್ಲೆಲ್ಲ ಅದಕ್ಕೆ ಬದಲಾಗಿ 'ಸತ್ಯ' ಎಂಬ ಶಬ್ದವನ್ನು ಸೇರಿಸಿದರೆ ನಾನು ಹೇಳುವುದರ ಕಿಂಚಿತ್ ಅರ್ಥ ನಿನಗೆ ಅರಿವಾದೀತು.

ದೇವರು ಇರುವುದೇ ಆದರೆ ಅವನನ್ನು ಸತ್ಯವೆಂದಾದರೂ ಭಾವಿಸಿ ನಾವು ಆರಾಧಿಸಬೇಕು. ನಾವು ಯಾವುದನ್ನು ಆರಾಧಿಸುವೆವೋ ಅದರ ಹಾಗೆಯೇ ಆಗುತ್ತೇವೆ. ಇದೇ ಸತ್ಯದ ಪೂರ್ಣ ಮತ್ತು ವ್ಯಾಪಕಾರ್ಥ. ಈ ಸತ್ಯವು ಮಾನವನ ಹೃದಯಸ್ಥವಾಗಿದೆ. ಅದನ್ನು ನಾವು ಏನೋ ತಾತ್ಸಾರವಾಗಿ ಅರಿಯುತ್ತೇವೆ ಅಥವಾ ಇಲ್ಲವೇ ಇಲ್ಲ. ಹೃತ್ಪೂರ್ವಕ ಪ್ರಾರ್ಥನೆಯೇ ಅಂಥ ಅರಿವಿಗೆ ಕೀಲಿಕೈ.

ನನ್ನ ಅಕ್ಷರವನ್ನು ಓದುವುದು ನಿನಗೆ ಕಷ್ಟವೇ? ಈ ಪತ್ರವನ್ನು ಇಟ್ಟಿರುವ ಲಕೋಟೆ ಸರದಾರ್ ಮಾಡಿದುದು; ಅವರು ಬೇರೆ ಯಾವುದಕ್ಕೂ ಉಪಯೋಗಿಸಲು ಸಾಧ್ಯವಾಗದ ಎಲ್ಲ ಕಾಗದದ ಚೂರನ್ನೂ ಈ ರೀತಿ ಉಪಯೋಗಿಸುತ್ತಾರೆ.

## ಕಾರ್ಯಕರ್ತನೊಬ್ಬನಿಗೆ

ಜೂನ್ ೧೫, ೧೯೩೨

('ಎಸ್' ಉದ್ದೇಶರಹಿತ ಕುತೂಹಲದಿಂದ ಕೆಲವು ಉಪಯುಕ್ತ ಪ್ರಶ್ನೆಗಳನ್ನು ಕೇಳುವುದು ವಾಡಿಕೆ. ಅವುಗಳನ್ನು ಕುರಿತು ಬಾಪೂವಿನ ಉತ್ತರವಿದು:)

ನಾನು ಆತ್ಮಸಂಯಮದಿಂದಲೂ ಬ್ರಹ್ಮಚರ್ಯೆಯಿಂದಲೂ ಬಾಳನ್ನು ಸಾಗಿಸಿರುವುದರಿಂದ ದೀರ್ಘಕಾಲ ಬದುಕುವೆನೆಂದು ನಿನ್ನ ಮನವರಿಕೆಯಾಗಿದೆ. ನನ್ನ ಭೋಗಾಪೇಕ್ಷೆ ಇತರರದಕ್ಕಿಂತ ಕಡಮೆಯಾಗಿರುವಷ್ಟು ಮಟ್ಟಿಗೆ ನಿನ್ನ ಈ ಮನವರಿಕೆ ಸರಿಯೋ ತಪ್ಪೋ ಎನ್ನಬಹುದು.

ನನ್ನ ೩೦ನೇ ವಯಸ್ಸಿನವರೆಗೆ ಸಾಮಾನ್ಯ ವಿವಾಹಿತ ಪುರುಷನಂತೆಯೇ ನಾನೂ ಜೀವನವನ್ನು ಸಾಗಿಸಿದೆ. ಆಹಾರದ ವಿಷಯದಲ್ಲಿಯೂ ನಾನು ಮಿತವಾಗಿರಲಿಲ್ಲ. ಕೇವಲ ಜಿಹ್ವಾಚಾಪಲ್ಯದಿಂದಲೇ ಎಷ್ಟೋ ವಸ್ತುಗಳನ್ನು ತಿನ್ನುತ್ತಿದ್ದೆ. ಅನಂತರ ನನ್ನ ಬಾಳು ಆತ್ಮಸಂಯಮದ ಕಡೆ ತಿರುಗಿತು. ಇಂದ್ರಿಯಗಳ ದಿಗ್ವಿಜಯ ಸಾಧಿಸಲಾಗದಿದ್ದರೂ ಅವುಗಳನ್ನು ನಿಗ್ರಹದಲ್ಲಿಡಲು ಅರಿತೆ. ಆದುದರಿಂದ ಭೋಗಜೀವನದ ಫಲವಾಗಿ ನನ್ನ ದೇಹದಾರ್ಢ್ಯ ಆಗಲೇ ವ್ಯತ್ಯಸ್ತಹೊಂದಿದೆ. ಇಂದ್ರಿಯನಿಗ್ರಹದಿಂದಲೇ ಇದರ ಪರಿಣಾಮ ಕಡಮೆಯಾಯಿತು. ಆದರೆ ನನ್ನ ಸಮಕಾಲೀನರು—ಇಂದ್ರಿಯನಿಗ್ರಹವನ್ನು ಮಾಡದೇ ಇದ್ದವರು—ನನ್ನ ಆಚಾರದ ಪ್ರಭೆಗೆ ಮಾರುಹೋಗಿ, ನನ್ನ ನ್ಯೂನತೆಗಳನ್ನು ಅರಿಯದೆ ಹೋದರು.

## ದೇವದಾಸ್ ಗಾಂಧೀಗೆ

ಜೂನ್ ೧೬, ೧೯೩೨

(ಗೋರಖ್‌ಪುರದ ಸೆರೆಮನೆಯಲ್ಲಿ ದೇವದಾಸ್ ರೋಗಪೀಡಿತನಾಗಿವಾನೆಂದು ಹನುಮಾನ್ ಪ್ರಸಾದರಿಂದ ತಾರು ಬಂದಿದೆ. ಜ್ವರವೇನೋ ನಿಜ, ಆದರೆ ಅದು ವಿಷಮಶೀತಜ್ವರವಲ್ಲ ; ಈಗ ಉತ್ತಮವಾಗಿದಾನೆ. ಬಾಪೂ ವಿವರಗಳನ್ನು ತಿಳಿಯಲು ತಾರನ್ನು ಕೊಟ್ಟರು, ದೇವದಾಸನಿಗೆ ಈ ರೀತಿ ಬರೆದರು :)

ವಿಚಿತ್ರ ಭಯದಿಂದ ನಾನು ಪೀಡಿತನಾಗಿದ್ದೆ. ಮೊನ್ನೆ ದಿನ ಅಂಥದೇನೋ ವಾರ್ತೆ ಬಂದೀತೆಂದು ನಾನು ಭಾವಿಸಿದ್ದೆ, ನಿನ್ನೆ ತಾರು ಬಂದಿತು. ಇವೆಲ್ಲ ಏನೆಂದು ಸರದಾರರನ್ನು ವಿಚಾರಿಸಿದೆ. ಅವೆಲ್ಲ ನಿನ್ನ ರೋಗಕ್ಕೆ ಸಂಬಂಧಿಸಿದುವೆಂದು ಅವರು ತಿಳಿಸಿದರು. ಗೋರಖ್‌ಪುರದಂಥ ಸ್ಥಳದಲ್ಲಿದ್ದ ನೀನು ಜ್ವರಪೀಡಿತನಾಗದಿರುವುದು ಅಸಾಧ್ಯವೇನಲ್ಲ. ಆದರೆ ಈ ಪತ್ರ ನಿನ್ನ ಹಸ್ತ ತಲಪುವ ವೇಳೆಗೆ ನೀನು ಗುಣಮುಖವಾಗಿರುವೆಯೆಂದು ನಂಬಿದೇನೆ. ಇಂಥ ವೇಳೆಯಲ್ಲಿ ಗೆಳೆಯರ ಮತ್ತು ಬಂಧುಗಳ ಸಹವಾಸವನ್ನು ನೀನು ಬಯಸುವೆಯೆಂದು ನನಗೆ ಭಾಸವಾಗುತ್ತದೆ. ನೀನು ಅನೇಕರಿಗೆ ಸೇವೆಸಲ್ಲಿಸಿರುವುದರಿಂದ ನಿನಗೂ ಅಂಥ ಬಂಧುಮಿತ್ರರು ನಿನ್ನ ಸಂಗಡ ಇರುವುದು ಯುಕ್ತ. ಆದರೆ ನಾನು ಕಲ್ಲುಹೃದಯದವನು,

ಆದುದರಿಂದ ಗೋರಖ್‌ಪುರದಂಥ ಒಂದು ದೂರದ ಸ್ಥಳಕ್ಕೆ ಇಲ್ಲಿಂದ ಯಾರನ್ನೂ ಕಳುಹಿಸಲಾರೆ. ಒಂದುವೇಳೆ ಯಾರಾದರೂ ಹೊರಡಲು ಸಿದ್ಧವಾದರೂ ನಾನು ಅವರನ್ನು ನಿಲ್ಲಿಸುತ್ತೇನೆ. ನಿನ್ನ ವಿಷಯದಲ್ಲಿ ವರ್ತಿಸುವಾಗ ನನಗೆ ತತ್ತ್ವಜ್ಞಾನ ಮಾರ್ಗ ತೋರಿಸದಿದ್ದರೆ ಅದಕ್ಕೆ ಯಾವ ಬೆಲೆಯೂ ಇರಲಾರದು. ಇದನ್ನು ನೆನಪಿನಲ್ಲಿಡು. ನಿನ್ನ ಕಷ್ಟವನ್ನು ಸಮಾಧಾನದಿಂದಲೂ ಹರ್ಷದಿಂದಲೂ ಸಹಿಸು. ದೇವರೇ ನಿಜ ತಂದೆ, ತಾಯಿ, ಬಂಧು, ಬಳಗ; ಇತರರು ಹೆಸರಿಗೆ ಮಾತ್ರ ಆ ರೀತಿ. ಅವರೇ ನಿಸ್ಸಹಾಯಕರು, ಸಹಾಯ ಮಾಡಬೇಕೆಂದು ಅಪೇಕ್ಷಿಸಿದರೂ ಮಾಡಲು ಅಶಕ್ತರು. ಆದುದರಿಂದ ಯಾವ ಬಂಧುಬಳಗದವರ ಮೇಲೂ ನೀನು ಭರವಸೆಯನ್ನು ಇಡಬೇಡ, ಸರ್ವಾಂತರ್ಯಾಮಿಯಾಗಿರುವ ದೇವರೊಬ್ಬನ ಮೇಲೆ ಮಾತ್ರ ಭರವಸೆ ಇಡು. ಯಾವ ಸಹಾಯವನ್ನು ಕಳಿಸಬೇಕೆಂದು ಅವನ ಸಂಕಲ್ಪವೋ ಅದನ್ನು ಅವನೇ ಕಳಿಸುತ್ತಾನೆ. ನೀನು ಎಲ್ಲಿಯೋ ಇರು, ಸೆರೆಮನೆಯಲ್ಲಾಗಲೀ ಹೊರಗಾಗಲೀ — ನಿನ್ನ ನೆರೆಯವರನ್ನು ಆಕರ್ಷಿಸುವೆಯೆಂದು ನಂಬಿದೇನೆ.

ನಾನು ಇಷ್ಟೆಲ್ಲವನ್ನು ಹೇಳಿದರೂ, ಆಶ್ರಮದ ಯಾರಾದರೂ ನಿನಗೆ ಶುಶ್ರೂಷೆಮಾಡಲು ಬೇಕೆನಿಸಿದರೆ ತಾರನ್ನು ಕಳಿಸುವ ಸ್ವಾತಂತ್ರ್ಯವನ್ನು ನೀನು ಹೊಂದಿದೀಯೆ. ಇದು ನಿನ್ನ ಹಸ್ತ ತಲಪುವ ವೇಳೆಗೆ ನಿನ್ನ ರೋಗ ಎಂದೋ ಹಿಂದಿನ ಮಾತಾಗಿರುವುದೆಂದು ನಾನು ನಂಬಿದೇನೆ. ಸದಾ ನನ್ನ ಆಶೀರ್ವಾದ ನಿನಗೆ ಇದ್ದೇ ಇದೆ.

## ನಾರಾಯಣಪ್ಪನಿಗೆ

ಜೂನ್ ೧೫, ೧೯೩೨

ದಿನನಿತ್ಯದ ಕಾರ್ಯ ಎಷ್ಟೇ ಸರಳವಾದದ್ದಿರಲಿ ಅದರಿಂದ ಪೂರ್ಣ ತೃಪ್ತಿಯನ್ನು ಪಡೆಯುವುದೆಂಬ ರೀತಿಯೇ ಇಲ್ಲ. ಯಾರು ಕಾಯುವರೋ, ನಿರೀಕ್ಷಿಸುವರೋ ಇಲ್ಲವೆ ಪ್ರಾರ್ಥನೆ ಸಲ್ಲಿಸುವರೋ ಅವರಿಗೆ ಭಗವಂತ ಯಾವಾಗಲೂ ಹೆಚ್ಚಿನ ಕಾರ್ಯಗಳನ್ನೂ ಹೊಣೆಯನ್ನೂ ಹೊರಿಸುತ್ತಾನೆ.

(ಮೀರಾ ಬೆಹನರಿಗೆ ಬರೆದ ಪತ್ರದಲ್ಲಿ ತಮ್ಮ ಕೈಗಳ ನೋವಿನ ವಿಷಯವಾಗಿಯೂ, ಉಪ್ಪಿಲ್ಲದ ಊಟದ ವಿಷಯವಾಗಿಯೂ ಬಾಪೂ ಬರೆದು ಹೀಗೆ ತಿಳಿಸಿದರು :)

ಸರ್ ಜೇಮ್ಸ್ ಜೀನ್ಸ್ ಅವರ ಪುಸ್ತಕದಲ್ಲಿ 'ಬಾಳು ಸಾವಿನೆಡೆಗೆ ಮುನ್ನಡೆ' ಎಂಬ ಒಂದು ಸೊಗಸಾದ ವಾಕ್ಯವಿದೆ. ಇದಕ್ಕೆ ಇನ್ನೊಂದು ಪಾಠ ಹೀಗೆನ್ನಬಹುದು: 'ಬಾಳು ಸಾವಿಗೆ ಸಿದ್ಧತೆ.' ಏಕೋ ಏನೋ, ಆ ಅನಿವಾರ್ಯ ಮತ್ತು ಅದ್ಭುತ ಘಟನೆಯನ್ನು ಕುರಿತು ಚಿಂತಿಸಲು ನಡುಗುತ್ತೇವೆ. ಕಳೆದುದಕ್ಕಿಂತಲೂ ಉತ್ತಮ ಬಾಳಿಗೆ ಅದೊಂದು ಸಿದ್ಧತೆಯ ರೂಪದ ಅದ್ಭುತ ಘಟನೆ. ದೇವರಿಗೆ ಅಂಜಿ ನಡೆಯುವ ಎಲ್ಲರಿಗೂ ಅದು ಆ ರೀತಿಯೇ ಇರಬೇಕು.

## ಕಾರ್ಯಕರ್ತನೊಬ್ಬನಿಗೆ

ಜೂನ್ ೧೫, ೧೯೩೨

(ತಮ್ಮ ಶರೀರದಮೇಲೆ ವಿಷಪೂರಿತ ಸರ್ಪವೊಂದು ಹರಿದುಹೋಗಲು ಬಾಪೂ ಅವಕಾಶವಿತ್ತರೆ, ಎಂದು ....ರು ಕೇಳಿದ ಪ್ರಶ್ನೆಗೆ ಹೀಗೆ ಉತ್ತರವಿತ್ತರು :)

ಅದು ಸತ್ಯವೂ ಹೌದು, ಅಸತ್ಯವೂ ಹೌದು. ಸರ್ಪವೊಂದು ನನ್ನ ಶರೀರದ ಮೇಲೆ ಹರಿದುಹೋಗುತ್ತಿತ್ತು, ಅಂಥ ಸಂದರ್ಭದಲ್ಲಿ ನಾನಾಗಲೀ ಬೇರೆ ಯಾರೇ ಆಗಲಿ ಸ್ತಬ್ಧವಾಗಿರದೆ ಮತ್ತೇನು ಮಾಡಲು ಸಾಧ್ಯ? ಇದಕ್ಕೆ ಶ್ಲಾಘನೆ ಅನಾವಶ್ಯಕ. ಅಲ್ಲದೆ ಆ ಸರ್ಪ ವಿಷಸರ್ಪವೋ ಹೇಗೋ ಬಲ್ಲವರಾರು? ಸಾವು ಒಂದು ಭೀಕರ ಘಟನೆಯಲ್ಲವೆಂಬ ಭಾವನೆಯನ್ನು ನಾನು ಬಹಳ ವರುಷಗಳಿಂದ ಪಾಲಿಸುತ್ತಿದೇನೆ. ಇದರಿಂದ ನನ್ನ ಅತ್ಯಂತ ಸಮೀಪ ಬಂಧುಗಳಾಗಲೀ, ಪ್ರೀತಿಪಾತ್ರರಾಗಲೀ ಕಾಲವಾದರೆ ಆ ಆಘಾತ ದಿಂದ ಬಹಳ ಜಾಗ್ರತೆ ಚೇತರಿಸಿಕೊಳ್ಳುತ್ತೇನೆ.

## ಛಗನ್‌ಲಾಲ್ ಜೋಷೀ ಅವರಿಗೆ

ಜೂನ್ ೧೭, ೧೯೩೨

(ಛಗನ್‌ಲಾಲ್ ಜೋಷೀ ಅವರಿಗೆ ಬರೆದ ಪತ್ರದಲ್ಲಿ ಬಾಪೂ ಅಪರಿಗ್ರಹದ ವಿಚಾರ ಕುರಿತು ಹೀಗೆ ಹೇಳಿದರು :)

ಪ್ರಕೃತಿ ಆ ಕಾಲದ ಅಗತ್ಯತೆ ಎಷ್ಟೋ ಅದಕ್ಕಿಂತ ಹೆಚ್ಚಾಗಿ ಉತ್ಪತ್ತಿ ಮಾಡುವುದಿಲ್ಲವೆಂದು ದಿನಕಳೆದಂತೆ ನನಗೆ ಅರಿವಾಗುತ್ತಿದೆ. ಅರಿತೋ ಅರಿಯದೆಯೋ ನಾವು ಈ ವಿಷಯವನ್ನು ಗಣನೆಗೆ ತಂದು ಕೊಳ್ಳಲು ವಿಫಲರಾಗಿದೇವೆ. ಈ ವಿಫಲತೆಯೇ ಜನ ಒಂದೆಡೆ ಅತಿಯಾಗಿ ಇನ್ನೊಂದೆಡೆ ಕೊರತೆಯಿಂದಲೂ ಇರುವ ಸಾಮಾನ್ಯ ದೃಶ್ಯಕ್ಕೆ ಕಾರಣ ವಾಗಿದೆ. ಸದ್ಯದ ಸ್ಥಿತಿ, ಎಂದರೆ, ಒಂದೆಡೆ ಹೊಟ್ಟೆಗಿಲ್ಲದ ಸ್ಥಿತಿ, ಇನ್ನೊಂದೆಡೆ ಅಮೇರಿಕದ ಸಂಯುಕ್ತ ಸಂಸ್ಥಾನಗಳಲ್ಲಿ, ಅತಿ ಹೆಚ್ಚಿನ ಉತ್ಪತ್ತಿಯ ಹೆಸರಿನಲ್ಲಿ ಗೋಧಿಯನ್ನು ಸುಟ್ಟುಹಾಕುತ್ತಿರುವ ಪರಿಸ್ಥಿತಿಗೂ ನಾವು ಒಂದು ಪರಿಹಾರವನ್ನು ಹುಡುಕುತ್ತಿದೇವೆ. ಸದ್ಯದಲ್ಲಿ ಪ್ರಕೃತಿ ನಿಯಮವನ್ನು ಪೂರ್ಣವಾಗಿ ಪಾಲಿಸುವುದು ಅಸಾಧ್ಯವಾದರೂ ಅದಕ್ಕಾಗಿ ನಾವು ಚಿಂತಿಸಬೇಕಾಗಿಲ್ಲ.

## ಕಾರ್ಯಕರ್ತನೊಬ್ಬನಿಗೆ

ಜೂನ್ ೧೭, ೧೯೩೨

(....ಗೆ ಬರೆದ ಪತ್ರವೊಂದರಿಂದ :)

ನೀನು ಆತ್ಮವಿಶ್ವಾಸವನ್ನು ಕಳೆದುಕೊಳ್ಳಬಾರದು. ದುಷ್ಟ ಭಾವನೆ ಗಳು ಮನಸ್ಸಿಗೆ ಬರಬಹುದು ; ಆದರೆ ಮನೆಯಲ್ಲಿ ಕೊಳೆ ಸೇರಿದ ಕೂಡಲೆ ಅದನ್ನು ತೆಗೆದು ಶುದ್ಧಮಾಡುವಂತೆ ಕಾಲಕಾಲಕ್ಕೆ ಮನಸ್ಸಿನಲ್ಲಿ ಬರುವ ದುಷ್ಟ ಭಾವನೆಗಳನ್ನು ನಾವು ತೆಗೆದು ಅದನ್ನು ಶುದ್ಧಮಾಡಬೇಕು. ಈ ಬಗೆಯ ಆತ್ಮಶುದ್ಧಿಯ ಕಾರ್ಯದಲ್ಲಿ ನಮಗೆ ವಿಜಯ ಖಚಿತ. ಈ ರೀತಿ ಸದಾ ಎಚ್ಚರಿಕೆಯಿಂದಿರುವಾತನನ್ನು ಮಿಥ್ಯಾಚಾರಿಯೆಂದು ಕರೆಯಲಾಗು ವುದಿಲ್ಲ. ಮಿಥ್ಯಾಚಾರದಿಂದ ಬಿಡುಗಡೆಹೊಂದುವ ಸುವರ್ಣನಿಯಮ ಈ ರೀತಿ ಇದೆ: ದುಷ್ಟ ಭಾವನೆಗಳನ್ನು ಮುಚ್ಚಿಟ್ಟುಕೊಳ್ಳದೆ ಅವನ್ನು ಬಹಿರಂಗವಾಗಿ ಒಪ್ಪಿಕೊ. ಇದನ್ನು ತಮಟೆ ಹೊಡೆದು ಸಾರಬೇಕಾಗಿಲ್ಲ. ಗೆಳೆಯನೊಬ್ಬನಲ್ಲಿ ಈ ತಪ್ಪನ್ನು ಹೊರಗೆಡಹಬೇಕು. ಇದು ಎಲ್ಲರಿಗೆ ಗೊತ್ತಾದರೂ ಚಿಂತೆಯಿಲ್ಲ. ವಿನೋಬನ ಮಾತುಗಳಲ್ಲಿ ನಂಬಿಕೆ ಇಡು, ನಿರಾಶೆಹೊಂದಬೇಡ.

(ರಾಜಕೀಯ ಬಂದಿಗಳನ್ನು ನಿಗಳಬಂಧನದಿಂದ ಸೆರೆಮನೆಯ ಹೊರಕ್ಕೆ ಕೆಲಸಕ್ಕೆ ಕರೆದುಕೊಂಡು ಹೋಗುವ ಬಗೆಗೆ ಸತ್ಯಾಗ್ರಹ ಮಾಡಬೇಕೆಂಬ ಸಲಹೆಯನ್ನು ಯಾರೋ ಒಬ್ಬರು ಮಾಡಿದ ಬಗೆಗೆ ಗಾಂಧೀಜೀ ಹೀಗೆ ಬರೆದರು :)

ಸೆರೆಯಾಳುಗಳ ನಡೆವಳಿ ಕುರಿತು ಏನೂ ಪ್ರಕಟನೆಗೆ ಹೋಗಬಾರದು. ಇದನ್ನು ಕುರಿತು ವಿವರ ಆವಶ್ಯಕ. ಆದರೆ, ಅದಕ್ಕೆ ಸೂಕ್ತ ಸಮಯ ಕಾಯಬೇಕು. ಸಾಮಾನ್ಯ ಬಂದಿಗಳ ಮತ್ತು ರಾಜಕೀಯ ಬಂದಿಗಳ ನಡುವೆ ವ್ಯತ್ಯಾಸ ಸಿಂಧುವಲ್ಲವೆಂದು ಇನ್ನೂ ನನ್ನ ನಂಬಿಕೆ. ಸೆರೆಮನೆಗಳ ಆಡಳಿತಸುಧಾರಣೆ ಬಹಳ ಅಗತ್ಯವಾಗಿದೆ. ಸೆರೆಮನೆ ತಪ್ಪನ್ನು ತಿದ್ದುವ ಸ್ಥಳವಾಗಿ ಇರಬೇಕೇ ಹೊರತು ಶಿಕ್ಷೆಯ ಸ್ಥಳವಾಗಿರಬಾರದು. ಹಾಗಿದ್ದರೆ, ಕಳ್ಳಕೈಬರಹ ಮಾಡಿದವನಿಗೆ ಸೆರೆಮನೆಯಲ್ಲಿ ಕಾಲಿಗೇಕೆ ಬಂಧನ? ಆ ಬಂಧನ ಅವನ ನಡತೆಯನ್ನು ಉತ್ತಮಪಡಿಸುವುದಿಲ್ಲ. ತಪ್ಪಿಸಿಕೊಳ್ಳಲು ಪ್ರಯತ್ನಿಸದ ಅಥವಾ ಹತೋಟಿ ಮೀರಿ ಹೋಗುವ ಪ್ರಸಂಗ ಕಂಡುಬರದಿರುವ ವ್ಯಕ್ತಿಗೆ ಸರಪಳಿ ಹಾಕುವುದು ನನಗೆ ಅಸಹ್ಯ ಎನಿಸುತ್ತದೆ. ಆದರೆ ಯಾವಾಗಲೂ ತಪ್ಪಿಸಿಕೊಳ್ಳಲು ಯತ್ನಿಸುವ ಮತ್ತು ತಮ್ಮ ನಾಲಗೆಯನ್ನೂ ಹಸ್ತಗಳನ್ನೂ ಹತೋಟಿಯಲ್ಲಿಟ್ಟು ಕೊಳ್ಳಲು ಅಶಕ್ತನಾದ ಮಲ್ಲಸಾಹಸದ ನಿಸ್ಸಂಘ ರಾಜಕೀಯ ಕೈದಿಯನ್ನು ಬೇಡಿ ಹಾಕಿ ಇಡುವುದು ಅಧಿಕಾರಿಗಳ ಕರ್ತವ್ಯವಾಗುತ್ತದೆ. ಒಂದೇ ತರದ ಎಲ್ಲ ಕೈದಿಗಳಿಗೂ ಕೊಡದಿರುವ ಸೌಲಭ್ಯಗಳನ್ನು ಸುಧಾರಕರಾದ ನಾವು ಬೇಕೆಂದು ಬಯಸುವುದು ನೈತಿಕದೃಷ್ಟಿಯಿಂದ ಸಮರ್ಥನೀಯವಲ್ಲ. ರಾಜಕೀಯ ಬಂದಿಗಳಿಗೆ ಗೋಧಿಯನ್ನೂ ಸಾಮಾನ್ಯ ಕೈದಿಗಳಿಗೆ ಜೋಳವನ್ನೂ ಕೊಡುವಂಥ ವ್ಯವಸ್ಥೆಯನ್ನು ನಾನು ಸಹಿಸಬಾರದು. ಒಬ್ಬ ಕೈದಿ ಕೊಲೆಗಾರನಾಗಿದ್ದರೂ ಅವನು ಜೋಳವನ್ನು ಅರಗಿಸಿಕೊಳ್ಳಲು ಅಶಕ್ತನಾಗಿದ್ದರೆ ಅವನಿಗೆ ಗೋಧಿರೊಟ್ಟಿ ಕೊಡಲ್ಪಡಬೇಕು. ಸೊಗಸಾಗಿ ಜೀರ್ಣಶಕ್ತಿಯನ್ನು ಹೊಂದಿರುವ ರಾಜಕೀಯ ಬಂದಿಯೊಬ್ಬ ಗೋಧಿಯನ್ನು ತ್ಯಜಿಸಿ, ಜೋಳವನ್ನು ಸೇವಿಸಿ, ತನ್ನ ಜೊತೆಕೈದಿಗಳಿಗೆ ರಕ್ಷಣೆ ನೀಡಬೇಕು. ಆದರೆ ಇವು ನನ್ನ ಅಭಿಪ್ರಾಯಗಳು ಮಾತ್ರ. ನಾನಿರುವೆಡೆ

ಯಿಂದ ಇವನ್ನು ಒತ್ತಾಯಪಡಬಾರದು. ಪ್ರತಿಯೊಬ್ಬನೂ ಅವನವನ ಅಂತರ್ಬೋಧೆಯಂತೆ ನಡೆದುಕೊಳ್ಳಲಿ.

## ಭಾವೂಗೆ

ಜೂನ್ ೧೮, ೧೯೩೨

(ಬಾಪೂ ಭಾವೂಗೆ ಒಂದು ಪತ್ರ ಬರೆದು ಧ್ಯಾನದ ವಿವರಗಳನ್ನು ಕೊಟ್ಟರು:)

ನೀನೇ ಮಾನಸಿಕವಾಗಿ ಒಂದು ಚಿತ್ರವನ್ನು ರಚಿಸಿ ಅದನ್ನು ಧ್ಯಾನಿಸಿದರೆ ಏನೂ ತಪ್ಪಿಲ್ಲ. ಆದರೆ ಗೀತಾಮಾತೆಯನ್ನು ಧ್ಯಾನಿಸುವುದರಿಂದ ತೃಪ್ತಿಪಡೆಯುವುದಕ್ಕಿಂತ ಉತ್ತಮವಾದುದು ಬೇರೆ ಇನ್ನೊಂದಿಲ್ಲ. ಗತಿಸಿದ ತಾಯಿಯನ್ನು ಗೀತೆಯ ಸಂಕೇತವೆಂದೋ ಅಥವಾ ಮಾನಸಿಕ ಕಲ್ಪನೆಯ ಚಿತ್ರವೊಂದನ್ನು ರಚಿಸಿ ಅದನ್ನೇ ಕುರಿತು ಧ್ಯಾನಿಸಬಹುದು. ಗೋಮಾತೆ ಇದಕ್ಕೆ ಒಂದು ಸಾಧನ. ಸಾಧ್ಯವಾದರೆ ಎರಡನೆಯದನ್ನೂ ಪ್ರಯತ್ನಿಸಬಹುದು. ಗೀತೆಯ ಯಾವುದಾದರೊಂದು ಶ್ಲೋಕವನ್ನೋ ಕಡೆಯ ಪಕ್ಷ ಒಂದು ಶಬ್ದವನ್ನೋ ಕುರಿತು ಧ್ಯಾನಮಾಡಬಹುದು. ಗೀತೆಯ ಒಂದೊಂದು ಶಬ್ದವೂ ಅದಕ್ಕೆ ಆಭರಣವಿದ್ದಂತೆ. ನಮಗೆ ಪ್ರಿಯವೆನಿಸಿದ ವಸ್ತುವೊಂದರ ಆಭರಣವನ್ನು ಕುರಿತು ಚಿಂತಿಸುವುದೂ ಆ ವಸ್ತುವಿನ ಬಗೆಗೆ ಧ್ಯಾನಿಸಿದಂತೆಯೇ ಆಗುತ್ತದೆ. ಬೇರೆಯವರು ಧ್ಯಾನದ ಮೂರನೆಯ ಪರಿಯೊಂದನ್ನು ಕಂಡುಕೊಂಡು ಅದರಂತೆಯೇ ಆಚರಿಸುವ ಸ್ವಾತಂತ್ರ್ಯ ಹೊಂದಬಹುದು. ಪ್ರತಿಯೊಂದು ಬುದ್ಧಿಯೂ ಇನ್ನೊಂದು ಬುದ್ಧಿಗಿಂತ ಪ್ರತ್ಯೇಕವಾಗಿ ವರ್ತಿಸುತ್ತದೆ. ಯಾವ ಇಬ್ಬರು ವ್ಯಕ್ತಿಗಳೂ ಒಂದೇ ವಿಷಯ ಕುರಿತು ಒಂದೇ ವಿಧಾನದಲ್ಲಿ ಯೋಚಿಸಲಾರರು. ಅವರು ಕೊಡುವ ವಿವರಣೆಗಳಲ್ಲಿಯೂ ಆಲೋಚನೆಗಳಲ್ಲಿಯೂ ಏನಾದರೂ ವ್ಯತ್ಯಾಸವಿದ್ದೇ ಇರುತ್ತದೆ.

ಹಿಂದಿನ ಜನ್ಮದಲ್ಲಿ ಎಸಗಿದ ಕಿಂಚಿತ್ ಸಾಧನವೂ ಮುಂದಿನ ಜನ್ಮಕ್ಕೆ ಆಧಾರ. ಒಬ್ಬ ವ್ಯಕ್ತಿಗೆ ಸಂಕಲ್ಪಮಾತ್ರವಿದ್ದು ಅಧ್ಯಾತ್ಮಪ್ರಗತಿಹೊಂದಲು ಶಕ್ತಿಯಿಲ್ಲವಾದರೆ, ಮುಂದಿನ ಜನ್ಮದಲ್ಲಿ ಆ ಸಂಕಲ್ಪವನ್ನು ದೃಢಗೊಳಿಸುವ ಸನ್ನಿವೇಶ ಲಭಿಸುತ್ತದೆ. ಆದರೆ ಈ ಅಂಶ ಈ ಜನ್ಮದಲ್ಲಿಯೇ ಪ್ರಯತ್ನ

ವನ್ನು ಕಡಮೆ ಮಾಡುವುದಕ್ಕೆ ನೆಪವಾಗಬಾರದು. ಆ ರೀತಿ ಆದರೆ, ಆ ಸಂಕಲ್ಪ ಕೇವಲ ಬೌದ್ಧಿಕವೆಂದೂ ಹೃದಯಸ್ಪರ್ಶಿಯಲ್ಲವೆಂದೂ ಅರ್ಥವಾಗುತ್ತದೆ. ಕೇವಲ ಬೌದ್ಧಿಕವಾದ ಸಂಕಲ್ಪ ಹೆಚ್ಚು ಪ್ರಯೋಜನಕಾರಿಯಾಗಲಾರದು, ಅದು ಸಾವಿನ ತರುವಾಯ ಇರಲಾರದು. ಸಂಕಲ್ಪ ಹೃದಯಸ್ಪರ್ಶಿಯಾದರೆ, ಅದು ಪ್ರಯತ್ನದಲ್ಲಿ ವ್ಯಕ್ತವಾಗಬೇಕು. ಆದರೆ ದೈಹಿಕ ಅಶಕ್ತಿಯೂ ಸನ್ನಿವೇಶವೂ ಅದಕ್ಕೆ ಅಡಚಣೆಯಾಗಬಹುದು. ಜೀವ ದೇಹವನ್ನು ಬಿಟ್ಟುಹೋದಾಗ ಅದು ಸತ್ಸಂಕಲ್ಪವನ್ನು ತನ್ನೊಂದಿಗೆ ತೆಗೆದುಕೊಂಡು ಹೋಗುತ್ತದೆ; ಮುಂದಿನ ಜನ್ಮದಲ್ಲಿ ಸನ್ನಿವೇಶ ಹೆಚ್ಚು ಅನುಕೂಲವಾದರೆ ಫಲಗೂಡುತ್ತದೆ. ಹೀಗೆ ಒಳ್ಳೆಯದನ್ನು ಮಾಡಿದವರು ನಿಧಾನವಾಗಿ ಪ್ರಗತಿಹೊಂದುವುದು ಖಂಡಿತ.

ಜ್ಞಾನೇಶ್ವರರು ತಮ್ಮ ಜೀವಮಾನಕಾಲದಲ್ಲಿ ನಿವೃತ್ತಿಯ ಬಗೆಗೆ ಧ್ಯಾನಿಸಿರಬಹುದು. ಆದರೆ ನಾವು ಅವರ ಪಥ ಅನುಸರಿಸಬಾರದು. ನಾವು ಯಾರನ್ನು ಕುರಿತು ಧ್ಯಾನಿಸುವೆವೋ ಅವರು ಪೂರ್ಣಪುರುಷರಾಗಿರಬೇಕು. ಜೀವಂತನಾಗಿರುವ ವ್ಯಕ್ತಿಯೊಬ್ಬನಿಗೆ ಅಂಥ ಪೂರ್ಣತೆಯನ್ನು ಹೇಳುವುದು ಯುಕ್ತವಲ್ಲ ಹಾಗೂ ಅಸಗತ್ಯ. ಅಲ್ಲದೆ ಜ್ಞಾನೇಶ್ವರರು ಅವರು ಇದ್ದ ರೀತಿಯಲ್ಲಿ ನಿವೃತ್ತಿಯನ್ನು ಕುರಿತು ಧ್ಯಾನಿಸದೆ ಅವರು ಕಲ್ಪಿಸಿಕೊಂಡ ಬಗೆ ಧ್ಯಾನಿಸಿರಬಹುದು. ನಮ್ಮಂಥ ವ್ಯಕ್ತಿಗಳಿಗಂತೂ ಆ ಸೂಕ್ಷ್ಮ ಪಥ ಸಲ್ಲದು. ನಾವು ಜೀವಂತ ವ್ಯಕ್ತಿಯೊಬ್ಬನನ್ನು ಕುರಿತು ಧ್ಯಾನಿಸುವ ಪ್ರಶ್ನೆಯನ್ನು ಎತ್ತಿದರೆ ಆತನ ಕಾಲ್ಪನಿಕ ರೂಪಕ್ಕೆ ಎಡೆಯೇ ಇಲ್ಲ. ಅಂಥ ಕಾಲ್ಪನಿಕ ರೂಪವನ್ನು ಮನಸ್ಸಿನಲ್ಲಿಟ್ಟುಕೊಂಡು ಪ್ರಶ್ನೆಗೆ ಉತ್ತರವೀಯುವುದಾದರೆ ಅದು ಪ್ರಶ್ನೆಕಾರನನ್ನು ಮಾನಸಿಕ ಗೊಂದಲಕ್ಕೆ ಈಡುಮಾಡಿದಂತಾಗುತ್ತದೆ.

ಗೀತೆಯ ಮೊದಲನೆಯ ಅಧ್ಯಾಯದಲ್ಲಿ ಬರುವ ನಾಮಗಳೆಲ್ಲ ಹೆಚ್ಚು ಗುಣಸೂಚಕವೇ ಹೊರತು ಅಂಕಿತನಾಮಗಳಲ್ಲವೆಂದು ನನ್ನ ಅಭಿಪ್ರಾಯ. ಕವಿ, ದೈವೀ ಸಂಪತ್ತಿಗೂ ಆಸುರೀ ಸಂಪತ್ತಿಗೂ ನಿರಂತರ ನಡೆವ ಹೋರಾಟವನ್ನು ಚಿತ್ರಿಸುವುದಕ್ಕೆ ಅವುಗಳನ್ನು ಮಹಾಭಾರತದ ಪಾತ್ರಗಳನ್ನಾಗಿ ರೂಪಿಸಿದಾನೆ. ಈ ರೀತಿ ಹೇಳಿದಾಗ ಹಸ್ತಿನಾಪುರದಲ್ಲಿ

ಪಾಂಡವರಿಗೂ ಮತ್ತು ಕೌರವರಿಗೂ ವಾಸ್ತವವಾದ ಹೋರಾಟವೊಂದು ನಡೆದುದನ್ನು ನಾನು ನಂಬಲು ನಿರಾಕರಿಸುವುದಿಲ್ಲ. ವಾಸ್ತವ ಪ್ರಸಂಗವೊಂದನ್ನು ಉಪಯೋಗಿಸಿಕೊಂಡು ಕವಿ ಅಂಥ ಸಂವಾದವನ್ನು ಕಟ್ಟಿರಬೇಕೆಂದು ನನ್ನ ಭಾವನೆ. ಇದು ತಪ್ಪಿರಬಹುದು. ಒಂದುವೇಳೆ ಎಲ್ಲ ಹೆಸರುಗಳೂ ನಿಜಚಾರಿತ್ರಿಕ ಪಾತ್ರಗಳಾದರೆ, ಚಾರಿತ್ರಿಕ ಆರಂಭವೊಂದರಲ್ಲಿ ಅವುಗಳ ಪಟ್ಟಿಯನ್ನು ಕವಿ ಕೊಟ್ಟಿರುವುದು ಅಯುಕ್ತವೇನಲ್ಲ. ಮೊದಲನೆಯ ಅಧ್ಯಾಯವು ಗೀತಾವಿಷಯದ ಮುಖ್ಯ ಭಾಗವಾದರೆ ಅದೂ ಗೀತಾಪಾಠದ ಭಾಗವಾಗಿ ಪಠಿಸಲ್ಪಡಬೇಕು.

ಬೇರೆಯವರು ತಯಾರಿಸಿದ ಬತ್ತಿ(ಹಂಜಿ)ಯಿಂದ ನೂಲುವುದು ನಿಜವಾಗಿಯೂ ಅಪೂರ್ಣ ಸೂತ್ರಯಜ್ಞವೆ. ನನ್ನಂತೆ ಶಾರೀರಕವಾಗಿ ಅಶಕ್ತರಾದವರು ಬತ್ತಿಯನ್ನು ಸ್ವತಃ ತಯಾರಿಸಿಕೊಳ್ಳಲು ಅಸಾಧ್ಯವಿರಬಹುದು. ಆದರೆ ಶಾರೀರಕವಾಗಿ ಸರಿಯಾಗಿರುವವರೆಲ್ಲರೂ ಸ್ವತಃ ಖಂಡಿತ ಬತ್ತಿಯನ್ನು ತಯಾರಿಸಿಕೊಳ್ಳಬೇಕು.

## ಮಥುರಾದಾಸನಿಗೆ

ಜೂನ್ ೧೮, ೧೯೩೨

(ನಾಸಿಕದಿಂದ ಮಥುರಾದಾಸ್ ದಾಂಪತ್ಯವಿಚ್ಛೇದ ಕುರಿತು ಪತ್ರ ಬರೆದು ಅದರಲ್ಲಿ ತಾವು ರಚಿಸಿರುವ ಒಂದು ನಾಟಕದ ವಿಷಯವಾಗಿಯೂ ಅದನ್ನು ಕಿಶೋರಲಾಲ್‌ಭಾಯೀ ಮೆಚ್ಚಿಕೊಂಡಿರುವುದಾಗಿಯೂ ತಿಳಿಸಿದಾರೆ. ಸಂತಾನನಿರೋಧದ ಆವಶ್ಯಕತೆಯನ್ನು ವಾದಿಸುವುದಕ್ಕಾಗಿ ಬ್ರಹ್ಮಚರ್ಯ ಎಲ್ಲರಿಗೂ ಸಾಧ್ಯವಿಲ್ಲ ಎನ್ನುತ್ತಾರೆ. ಮೃಗಗಳಿಗೂ ಮಾನವರಿಗೂ ಹೋಲಿಕೆ ಸಲ್ಲದು. ಮೃಗಗಳಾದರೋ ಬಯಸಿದಾಗ ಆ ಎಡೆಯಲ್ಲಿಯೇ ಕಾಮತೃಪ್ತಿಯನ್ನು ಹೊಂದುತ್ತವೆ. ಸಂತಾನ ನಿರೋಧವು ದುರುಪಯೋಗ ಮಾಡಲ್ಪಡುವುದೆಂಬ ಕಾರಣದಿಂದಲೇ ಕೆಟ್ಟುದಲ್ಲ. ಅವರಿಗೆ ಬಾಪೂ ಹೀಗೆ ಉತ್ತರ ಕೊಟ್ಟರು :)

ನೀನು ನಾಟಕವೊಂದನ್ನು ಬರೆಯುವೆಯೆಂದು ನಾನೆಂದೂ ಯೋಚಿಸಿರಲಿಲ್ಲ. ನೀನು ಅತ್ಯಾಧುನಿಕ ನಾಗರಿಕತೆ ಕಡೆಗೆ ಓಲುತ್ತಿದೀಯೆ. ಎಲ್ಲೋ ಸ್ಪಷ್ಟವಾದ ಪರಿಮಿತಿಯಲ್ಲಿ ವಿವಾಹವಿಚ್ಛೇದನಕ್ಕೆ ಅವಕಾಶವಿರಬೇಕೇ ವಿನಾ ಆದರ ಸಲುವಾಗಿಯೇ ಪ್ರಚಾರಕಾರ್ಯ ನಡೆಯಬೇಕೆಂಬುದನ್ನು

ನಾನು ಒಪ್ಪುವುದಿಲ್ಲ. ನಾವು ರೂಢಬದ್ಧ ಭಾವಗಳಿಗೆ ಎಷ್ಟು ದಾಸರಾಗಿದೇ ವೆಂದರೆ, ನಮ್ಮ ಇಂದಿನ ಮನೋವೃತ್ತಿ ನಾಳೆ ಇದ್ದೀತೆಂದು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಆದುದರಿಂದ ಸ್ವಯಂಪ್ರೇರಿತವಾಗಿ ನಡೆದ ವಿವಾಹ ಗಳು, ಪ್ರಬಲವಾದ ಕಾರಣಗಳ ಹೊರತು, ವಿಚ್ಛೇದಿತವಾಗಲು ಅವಕಾಶ ಇರಬಾರದು. ಉದಾಹರಣೆಗೆ, ಹರಿಜನರ ಬಗೆಗೆ 'ಬಾ' ನನ್ನ ಅಭಿಪ್ರಾಯ ಗಳನ್ನು ಸುಲಭವಾಗಿ ಒಪ್ಪಲಿಲ್ಲವೆಂಬ ಕಾರಣಕ್ಕಾಗಿ ನಾವು ವಿವಾಹ ವಿಚ್ಛೇದನ ಮಾಡಿಕೊಂಡಿದ್ದರೆ ಅದರ ದುಃಸ್ಥಿತಿಯನ್ನು ಕುರಿತು ಯೋಚಿಸಿ ನೋಡಿ. ಈಗ ನಾವು ಸುಖವಾಗಿರುವಂತೆ ಇರಲು ಸಾಧ್ಯವಿತ್ತೆ ? ಇಂದು 'ಬಾ' ಎಲ್ಲಿರುತ್ತಿದ್ದಳು ? ಎಂಥ ಬಗೆಯ ಎರಡನೆ ಹೆಂಡತಿಯನ್ನು ನಾನು ವಿವಾಹ ಮಾಡಿಕೊಳ್ಳುತ್ತಿದ್ದೆನೋ ? ಆದರೆ ವಿವಾಹಬಂಧನವು ವಿಚ್ಛೇದ್ಯ ವಲ್ಲವೆಂಬ ಸಾಂಪ್ರದಾಯಿಕ ಅಭಿಪ್ರಾಯದಿಂದ ನಾನು ಪ್ರಭಾವಿತನಾಗಿದ್ದೆ; ಹೀಗಾಗಿ ಆ ಪರೀಕ್ಷಾಕಾಲ ಬಂದುಹೋಯಿತು; ಈಗ ಅದೊಂದು ಕೇವಲ ನೆನಪು. ಆದುದರಿಂದ ನೀನು ನಿನ್ನ ನಾಟಕದಲ್ಲಿ ಸುಲಭವಾಗಿ ವಿಚ್ಛೇದನಕ್ಕೆ ಅವಕಾಶ ನೀಡುವುದಿಲ್ಲವೆಂದು ನಂಬಿದೇನೆ.

ಕಾಮೇಚ್ಛೆ ಜನಿಸಿದ ಕೂಡಲೇ ಅದನ್ನು ತೃಪ್ತಿಪಡಿಸಿಕೊಳ್ಳುವುದು ಮಾನವನ ಕರ್ತವ್ಯವೆನಿಸಿದರೆ ಸಂತಾನನಿರೋಧಕ್ಕೆ ಕೃತಕ ವಿಧಾನಗಳ ಆವಶ್ಯಕತೆಯನ್ನು ನಾನು ಅರ್ಥಮಾಡಿಕೊಂಡೇನು. ಆದರೆ ಸಂತಾನೇಚ್ಛೆ ಇಲ್ಲದಾಗ ಕಾಮೇಚ್ಛೆ ತೃಪ್ತಿಪಡಿಸಿಕೊಳ್ಳಲು ಯತ್ನಿಸುವುದು, ನಾನು ಪರಿಗಣಿಸುವಂತೆ, ಒಂದು ಪಾಪವೆಂದು ಪರಿಗಣಿಸುವುದಾದರೆ, ಕೃತಕ ವಿಧಾನದಲ್ಲಿ ಸಂತಾನನಿರೋಧ ಮಾಡುವುದು, ಆ ಪಾಪದ ಪ್ರತಿಫಲವನ್ನು ಸ್ವೀಕರಿಸಲು ಹಿಂಜರಿದಂತೆ ಆಗುತ್ತದೆ. ಬಿತ್ತಿದಂತೆ ಬೆಳೆ ಪಡೆಯಲು ಮಾನವ ಸಿದ್ಧವಿರಬೇಕು. ಅವನು ಕಾಮೇಚ್ಛೆಯನ್ನು ತೃಪ್ತಿಪಡಿಸು ವುದಾದರೆ, ಮಕ್ಕಳ ಹೊಣೆಯನ್ನೂ ಹೊರಲಿ. ಪಶ್ಚಿಮ ದೇಶಗಳಲ್ಲಿ ಈಚೆಗೆ ರೂಢಿಗೆ ಬಂದಿರುವ ಸಂತಾನನಿಗ್ರಹ ವಿಧಾನವು ವಿವಾಹವನ್ನು ಅಧೋಗತಿಗೆ ಇಳಿಸಿರುವುದಲ್ಲದೆ ಯಾವ ಅಂಕೆಯೂ ಇಲ್ಲದ ಕಾಮತೃಪ್ತಿಗೆ ಕಾರಣವಾಗಿದೆ. ಯೂರೋಪಿನಲ್ಲಿ ವಿಚಾರಪರರೆನಿಸಿಕೊಂಡವರು ವಿವಾಹ ವನ್ನು ಒಂದು ಮೂಢ ನಂಬಿಕೆ ಎಂಬುದಾಗಿ ಪರಿಗಣಿಸಿ, ವ್ಯಕ್ತಿಯೊಬ್ಬ

ತನ್ನ ಸೋದರಿಯೊಂದಿಗೆ ಅತಿಕ್ರಮಿಸಿ ವರ್ತಿಸಿದರೂ ಅದನ್ನು ಅನ್ಯಥಾ ಭಾವಿಸುವುದಿಲ್ಲ. ಇದು ಸಂತಾನನಿರೋಧ ಭಾವದ ಹಿಂಬದಿಯಲ್ಲಿರುವ ವಿಚಾರಪರಂಪರೆಯ ಅತಿರೇಕವನ್ನು ತೋರಿಸುತ್ತದೆ. ಮಾನವನಿಗೆ ಒಳ್ಳೆಯದೆಂದು ಪರಿಗಣಿಸಲ್ಪಟ್ಟಿರುವ ವಿವಾಹವು ನಿಜವಾಗಿಯೂ ಕೆಡುಕಾದುದೇ ಆಗಿರಬಹುದು. ಆದರೆ ವಾದಕ್ಕಾಗಿ ಇಂಥ ಸಾಧ್ಯತೆಯನ್ನು ಕೇವಲ ಒಪ್ಪಿಕೊಳ್ಳುವುದರಿಂದ ಆಚೆಗೆ ಹೋಗಲಾರೆ. ನೀತಿ ಮತ್ತು ವಿಜ್ಞಾನದ ಆಧಾರವೊಂದಿರುವ ಇಂಥ ಅಭಿಪ್ರಾಯಗಳು ನನಗೆ ಭೀಕರಪ್ರಾಯ. ಇವು ಮಿಥ್ಯಾಕರುಣೆ, ಸಹನಾಶೂನ್ಯತೆ ಮತ್ತು ವ್ಯಕ್ತಿಗಳ ಕ್ಷಣಿಕ ಅನುಭವ ಇವುಗಳಿಂದ ಜನ್ಯ. ನಾವು ಇವುಗಳಿಂದ ಕಲುಷಿತವಾಗದಿದ್ದರೆ ಸಾಕೆಂದು ನನ್ನ ಆಸೆ. ಭಾರತದಲ್ಲಿ ನಾವು ಇರುವ ಸ್ಥಿತಿಯಲ್ಲಿ ಸಂತಾನನಿರೋಧಕ್ಕೆ ಸ್ಥಾನವಿಲ್ಲ. ಕೋಟ್ಯಂತರ ಜನ ದೈಹಿಕವಾಗಿಯೂ ಮಾನಸಿಕವಾಗಿಯೂ ಅಶಕ್ತರಾಗಿದ್ದಾರೆ. ಕಾಮೇಚ್ಛೆಗೆ ಅಂಕೆಯಿಲ್ಲದೆ ಹೋದರೆ ಅದು ಪ್ರಗತಿಗೆ ಪ್ರಚಂಡ ಅಡ್ಡಿಯಾಗುತ್ತದೆ. ಕೃತಕ ಸಂತಾನನಿರೋಧ ಮಾರ್ಗವನ್ನು ಅನುಸರಿಸಿದವರು ನಿಜವಾಗಿಯೂ ನಿರ್ವೀರ್ಯರಾಗಿರುತ್ತಾರೆ. ವೃತ್ತಪತ್ರಿಕೆಗಳಲ್ಲಿ ಬರುವ ಪ್ರಕಟನೆಗಳನ್ನು ನೋಡಿ. 'ಇಂದ್ರಿಯನಿಗ್ರಹವೋ ಭೋಗಲಾಲಸೆಯೋ?'* ಎಂಬ ಪುಸ್ತಕದಲ್ಲಿ ಶೇಖರಿತವಾಗಿರುವ ಲೇಖನಗಳು, ನಿರ್ವೀರ್ಯರಾದ ವಿದ್ಯಾರ್ಥಿಗಳಿಂದಲೂ ಅಧ್ಯಾಪಕರುಗಳಿಂದಲೂ ಪ್ರತಿವಾರವೂ ನನಗೆ ಬರುತ್ತಿದ್ದ ಪತ್ರಗಳಿಗೆ ಉತ್ತರವಾಗಿ ಬರೆದವು. ಯುವಕರು ಹಿಂಸೆ ಎನಿಸಿದರೂ ಸಹಿಸಿಕೊಂಡು ಇಂದ್ರಿಯನಿಗ್ರಹದ ಪಾಠವನ್ನು ಕಲಿಯಬೇಕು. ಹೆಣ್ಣುಮಕ್ಕಳೂ ವಿಚಿತ್ರ ಸ್ಥಿತಿಯಲ್ಲಿದ್ದಾರೆ. ಆಶ್ರಮದಲ್ಲಿಯೇ ಹುಟ್ಟಿ ಬೆಳೆದ ಕೇವಲ ಅಶಕ್ತಳಾಗಿರುವ ಹದಿನೈದು ವರುಷದ ಹುಡುಗಿ.... ವಿವಾಹ ಮಾಡಿಕೊಳ್ಳಲು ಇಚ್ಛಿಸುವುದು ಎಂಥ ವಿಚಿತ್ರ ಸಂಗತಿ! ಅಂಥ ಚಿಕ್ಕ ವಯಸ್ಸಿನವರು ಕಾಮೋದ್ರೇಕದಿಂದ ತೊಳಲುವುದೇಕೆ? ಆದರೆ ಇಡೀ ದೇಶದ ವಾತಾವರಣವೇ ಕಲುಷಿತವಾಗಿದೆ. ಇಂದ್ರಿಯಲೋಲುಪತೆಯ ಭಾವನೆಗಳು

---

* ಗಾಂಧೀಜೀ ಬರೆದ ಲೇಖನಗಳ ಸಂಗ್ರಹ.

ಬಾಲ್ಯದಿಂದಲೂ ಬಾಲಕಬಾಲಕಿಯರ ಮೇಲೆ ಹೇರಲ್ಪಡುತ್ತವೆ. ಪಾಶವೀ ತೃಷ್ಣೆಗೆ ಬಲಿಯಾಗುವ ' ಕರ್ತವ್ಯವನ್ನು ' ನಾನಂತೂ ಖಂಡಿತ ಕಲಿಸಲಾರೆ.

## ತಾರೀಗೆ

ಜೂನ್ ೧೯, ೧೯೩೨

(ಇಂಗ್ಲೆಂಡಿನಲ್ಲಿ ನಮ್ಮ ಮಹಿಳಾ ಸಹಾಯಕರಲ್ಲಿ ಒಬ್ಬಾಕೆ ತಾರೀ ಸಾಯರ್. ಆಕೆ ಮೊದಲು ' ಕ್ಯಾನ್ಸರ್ ' ವ್ಯಾಧಿಯಿಂದ ನರಳಿದಳು, ಅನಂತರ ಕ್ಷಯರೋಗ ಪೀಡಿತಳಾದಳು. ಆದರೆ ಆಕೆಯಷ್ಟು ಹರ್ಷಭರಿತ ಮತ್ತು ಪ್ರತಿಭೆಯಿಂದ ಕೂಡಿದ ಹುಡುಗಿಯರನ್ನು ನಾನು ನೋಡಿರುವುದು ಅಪರೂಪ. ಆಕೆ ಬಹುಕಾಲ ಜೀವಿಸುವುದು ಅಸಂಭವವೆಂದೂ ಬಾಪೂ ಒಂದು ಪತ್ರ ಬರೆಯಬೇಕೆಂದೂ ಹೊರೇಸ್ ಅಲೆಗ್ಸಾಂಡರ್* ಸಲಹೆ ಇತ್ತರು. ಆದುದರಿಂದ ಬಾಪೂ ಆಕೆಗೆ ಹೀಗೆ ಬರೆದರು :)

ನನ್ನ ಪ್ರಿಯ ತಾರೀ,

ಪ್ರೊ. ಹೊರೇಸ್ ಅಲೆಗ್ಸಾಂಡರ್ ಅವರು ನೀನಿನ್ನೂ ಜೀವಂತಳಾಗಿದೀಯೆಂದೂ ಬಹಳ ಶಕ್ತಿಹೀನಳಾಗಿದೀಯೆಂದೂ ನನಗೆ ನೆನಪು ಮಾಡಿದಾರೆ. ಹೌದು, ನಾನು ನಿನ್ನನ್ನು ಪೂರ್ಣವಾಗಿ ನೆನಪು ಮಾಡಿಕೊಳ್ಳಬಲ್ಲೆ. ನೀನು ದೇಹದಲ್ಲಿ ಶಕ್ತಿಹೀನಳಿರಬಹುದು, ಆದರೆ ನಿನ್ನನ್ನು ನಾನು ಮೊದಲನೆಯ ಸಲ ನೋಡಿದಾಗಲೇ ನೀನು ಎಷ್ಟು ಗಟ್ಟಿಮನಸ್ಸಿನವಳೆಂಬುದನ್ನು ಅರಿತುಕೊಂಡೆ. ನಿನ್ನ ಸದ್ಯದ ಸ್ಥಿತಿಯಲ್ಲಿಯೂ ನಿನ್ನಿಂದ ಹೆಚ್ಚು ಸೇವೆಯನ್ನು ದೇವರು ಅಪೇಕ್ಷಿಸಿದರೆ, ಅವನು ಸಾಕಷ್ಟು ಶಾರೀರಕ ಶಕ್ತಿಯನ್ನು ನೀಡಿಯಾನು. ದೇವರನ್ನು ನಂಬಿದವರಿಗೆ ಬದುಕು–ಸಾವು ಎರಡೂ ಸಮವೇ. ಕೊನೆಯ ಉಸಿರು ಎಳೆಯುವವರೆಗೂ ಸೇವೆಸಲ್ಲಿಸುವುದೇ ನಮ್ಮ ಕರ್ತವ್ಯ. ನಿನಗೆ ಸಾಧ್ಯವಾದಾಗ ಬರೆ. ಮಹಾದೇವನ ಪ್ರೀತಿಯೊಂದಿಗೆ,

ನಿನ್ನ,

**ಬಾಪೂ**

---

* ಕ್ವೇಕರ್ ಕ್ರೈಸ್ತಪಂಥದವರು ; ಭಾರತದ ಮಿತ್ರರಲ್ಲೊಬ್ಬರು. ಬಾಪೂ ಮಾರ್ಗದಲ್ಲಿ ಅಗಾಧ ಶ್ರದ್ಧೆಯುಳ್ಳವರಾಗಿದ್ದರು.

## ಪಂಜೀಭಾಯೀಗೆ

(ಪಂಜೀಭಾಯೀ ಗಾಂಧೀಜೀಯನ್ನು ದೇವರ ಅವತಾರವೆಂದು ಭಾವಿಸಿದ್ದರು. ಆತನಿಗೆ ಹೀಗೆ ಬರೆದರು :)

ನೀನು ನಿಜವಾಗಿಯೂ ಚೆನ್ನಾಗಿ ಬರೆಯುತ್ತೀಯೆ. ನೀನು ಅತ್ಯಂತ ಉಪಯುಕ್ತ ಜೀವನ ನಡೆಸಿದೀಯೆ. ಯಾರು ತಮ್ಮ ಬಾಳಿನ ಕೊನೆಯು ಗಳಿಗೆಯವರೆಗೂ ಇತರರಿಗೆ ಸೇವೆಸಲ್ಲಿಸುತ್ತಾ ಹರ್ಷವನ್ನು ಕಾಣುವರೋ ಅವರು ಬಾಳಿನ ಉದ್ದೇಶವನ್ನು ನೆರವೇರಿಸಿಕೊಂಡಂತಾಗುತ್ತದೆ. ನೀನು ಪುನಃ ನಿದ್ರಾಭರಿತನಾದೆಯೆಂದು ನಾರಾಯಣದಾಸ್ ತಿಳಿಸುತ್ತಾನೆ. ಇದೇ ರೀತಿ ಮುಂದುವರಿದರೆ ಒಂದು ದಿನ ನೀನು ಎಂದೆಂದಿಗೂ ಎಚ್ಚರವಾಗದ ನಿದ್ರೆಯನ್ನು ಹೊಂದುವೆ. ನಿನಗೆ ಅಂಥ ನಿದ್ರೆ ಬರುವುದನ್ನು ನೀನು ಸ್ವಾಗತಿಸು.

## ಕಾರ್ಯಕರ್ತನೊಬ್ಬನಿಗೆ

(ಅತಿಯಾಗಿ ಧಾರ್ಮಿಕ ಗ್ರಂಥಗಳನ್ನು ಓದುವ ಮತ್ತು ಅತಿಯಾಗಿ ವಿಚಾರ ಮಾಡುವ ಯಾರೋ ಒಬ್ಬರಿಗೆ ಬಾಪೂ ಹೀಗೆ ಬರೆದರು :)

ಸದ್ಯಕ್ಕೆ ಗೀತೆಯನ್ನೂ ರಾಯಚಂದಭಾಯಿಯವರ ಪುಸ್ತಕಗಳನ್ನೂ ನೀನು ಓದುವುದನ್ನು ನಿಲ್ಲಿಸಬೇಕೆಂದು ನಾನು ಸಲಹೆ ಮಾಡಿದರೆ ನಿನಗೆ ಅಚ್ಚರಿ ಎನಿಸಬಹುದು. ಪ್ರಾರ್ಥನೆಯ ಭಾಗವಾಗಿ ಹಾಡುವ ಗೀತೆಗಳನ್ನೂ ಗೀತಾಭಾಗವನ್ನೂ ಕುರಿತು ಚಿಂತಿಸು. ಈ ಅಂಕೆ ನಿನಗೆ ಕಷ್ಟ ಎನಿಸಬಹುದು, ಆದರೆ ಆದರಿಂದ ಒಳಿತಾಗುವುದು ನಿನಗೇ ಗೊತ್ತಾಗುತ್ತದೆ. ಸದ್ಯಕ್ಕೆ ಓದುವುದೊಂದೇ ನಿನ್ನ ಹವ್ಯಾಸವಾಗಿರುವಂತೆ ಕಾಣುತ್ತದೆ, ಆದರೆ ನಿನಗೆ ವಿರಾಮ ದೊರೆತಾಗ ಯಾವುದಾದರೂ ಉಪಯುಕ್ತ ಕೆಲಸ ಮಾಡು. ಸುಮ್ಮನೆ ಹಗಲುಗನಸನ್ನು ಕಾಣುತ್ತಿರಬೇಡ. 'ಸಾಕು, ನನಗೊಂದು ಹೆಜ್ಜೆ' ಎಂಬುದರ ಅರ್ಥವೇ ಇದು. ಯಾವುವು ನಮಗೆ ಭಾರವಾಗಿ ಕಂಡುಬರುತ್ತವೋ ಅವನ್ನು ತ್ಯಜಿಸಬೇಕು. ಆದರೆ ನೀನು ವೃತ್ತಾಂತ ಪತ್ರಿಕೆಗಳನ್ನು ಓದಬಹುದು.

(ಕಾರ್ಯಕರ್ತನೊಬ್ಬನಿಗೆ ಬಾಪೂ ಹೀಗೆ ಬರೆದರು :)

ನಿನ್ನ ಕಾರ್ಯವನ್ನು ಒಂದು ವೈಜ್ಞಾನಿಕ ಪ್ರಯೋಗವೆಂದು ನಾನು ಭಾವಿಸಿದೇನೆ. ಆದುದರಿಂದ ನಾನು ನಿನ್ನನ್ನು ವೀಕ್ಷಿಸುತ್ತಿದೇನೆ; ನಿನ್ನ ಕಾರ್ಯದ ಪೂರ್ಣ ವಿವರವನ್ನು ತಿಳಿಯಲು ಅಪೇಕ್ಷಿಸಿದೇನೆ. ನೀನೊಬ್ಬ ಅನುಭವಹೊಂದಿದ ಕಾರ್ಯಕರ್ತ; ಇನ್ನೂ ಮುಂದೆ ಹೆಚ್ಚು ಕಷ್ಟಗಳನ್ನು ಅನುಭವಿಸಬೇಕಾಗಬಹುದು. ಎಲ್ಲ ಮಹಾಕಾರ್ಯಗಳ ಪರಿಯೂ ಹೀಗೆಯೇ; ಯಾವಾಗಲೋ ಒಂದು ಸಲ ಮಾರ್ಗ ಸುಲಭವಾಗಿದೆಯೆಂದು ವೇಗವಾಗಿ ಪ್ರಗತಿ ಸಾಧಿಸಲು ಸಾಧ್ಯವೆಂದೂ ನಮಗೆ ಅನಿಸುತ್ತದೆ. ಆಗ ನಾವು ಏನೋ ಸ್ವಲ್ಪ ಸಾಧಿಸುತ್ತೇವೆ, ಆದರೆ, ಇದ್ದಕ್ಕಿದ್ದಂತೆ ನಮ್ಮ ಮುಂದೆ ಒಂದು ಮಹಾ ಕಮರಿ ಭಾಸವಾಗುತ್ತದೆ. ಆದುದರಿಂದ ನೀನು ಅಲ್ಲಿಯೇ ಶಾಶ್ವತವಾಗಿ ನೆಲೆಸಬೇಕು. ಅನಂತಶಾಂತಿಯೂ ಅದರ ಆಧಾರವಾಗಿ ಆತ್ಮವಿಶ್ವಾಸವೂ ಇರುವುದೊಂದೇ ಅಗತ್ಯ. ಹಿಡಿದ ಕಾರ್ಯದಲ್ಲಿ ಅವಿಚಲ ನಂಬಿಕೆ ಇರುವುದೇ ಆತ್ಮವಿಶ್ವಾಸ. ಒಮ್ಮೆ ಈ ವಿಶ್ವಾಸ ನಮಗೆ ಲಭಿಸಿದರೆ, ಆಗಾಗ್ಗೆ ನಮಗೆ ಅರಿವಿಲ್ಲದಂತೆ ನಾವು ಎಸಗಬಹುದಾದ ಅಸಂಖ್ಯ ತಪ್ಪುಗಳ ಬಗೆಗೆ ಕಳವಳಪಡಬೇಕಾದ ಕಾರಣವಿಲ್ಲ. ನಾವು ಬಹುಶಃ ತಪ್ಪು ಮಾರ್ಗದಲ್ಲಿದೇವೋ ಎಂಬ ಭೀತಿಯಿಂದ ಅಧೀರರಾಗಲು ಅವಕಾಶವೀಯಬಾರದು. ನಾನು ನಿನ್ನ ಪ್ರಯೋಗವನ್ನು ವೈಜ್ಞಾನಿಕ ಎಂದು ಪರಿಭಾವಿಸುತ್ತೇನೆ. ಅದು ಈಗ ಪೂರ್ಣ ವೈಜ್ಞಾನಿಕವಲ್ಲ; ಆದರೆ ಅದನ್ನು ಮುಂದುವರಿಸುವ ತಾಳ್ಮೆ ನಿನಗೆ ಇದೆ. ಹಿಂದೆ ನಿನ್ನಲ್ಲಿ ಒಂದು ನ್ಯೂನತೆಯನ್ನು ಕಂಡಿದ್ದೆ; ಈಗ ನೀನು ಅದನ್ನು ಬುದ್ಧಿವಂತಿಕೆಯಿಂದ ಪರಿಹರಿಸಿಕೊಂಡಿದೀಯೆಂದು ನಂಬಿದೇನೆ; ಅಥವಾ, ನಿನ್ನ ಸತ್ಯನಿಷ್ಠೆ ನಿನಗೆ ಅರಿವಿಲ್ಲದಂತೆಯೇ ಅದನ್ನು ಪರಿಹರಿಸಿಕೊಂಡಿದೀಯೋ? ಆ ನ್ಯೂನತೆ ಹೀಗಿತ್ತು : 'ನೀನು ಅಪೂರ್ಣ ಅಂಶಗಳಿಂದಲೇ ತೃಪ್ತನಾಗಿ ಅವರಿಂದಲೇ ತೀರ್ಮಾನಗಳನ್ನು ಮಾಡುತ್ತಿದ್ದೆ. ಆದರೆ ಈಗ ಆ ರೀತಿ ಇಲ್ಲ. ವೈಜ್ಞಾನಿಕ ಪ್ರಯೋಗಕಾರ ತನ್ನಲ್ಲಿ ಗಾಢನಂಬಿಕೆಯುಳ್ಳವನಾಗಿ ಇರುತ್ತಾನೆ; ಎಂದಿಗೂ ನಿರಾಶೆಹೊಂದುವುದಿಲ್ಲ. ಅಲ್ಲದೆ, ಆತ ತನ್ನ ಸಾಧನೆಗಳಿಂದ ಎಂದಿಗೂ ತೃಪ್ತನಾಗದಷ್ಟು ನಮ್ರತೆಯಿಂದ ಕೂಡಿರು

ತ್ತಾನೆ. ಆತುರದಿಂದ ತೀರ್ಮಾನಗಳನ್ನು ಮಾಡುವ ತಪ್ಪೆಸಗುವುದಿಲ್ಲ. ಇದಕ್ಕೆ ಪ್ರತಿಯಾಗಿ ಆತ ಯಾವಾಗಲೂ ತನ್ನ ಪ್ರಗತಿಯನ್ನು ಅಳತೆ ಮಾಡಿಕೊಂಡು, ಇಂಥ ಕಾರ್ಯದ ಪರಿಣಾಮ ಇಂಥದೇ ಆಗುವುದೆಂದು ಸ್ಪಷ್ಟವಾಗಿ ಘೋಷಿಸುತ್ತಾನೆ. ಸಾಮಾನ್ಯವಾಗಿ, ಇತರ ಕಾರ್ಯಕರ್ತರು ಈ ಬಗೆಯ ನಿಜ ವೈಜ್ಞಾನಿಕನ ನಮ್ರತೆಯನ್ನು ಹೊಂದಿರುವುದಿಲ್ಲ. ನೀನೂ ಈ ನಿಯಮಕ್ಕೆ ಅಪವಾದವಲ್ಲವೆಂದು ಕಂಡುಬಂದಾಗ ನಾನೇನು ಆಶ್ಚರಿಪಡಲಿಲ್ಲ. ಆದರೆ ನೀನು ಕಾರ್ಯವು ಕೊನೆಮುಟ್ಟುವವರೆಗೂ ತಾಳ್ಮೆಯಿಂದಿರುವೆಯೆಂಬ ಭರವಸೆ ನನಗೆ ಇದೆ. ಆದುದರಿಂದಲೇ ಎಷ್ಟೋ ವರುಷಗಳ ಹಿಂದೆ ನಿನ್ನಲ್ಲಿ ಕಂಡುಬಂದ ಈ ನ್ಯೂನತೆಯ ಬಗೆಗೆ ನಿನ್ನ ಗಮನವನ್ನು ಸೌಮ್ಯವಾಗಿ ಸೆಳೆದಿದೇನೆ. ಅವರನ್ನು (ಕಾರ್ಯಕರ್ತರನ್ನು) ಆಕರ್ಷಿಸಲು ಔದಾರ್ಯದಿಂದ ಜನಿಸಿದ ತಾಳ್ಮೆಯನ್ನು ನೀನು ಅಭ್ಯಸಿಸ ಬೇಕು. ಸಹಕಾರ್ಯಕರ್ತರು ನಾವು ಮಾಡುವ ಎಲ್ಲ ಕಾರ್ಯಗಳನ್ನೂ ಅವರು ಮಾಡಬೇಕೆಂದು ಅಪೇಕ್ಷಿಸುವ ಎಲ್ಲ ಕಾರ್ಯಗಳನ್ನೂ ಮಾಡ ಲಾರರು. ಆದರೆ ಅವರು ಸದ್ಭಾವದಿಂದಲೂ ಕ್ರಿಯಾಶೀಲತೆಯಿಂದಲೂ ಕೂಡಿದ್ದರೆ ಅವರ ನೆರವನ್ನು ನಾವು ಕಡೆಗಣಿಸಬಾರದು. ಈ ವಿಧಾನದಿಂದ ನಾವು ಒಂದು ಕಾರ್ಯಕರ್ತರ ತಂಡವನ್ನು ಕಟ್ಟಲು ಸಾಧ್ಯವಾದೀತು. ಇಂಥ ವಿಶಾಲಮನೋವೃತ್ತಿ ಇಲ್ಲದಿದ್ದರೆ ನಮ್ಮಂಥ ಕೆಲವರು ಕೇವಲ ಒಂಟಿಯಾಗಿಯೇ ಸಾಗಬೇಕು.

ನಿನ್ನ ಕೆಲಸದ ಬಗೆಗೆ ಇನ್ನೊಂದು ವಿಚಾರ. ಬೇರೆ ಮಾರ್ಗಗಳಲ್ಲಿ ಕೆಲಸಮಾಡುವವರಿಂದಲೂ ನೀನು ಸಲಹೆ ಸ್ವೀಕರಿಸಲು ಆಕಾಂಕ್ಷೆಯನ್ನು ಬೆಳೆಸಿಕೊಳ್ಳಬೇಕು. ವೈಜ್ಞಾನಿಕ ಪ್ರಯೋಗವು ಒಂದೇ ಮಾರ್ಗದಲ್ಲಿ ನಡೆಯಲು ಸಾಧ್ಯವೆಂದು ಭಾವಿಸುವುದು ತಪ್ಪು; ಅಂಥ ತಪ್ಪಿಗೆ ಗುರಿ ಯಾದವರು ಬಹಳ ನಷ್ಟ ಹೊಂದುತ್ತಾರೆ. ನಮಗೆ ಸರಿಯೋ ಅಥವಾ ಪೂರ್ಣವೋ ಎಂದು ಭಾವಿಸಿದ ಬಗೆಗೆ ಅದನ್ನು ಅನುಸರಿಸಬಹುದು; ಇತರರು ಅದರಲ್ಲಿ ಪೂರ್ಣತೆಯನ್ನು ಕಾಣದೆ, ನ್ಯೂನತೆಗಳನ್ನು ಕಂಡರೆ ಅವರನ್ನು ಅವರ ಮಾರ್ಗಕ್ಕೆ ಬಿಡಬೇಕು. ಇದರಿಂದ ನಮ್ಮ ಪರಿಗ್ರಹಣ ಶಕ್ತಿ ವೃದ್ಧಿಯಾಗುತ್ತದೆ.

ಸದ್ಯದ ನಿನ್ನ ಕಾರ್ಯವಿಧಾನದ ಬಗೆಗೆ ನಾನು ಏನನ್ನೂ ಹೇಳಲಾರೆ. ನಿನ್ನ ವಿಷಯದಲ್ಲಿ ನಾನು ಪಕ್ಷಭಾವದಿಂದ ಕೂಡಿರುವುದರಿಂದ ಇಲ್ಲಿಂದ ಎಲ್ಲ ಸರಿಯಾಗಿ ಕಾಣುತ್ತದೆ. ಆದರೆ ನಾನು ನಿನ್ನ ಕಾರ್ಯವನ್ನು ಪ್ರತ್ಯಕ್ಷ ಕಂಡರೆ ನನಗೆ ಅನೇಕ ಅಂಶಗಳು ಹೊಳೆಯಬಹುದು; ಅವುಗಳನ್ನೆಲ್ಲ ನಿನ್ನ ಪರಿಶೀಲನೆಗೆ ತಿಳಿಸಬಹುದು. ಇಷ್ಟು ದೂರದಿಂದ ನಾನು ನಿನ್ನ ಕಾರ್ಯವನ್ನು ಸರಿಯಾಗಿ ಚಿತ್ರಿಸಿಕೊಳ್ಳಲಾರೆ; ಆದುದರಿಂದ ಯಾವ ಸಲಹೆಯನ್ನೂ ನೀಡುವುದು ಅಯುಕ್ತವೆನಿಸೀತು.

## ರಹಿಯಾನಾಗೆ*

ಜೂನ್ ೨೦, ೧೯೩೨

(ರಹಿಯಾನಾಗೆ ಆರೋಗ್ಯ ಚೆನ್ನಾಗಿಲ್ಲ. ಅವಳಿಗೆ ಬಾಪೂ ಹೀಗೆ ಬರೆದರು :)

ಆರೋಗ್ಯದಿಂದ ಇರುವುದು ಒಳ್ಳೆಯದೋ, ಅನಾರೋಗ್ಯದಿಂದ ಇರುವುದು ಒಳ್ಳೆಯದೋ ಯಾರು ಹೇಳಬಲ್ಲರು? ನೀನು ನಳದಮಯಂತಿಯರ ಕತೆಯನ್ನು ಕೇಳಿರಬೇಕು. ನಳ ಒಳ್ಳೆ ಸ್ಫುರದ್ರೂಪಿಯಾಗಿದ್ದನು; ದೇವರು ಅವನನ್ನು ರಕ್ಷಿಸುವುದಕ್ಕಾಗಿ ಕಾರ್ಕೋಟಕನೆಂಬ ಸರ್ಪಕ್ಕೆ ಆಜ್ಞೆಮಾಡಿ ಅವನನ್ನು ಕಚ್ಚಿಸಿದನು. ಸರ್ಪ ನಳನನ್ನು ಕಚ್ಚಿದಾಗ ಅವನಿಗೆ ಬಹಳ ವ್ಯಥೆಯಾಯಿತು. ಆದರೆ ಸರ್ಪ ಅವನನ್ನು ಕಚ್ಚಿದುದು ಭಗವಂತನ ಕೃಪೆಯೆಂದು ಅನಂತರ ಅರಿವಾಯಿತು. ನಿನ್ನ ಸ್ಥಿತಿಯೂ ಹೀಗೆಯೇ ಇದೆ ಎಂದು ಭಾವಿಸುತ್ತೇನೆ. ಆದುದರಿಂದ ಅಗತ್ಯವಾದ ಎಲ್ಲ ಚಿಕಿತ್ಸೆಯನ್ನೂ ಮಾಡಿಸಿಕೊ; ಆದರೆ ಆರೋಗ್ಯವೋ ಅನಾರೋಗ್ಯವೋ ಎಂದು ಎಂದಿಗೂ ಚಿಂತಿಸಬೇಡ. ಎಲ್ಲ ಪರಿಸ್ಥಿತಿಗಳಲ್ಲಿಯೂ ಹಾಡುತ್ತ ನಲಿದಾಡು. ಈ ಉಪನ್ಯಾಸ ಇಷ್ಟಕ್ಕೆ ಸಾಕೆನಿಸುತ್ತದೆ. ಏನೇ ಸಂಭವಿಸಲಿ, ಹಸನ್ಮುಖಿಯಾಗಿರು. ನಿನ್ನ ಸರ್ವಸ್ವವನ್ನೂ ಭಗವಂತನ ಪಾದಾರವಿಂದದಲ್ಲಿ ಸಮರ್ಪಿಸಿದರೆ ಆಗ ನಿನ್ನ ದೇಹವೂ ಅವನದೇ ಹೊರತು ನಿನ್ನದಲ್ಲ. ರೋಗ ಅವನನ್ನು ಬಾಧಿಸುವುದೇ ಹೊರತು ನಿನ್ನನ್ನಲ್ಲ. ಆದುದರಿಂದ

* ರಹಿಯಾನಾ ತೈಯಬ್ಜೀ—ಅಬ್ಬಾಸ್ ತೈಯಬ್ಜೀಯವರ ಮಗಳು.

ವ್ಯಥೆಪಡಲು ಅವಕಾಶವೆಲ್ಲಿಂದ ಬಂತು? ನೀನು ಗುಜರಾತಿ ಲಿಪಿಯಲ್ಲಿ ನನಗಾಗಿ ಬರೆದು ಕಳಿಸಿರುವ ಉರ್ದು ಕವನವನ್ನು ಅರ್ಥಮಾಡಿಕೊಳ್ಳಲು ನನಗೆ ಪ್ರಯಾಸವಾಗುತ್ತದೆ. ನಾನು ಜಾಣ ವಿದ್ಯಾರ್ಥಿಯೆಂದು ನೀನು ಭಾವಿಸಿದೀಯೇನೋ, ಆದರೆ ಜಾಗ್ರತೆ ನಿನ್ನ ಭ್ರಮೆ ನಿರಸನವಾಗುತ್ತದೆ. ನಾನು ಜಾಣನಾಗಿದ್ದರೆ ಅಧ್ಯಾಪಕರೊಬ್ಬರನ್ನು ಹುಡುಕುತ್ತಲೇ ಇರಲಿಲ್ಲ, ಅವರಲ್ಲಿ ಎಲ್ಲರನ್ನೂ ಬಿಟ್ಟು ನಿನ್ನನ್ನೇ. ಏನೂ ಚಿಂತಿಸಬೇಡ. ನಾನೂ ನಿನ್ನಷ್ಟೇ ದಡ್ಡ; ಅಥವಾ ನೀನೂ ನನ್ನಷ್ಟೇ ದಡ್ಡಳು. ನೀನು ನನ್ನನ್ನು ವಿದ್ಯಾರ್ಥಿಯೆಂದು ಆರಿಸಿಕೊಂಡಿದೀಯೋ ಅಥವಾ ನಾನು ನಿನ್ನನ್ನು ಅಧ್ಯಾಪಕಿಯೆಂದು ಆರಿಸಿಕೊಂಡಿದೇನೋ—ಹೇಳಬಲ್ಲವರಾರು?

## ಹನುಮಾನ್ ಪ್ರಸಾದ್ ಪೋದ್ದಾರರಿಗೆ

ಜೂನ್ ೨೧, ೧೯೩೨

(ಹನುಮಾನ್ ಪ್ರಸಾದ್ ಪೋದ್ದಾರರು ಗಾಂಧೀಜೀಗೆ ಒಂದು ಪತ್ರ ಬರೆದು ತಾವು ಕೇಳಿದ ಪ್ರಶ್ನೆಯ ಉತ್ತರವನ್ನು 'ಕಲ್ಯಾಣ' ಪತ್ರಿಕೆಯಲ್ಲಿ ಪ್ರಕಟಿಸುವ ಉದ್ದೇಶದಿಂದ ಕೂಡಿದ್ದರೆಂದು ತಿಳಿಸಿದ್ದರು. ಅವರಿಗೆ ಬಾಪೂ ಈ ಪತ್ರವನ್ನು ಬರೆದಿದ್ದರು :)

ಯಾರಾದರೊಬ್ಬ ವ್ಯಕ್ತಿ ನನ್ನ ಗಮನದಲ್ಲಿದ್ದರೆ ಆಧ್ಯಾತ್ಮಿಕ ಸಮಸ್ಯೆಗಳಿಗೆ ಉತ್ತರವೀಯುವುದು ನನಗೆ ಸುಲಭ. ಆದರೆ ಪತ್ರಿಕೆಗಾಗಿ ಬರೆಯುವುದು ಕಷ್ಟಕರ. ನೀವು ಕೇಳಿದ ಪ್ರಶ್ನೆಗಳು ಪತ್ರಿಕೆಗಳಲ್ಲಿ ಪ್ರಕಟಿಸುವ ಉದ್ದೇಶದಿಂದ ಕೂಡಿತ್ತೆಂದು ಈಗ ನನಗೆ ಅರಿವಾಗಿರುವುದರಿಂದ, ಈ ಅರಿವು ನನ್ನ ಬುದ್ಧಿಯನ್ನು ಕುಂಠಿಸಿದೆ. ಪತ್ರಿಕೆಗಾಗಿ ಬರೆದ ವಿಷಯ ಜನತೆಗೆ ಸ್ವಲ್ಪವಾದರೂ ಉಪಕಾರ ಮಾಡುವುದಿಲ್ಲ ಎಂದಲ್ಲ. ನಾನು ನನ್ನ ಮಾನಸಿಕ ಪ್ರವೃತ್ತಿಯ ಅಭಿಪ್ರಾಯಗಳನ್ನು ಮಾತ್ರ ತಿಳಿಸುತ್ತಿದೇನೆ. ನಾನು ಇದೇ ರೀತಿ 'ಯಂಗ್ ಇಂಡಿಯಾ' ಪತ್ರಿಕೆಗೆ ಆಗಾಗ ಬರೆದಿದೇನೆ. ಆದರೆ ಆ ಪತ್ರಿಕೆ ನನಗೆ ವೃತ್ತಾಂತ ಪತ್ರಿಕೆಯಾಗಿರಲಿಲ್ಲ, ಗೆಳೆಯರಿಗೆ ಪ್ರತಿವಾರವೂ ಬರೆಯುವ ಒಂದು

ಓಲೆಯುಂತಿತ್ತು. 'ಯಂಗ್ ಇಂಡಿಯಾ' ಅಥವಾ 'ನವಜೀವನ' ಪತ್ರಿಕೆಗಳಲ್ಲಿ ಚರ್ಚಿತವಾದ ಯಾವುದೇ ಆಧ್ಯಾತ್ಮಿಕ ವಿಷಯವೇ ಆದರೂ ಅದು ಯಾರಾದರೂ ಒಬ್ಬ ವ್ಯಕ್ತಿಯನ್ನೇ ಕುರಿತುದಾಗಿರುತ್ತಿತ್ತು. ಇದಕ್ಕೆ ಒಂದು ಕಾರಣವೂ ಇದೆ. ನಾನು ಶಾಸ್ತ್ರಗಳ ಅಧ್ಯಯನ ಮಾಡಿದವನಲ್ಲ; ನಾನು ನನ್ನ ಬುದ್ಧಿಯನ್ನು ಉಪಯೋಗಿಸುತ್ತೇನೆ; ಆದರೆ ನಾನು ನುಡಿವುದಾಗಲೀ ಬರೆವುದಾಗಲೀ ನನ್ನ ಹೃದಯಾಂತರಾಳದಿಂದ ಹೊಮ್ಮಿ ಬರುವುದೇ ಹೊರತು ನನ್ನ ಬುದ್ಧಿಯಿಂದಲ್ಲ. ಆದರೆ ಹೃದಯವು ಒಂದು ಪ್ರಬಂಧವನ್ನು ರಚಿಸಲು ಅಸಮರ್ಥವಾದುದು.

## ಮ್ಯೂರಿಯಲ್ ಲೆಸ್ಟರ್* ಅವರಿಗೆ

(ಮ್ಯೂರಿಯಲ್ ಲೆಸ್ಟರ್ ಅವರ ಸಹಕಾರ್ಯಕರ್ತರೊಬ್ಬರು ಸುಂದರ ವಸ್ತುಗಳನ್ನು ವೀಕ್ಷಿಸಲು ಮತ್ತು ಅನುಭವಿಸಲು ನಾವೇಕೆ ಬಯಸುತ್ತೇವೆಂಬ ಪ್ರಶ್ನೆ ಒಂದನ್ನು ಕೇಳಿದರು. ಅದಕ್ಕೆ ಇದು ಬಾಪೂ ಕೊಟ್ಟ ಉತ್ತರ:)

ಸುಂದರ ವಸ್ತುಗಳನ್ನು ಬಯಸುವುದು ಪೂರ್ಣ ಸಹಜವಾದುದು. ಆದರೆ ಇದೇ ಸರ್ವ ಶ್ರೇಷ್ಠ ಸೌಂದರ್ಯವೆನ್ನಲು ಯಾವುದೂ ಅಳತೆ ಇಲ್ಲ. ಆದುದರಿಂದ ಈ ಬಯಕೆ ತೃಪ್ತಿಯಾಗದೆಂದು ನನ್ನ ಭಾವನೆ. ಆದರೆ ಬಾಹ್ಯ ವಸ್ತುಗಳ ಬಯಕೆಗಿಂತ ಅಂತರಂಗದ ಸೌಂದರ್ಯವನ್ನು ನೋಡಲು ನಾವು ಕಲಿಯಬೇಕು. ಇದನ್ನು ನಾವು ಮಾಡಿದರೆ, ನಮಗೆ ಸೌಂದರ್ಯದ ದೃಶ್ಯರಾಶಿಯೇ ತೆರೆದಂತಾಗುತ್ತದೆ; ಆಗ ನಾವೇ ಅದನ್ನು ಹೊಂದಬೇಕೆಂಬ ಆಸೆ ಮಾಯವಾಗುತ್ತದೆ. ಇದನ್ನು ನಾನು ಸ್ಥೂಲವಾಗಿ ವಿವರಿಸಿದೇನೆ, ಆದರೆ, ನನ್ನ ಅರ್ಥ ನಿನಗೆ ಅರಿವಾಗಬಹುದು.

* ಬ್ರಿಟನ್ನಿನ ಸುಪ್ರಸಿದ್ಧ ಸಮಾಜಸೇವಾಕಾರ್ಯಕರ್ತೆ. ಗಾಂಧೀಜೀ ಚಕ್ರಗೋಷ್ಠಿಗೆ ಹೋಗಿದ್ದಾಗ ಈಕೆಯ ಅತಿಥಿಯಾಗಿದ್ದರು.

## ದೇವದಾಸನಿಗೆ

ಜೂನ್ ೨೩, ೧೯೩೨

(ದೇವದಾಸನಿಗೆ ಬಾಪೂ ಒಂದು ಪತ್ರ ಬರೆದು, ಅದರಲ್ಲಿ ಹರಿಲಾಲನ ಪೂರ್ವೋತ್ತರ ಕುರಿತು ಹೇಳುತ್ತಾ ಹೀಗೆ ಬರೆದರು :)

ಈ ಪ್ರಪಂಚದಲ್ಲಿ ಇಂಥ ದಯನೀಯ ವ್ಯಕ್ತಿಗಳು ಇನ್ನೂ ಎಷ್ಟೋ ಇದಾರೆ. ಹರಿಲಾಲನ ಬಗೆಗೆ ನಾನು ವ್ಯಥೆಪಡುವಂತೆ ಅವರ ಬಗೆಗೂ ವ್ಯಥೆಪಡಬಾರದೆ? ಅವರೆಲ್ಲ ತಮ್ಮ ತಮ್ಮ ಅರಿವಿನಂತೆ ವರ್ತಿಸುತ್ತಾರೆ, ಆದರೆ ನಾವು ನಮ್ಮ ಆತ್ಮಕ್ಕೆ ಸತ್ಯವಾಗಿ ನಡೆದರೆ ಅವರೂ ಕೊನೆಗೆ ಸರಿಹೋದಾರು. ಹರಿಲಾಲನ ಸದ್ಯದ ದುಃಸ್ಥಿತಿಗೆ ನಾನೇ ಬಹುಮಟ್ಟಿಗೆ ಕಾರಣವೆಂದು ಭಾವಿಸುತ್ತೇನೆ. ಅವನು ಜನಿಸುವುದಕ್ಕೆ ಮುಂಚೆ ನಾನು ತಮೋಭರಿತನಾಗಿದ್ದೆ, ಅವನು ಮಗುವಾಗಿದ್ದಾಗ ಅತಿ ಕಾಮುಕನಾಗಿದ್ದೆ. ಕುಡಿತದ ಒಂದು ಅಭ್ಯಾಸ ಮಾತ್ರ ನನಗೆ ಇರಲಿಲ್ಲ; ಆ ನ್ಯೂನತೆಯನ್ನು ಅವನು ಈಗ ತುಂಬಿಕೊಟ್ಟಿದಾನೆ. ನಾನು ಓರ್ವ ಸ್ತ್ರೀಸಂಗದಲ್ಲಿ ಅನುರಕ್ತನಾಗಿದ್ದೆ; ಅವನಿಗೆ ಅನೇಕರ ಸಂಗ. ಎರಡಕ್ಕೂ ವ್ಯತ್ಯಾಸ ಪ್ರಮಾಣದ್ದು ಮಾತ್ರ, ಗುಣದ್ದಲ್ಲ. ಆದುದರಿಂದ ನಾನು ಅವನ ಪಾಪಕ್ಕೆ ಪ್ರಾಯಶ್ಚಿತ್ತ ಹೊಂದಬೇಕು. ಪ್ರಾಯಶ್ಚಿತ್ತವೆಂದರೆ ಆತ್ಮಶುದ್ಧಿ; ಇದು ಶಂಬುಕದ ವೇಗದಲ್ಲಿ ಮುಂದುವರಿಯುತ್ತದೆ.

## ಕಾರ್ಯಕರ್ತನೊಬ್ಬನಿಗೆ

ಜೂನ್ ೨೫, ೧೯೩೨

(ಮತ್ತೊಂದು ಪತ್ರ ; ಹೀಗೆ ಬರೆದರು :)

ದೇವಾಲಯಗಳು ಮತ್ತು ಗ್ರಾಮ ಭವನಗಳ ಉಪಯೋಗವು ಎಲ್ಲರಿಗೂ ಗೊತ್ತು. ಅವು ಪ್ರಾರ್ಥನೆ ಮತ್ತು ಸಭೆಗಳಿಗೆ ಉಪಯೋಗವಾಗುತ್ತವೆ. ಬಹುಕಾಲದಿಂದ ಅವುಗಳ ಇರುವಿಕೆಗೆ ಇದೇ ಕಾರಣ.

ಮೂರ್ತಿಪೂಜೆ ಆವಶ್ಯಕವೋ ಅನಾವಶ್ಯಕವೋ ಎನ್ನುವ ಪ್ರಶ್ನೆಯೇ ಇಲ್ಲ. ಅದು ಎಷ್ಟೋ ಕಾಲದಿಂದ ಇದೆ, ಇದ್ದೇ ಇರುತ್ತದೆ. ಮಾನವ ವ್ಯಕ್ತಿಗಳು ಮೂರ್ತಿಪೂಜಕರೇ ಆಗಿದ್ದಾರು.

ವೈಷ್ಣವ ದೇವಾಲಯಗಳಲ್ಲಿ ಪೂಜಾವಿಧಾನವು ಸ್ವಲ್ಪವಾದರೂ ಬದಲಾವಣೆ ಆಗಬೇಕಾದ ಅಗತ್ಯತೆ ಇದೆ. ದೇವರು ಎಲ್ಲೆಲ್ಲಿಯೂ ಇದಾನೆ, ಆದುದರಿಂದ ವಿಗ್ರಹದಲ್ಲೂ ಇದಾನೆ. ಮೂರ್ತಿಪೂಜೆಯನ್ನು ಇಲ್ಲದಂತೆ ಮಾಡುವುದು ಅಸಾಧ್ಯ.

(ಮತ್ತೊಂದು ಪತ್ರದಿಂದ ಒಂದು ವಾಕ್ಯವೃಂದ:)

ತನ್ನ ಬಗೆಗೂ, ಬಂಧುಬಳಗದ ಬಗೆಗೂ ಪರಮಾರ್ಥ ಎಂದರೆ, ಸತ್ಯ ಅಥವಾ ದೇವರ ಬಗೆಗೂ ಅಭಿಮಾನವನ್ನು ಇಟ್ಟುಕೊಳ್ಳದೆ ಇದರಿಂದ ಪೂರ್ಣವಾಗಿ ಭಗವಂತನಲ್ಲಿ ಲೀನವಾಗುವುದೇ ನಿಜವಾದ ಅನಾಸಕ್ತಿ. ಜನಕ್ಕೆ ಈ ಎರಡು ಅರ್ಥಗಳೂ ಅರಿವಾಗುವುದಿಲ್ಲವಾದ್ದರಿಂದ ಅವರು ತಪಕಗೊಂಡು ನಿರಾಶೆಹೊಂದುತ್ತಾರೆ.

## ರಾಮೇಶ್ವರದಾಸರಿಗೆ*

ಜೂನ್ ೨೬, ೧೯೩೨

(ದಿನನಿತ್ಯದ ಆಹಾರ ಮತ್ತು ಫಲಾಹಾರ ಎಂದರೆ ಉಪವಾಸದಂದು ತೆಗೆದು ಕೊಳ್ಳುವ ಆಹಾರ—ಈ ಎರಡಕ್ಕೂ ಇರುವ ವ್ಯತ್ಯಾಸ ಕುರಿತು ಬಾಪೂ ಹೀಗೆ ಬರೆದರು:)

ಈ ವ್ಯತ್ಯಾಸ ಕೇವಲ ಮಿಥ್ಯೆ. ದೈಹಿಕ ಮತ್ತು ಆಧ್ಯಾತ್ಮಿಕ ಆರೋಗ್ಯದ ದೃಷ್ಟಿಯಿಂದ ಕೆಲವು ಸಂದರ್ಭಗಳಲ್ಲಿ ಫಲಾಹಾರಕ್ಕಿಂತಲೂ ದಿನನಿತ್ಯದ ಆಹಾರವೇ ಹೆಚ್ಚು ಉತ್ತಮ. ಕಡಲೆಕಾಯಿ ಫಲಾಹಾರ ಎನಿಸಿದರೂ ಅನಾರೋಗ್ಯ ಸ್ಥಿತಿಯಲ್ಲಿ ಅದನ್ನು ಸೇವಿಸಬಾರದು. ಕಾಯಿಲೆ ಇರುವವರು ದಿನನಿತ್ಯದ ಆಹಾರವಾದ ಅನ್ನವನ್ನು ಸ್ವಲ್ಪ ಪ್ರಮಾಣದಲ್ಲಿ

* ಶ್ರೀ ಘನಶ್ಯಾಮದಾಸ್ ಬಿರ್ಲಾ ಅವರ ಸೋದರ.

ಸೇವಿಸಬಹುದು. ಇಂದ್ರಿಯನಿಗ್ರಹವನ್ನು ಅಭ್ಯಸಿಸುತ್ತಿರುವವರು ಸ್ವಲ್ಪ ಅನ್ನದಿಂದ ಹೇಗಾದರೂ ಇರಬಹುದು; ಆದರೆ ಅವರು ಸಾಮಾನ್ಯವಾಗಿ ಕಡಲೆಕಾಯಿಯನ್ನು ವರ್ಜಿಸಬೇಕು. ಪೇಡಾ (ಹಾಲುಖೋವಾ) ನಿಮ್ಮ ವಯಸ್ಸಿನವರಿಗೆ ವಿಷಸಮಾನ. ಸಂಜೆವೇಳೆ ನೀವು ದ್ರಾಕ್ಷಿ, ಕಿತ್ತಲೆ, ದಾಳಿಂಬೆ ಅಥವಾ ಯಾವುದಾದರೂ ಹಣ್ಣಿನ ರಸ ಇವನ್ನು ಅನ್ನ, ಬೇಳೆ, ತರಕಾರಿ ಇವುಗಳಿಗೆ ಬದಲಾಗಿ ಉಪಯೋಗಿಸುವುದು ಉತ್ತಮ. ಇಲ್ಲವಾದರೆ ಎರಡನ್ನೂ ದಿನನಿತ್ಯದ ಆಹಾರವನ್ನಾಗಿ ಉಪಯೋಗಿಸುವುದು ಮೇಲು. ನಾಲಗೆಯನ್ನು ಹತೋಟಿಯಲ್ಲಿಟ್ಟುಕೊಳ್ಳಲಾರದ ಜನ ದಿನನಿತ್ಯದ ಆಹಾರಕ್ಕೂ ಉಪವಾಸದ ದಿನ ತೆಗೆದುಕೊಳ್ಳುವ ಆಹಾರಕ್ಕೂ ವ್ಯತ್ಯಾಸವನ್ನು ಮಾಡಿ ದೇವರನ್ನು ವಂಚಿಸುವುದಲ್ಲದೆ ಆತ್ಮವಂಚನೆಯನ್ನೂ ಮಾಡಿಕೊಳ್ಳುತ್ತಾರೆ. ನಾನು ವೈಷ್ಣವ ಕುಟುಂಬದಲ್ಲಿ ಹುಟ್ಟಿದವನಾದುದರಿಂದ ಅನುಭವದ ಮಾತನ್ನು ಬರೆಯುತ್ತಿದೇನೆ.

## ಕಾರ್ಯಕರ್ತನೊಬ್ಬನಿಗೆ

ಜೂನ್ ೨೯, ೧೯೩೨

(....ಅವರು ಆತ್ಮಹತ್ಯೆ ಮಾಡಿಕೊಳ್ಳಲು ಯೋಚಿಸುತ್ತಿರುವುದಾಗಿ ವ್ಯಸನಜನಕ ಪತ್ರವೊಂದನ್ನು ಬರೆದಿದರು. ಅದಕ್ಕೆ ಬಾಪೂ ಕೊಟ್ಟ ಉತ್ತರವಿದು:)

ನೀನೇಕೆ ಪ್ರಾಣ ಕಳೆದುಕೊಳ್ಳಬೇಕೆನ್ನುವೆ? ನೀನೇನು ಕಳ್ಳನಲ್ಲವಲ್ಲ. ಮಾರುಕಟ್ಟೆಯಲ್ಲಿ ಸಟ್ಟಾ ವ್ಯಾಪಾರವನ್ನು ಇನ್ನುಮೇಲೆ ಮಾಡುವುದಿಲ್ಲ ಎಂದು ನೀನು ತೀರ್ಮಾನಿಸಿದಾಗಲೇ ಒಂದು ಅಧ್ಯಾಯ ಕೊನೆಗೊಂಡಂತೆ. ಒಂದುವೇಳೆ ಕಳ್ಳತನಮಾಡಿದ್ದರೂ ಆತ್ಮಹತ್ಯೆಗೆ ಸಮರ್ಥನೆಯಿಲ್ಲ. ಕಳ್ಳತನ ಮಾಡಿ ಅದನ್ನು ಒಪ್ಪಿಕೊಂಡ ವ್ಯಕ್ತಿ, ಕಳ್ಳತನ ಮಾಡಿ ಸಿಕ್ಕದೆ ಇರುವ ಮತ್ತು ಕಳ್ಳತನ ಮಾಡುವ ಪ್ರಲೋಭನೆಗೇ ಒಳಗಾಗದ ಪ್ರಾಮಾಣಿಕ ವ್ಯಕ್ತಿಗಿಂತಲೂ ಎಷ್ಟೋ ಉತ್ತಮ. ಸಾಲದ ವಿಷಯವಾಗಿ, ನಿನ್ನ ಸರ್ವಸ್ವವನ್ನೂ ಸಾಲಿಗರಿಗೆ ಒಪ್ಪಿಸಿದಮೇಲೆ ನಿನ್ನ ಹೊಣೆಗಾರಿಕೆಯನ್ನು ಪೂರ್ಣವಾಗಿ ತೀರಿಸಿದಂತೆಯೇ ಆಯಿತು. ಸಾಲಿಗರು ಅಪೇಕ್ಷಿಸಿದರೆ ನಿನ್ನನ್ನು ದಿವಾಳಿ ಎಂದು ಘೋಷಿಸಲಿ. ಅದನ್ನು ನೀನು ಅಪಮಾನವೆಂದು

ಪರಿಗಣಿಸಬೇಕಾಗಿಲ್ಲ. ಏನೇ ಕಷ್ಟ ಬಂದರೂ ಅದನ್ನು ಸಹಿಸುವುದೇ ಗಂಡುತನ. ನಿನ್ನ ಭವಿಷ್ಯ : ಯಾವ ಶಂಕೆಯೂ ಇಲ್ಲದೆ ನೀನು ಆಶ್ರಮಕ್ಕೆ ಹೋಗಿ ಇರಬಹುದು. ಒಂದು ಸಲ ಶ್ರೀಮಂತನಂತೆ ಯಾವ ಸ್ಥಳಕ್ಕೆ ಹೋಗಿದ್ದೆನೋ ಅದೇ ಸ್ಥಳಕ್ಕೆ ನಿರ್ಗತಿಕನಾಗಿ ಹೋಗಲಾರೆನೆಂದು ಯೋಚಿಸ ಬೇಡ. ಎಲ್ಲ ಸಭ್ಯ ವ್ಯಕ್ತಿಗಳಿಗಾಗಿಯೇ ಆಶ್ರಮವಿರುವುದು. ಆಗಾಗ ಪತ್ರ ಬರೆ. ಮೀರಾಬೇನಳ ಸಹವಾಸದಿಂದ ಎಷ್ಟು ಲಾಭ ಸಾಧ್ಯವೋ ಅದನ್ನು ಪಡೆದುಕೊ. ಅವಳ ಸಹವಾಸವನ್ನು ಬಿಡದೆ ಇರು, ಏಕೆಂದರೆ, ಸುಜನರ ಸಹವಾಸ ಮಾನವರನ್ನು ಪರಿವರ್ತನೆಗೊಳಿಸುವ ಸ್ಪರ್ಶವೇದಿ ಯಂತೆ.

## ದೇವದಾಸನಿಗೆ

ಅಮೇರಿಕಾದ ಬರೆಹಗಾರರ ಬಗೆಗೆ ರಾಜಾಜೀ ಏನೋ ಪೂರ್ವ ನಿಶ್ಚಿತ ಅಭಿಪ್ರಾಯ ಹೊಂದಿದಂತೆ ಕಾಣುತ್ತದೆ. ಹಾರ್ಡೀ* ಅಥವಾ ಝೋಲಾ* ಇವರುಗಳ ಯಾವ ಗ್ರಂಥವನ್ನೂ ನಾನು ಓದಿಲ್ಲ. ಆದರೆ ಅಪ್ಟನ್ ಸಿಂಕ್ಲೇರ್§ ಕಡೆಗಾಣಿಸುವಂಥ ಲೇಖಕರಲ್ಲ. ಪ್ರಚಾರವೆನ್ನುವುದು ಅಷ್ಟೇ ತಪ್ಪಿನಿಂದಲೂ ಕೂಡಿರುತ್ತದೆ. ಪ್ರಚಾರಕ ತನ್ನ ಪುಸ್ತಕವನ್ನು ಸೃಷ್ಟಿಸಲು ತನ್ನೆಲ್ಲ ಶಕ್ತಿಗಳನ್ನೂ ಉಪಯೋಗಿಸುತ್ತಾನೆ. ಅವನು ತನ್ನ ಉದ್ದೇಶವನ್ನು ಗೋಪ್ಯವಾಗಿ ಇಡುವುದಿಲ್ಲ; ಆದರೂ ಕಥೆಯನ್ನು ಓದುವವರಿಗೆ ಆಸಕ್ತಿ ಕುಂದದಂತೆ ನೋಡಿಕೊಳ್ಳುತ್ತಾನೆ. 'ಅಂಕಲ್ ಟಾಮ್ಸ್ ಕೆಬಿನ್'† ಒಂದು ಶುದ್ಧ, ಸರಳ, ಪ್ರಚಾರಕ ಗ್ರಂಥವಾದರೂ ಅದರ ಕಲೆ ಅನುಕರಣೆಗೆ ಸಾಧ್ಯವಲ್ಲದ್ದು. ಸಿಂಕ್ಲೇರ್ ಒಬ್ಬ ದೊಡ್ಡ ಸುಧಾರಕ. ಸುಧಾರಣೆಯನ್ನು ಮುಂದುವರಿಸುವ ದೃಷ್ಟಿಯಿಂದ ಬರೆಯು ತ್ತಾನೆ; ಆದರೂ ಅವನ ಗ್ರಂಥಗಳು ಸ್ವಾರಸ್ಯವಾಗಿವೆಯೆಂದು ಪ್ರಸಿದ್ಧಿ ಪಡೆದಿವೆ. ನನಗೆ ವಿರಾಮ ದೊರೆತರೆ ಅವುಗಳನ್ನು ಓದಬೇಕೆಂದಿದೇನೆ.

---

* ಇವರು ಆಂಗ್ಲ ಕಾದಂಬರಿಕಾರರು.

§ ಅಮೆರಿಕಾದ ಕಾದಂಬರಿಕಾರರು.

† ಅಮೆರಿಕಾದ ನೀಗ್ರೋಗಳ ದುಃಸ್ಥಿತಿ ಕುರಿತು ಬರೆದ ಒಂದು ಕಥೆ.

## ಸ್ವಾಮೀ ಆನಂದ್ ಅವರಿಗೆ

ಜೂನ್ ೩೦, ೧೯೩೨

(ಶ್ರೀ ರಾಮಕೃಷ್ಣ ಪರಮಹಂಸರು, ಸ್ವಾಮೀ ವಿವೇಕಾನಂದರು ಇವರುಗಳ ವಿಷಯದಲ್ಲಿ ಬಾಪೂ ಅಭಿಪ್ರಾಯವೇನೆಂದು ಸ್ವಾಮೀ ಆನಂದ್ ಕೇಳಿದ್ದರು. ಬಾಪೂ ಹೀಗೆ ಬರೆದರು :)

ಅವರುಗಳ ಬಗೆಗೆ ರೋಲಾ ಬರೆದಿರುವ ಪುಸ್ತಕವನ್ನು ನಾನು ಆಸಕ್ತಿಯಿಂದ ಓದಿದೇನೆ. ಶ್ರೀ ರಾಮಕೃಷ್ಣರ ಬಗೆಗೆ ನನ್ನಲ್ಲಿ ಯಾವಾಗಲೂ ಪೂಜ್ಯಭಾವವಿದೆ. ಅವರನ್ನು ಕುರಿತು ನಾನು ತುಂಬ ವ್ಯಾಸಂಗ ಮಾಡಿಲ್ಲ; ಅವರ ಬಗೆಗೆ ಮೆಚ್ಚುಗೆ ಉಳ್ಳವರು ಆಡಿದ ಮಾತುಗಳನ್ನು ಕೇಳಿದುದರಿಂದ ಆ ಪೂಜ್ಯಭಾವವುಂಟಾಯಿತು; ರೋಲಾರವರ ಪುಸ್ತಕವನ್ನು ಓದಿ ಅದು ಗಾಢವಾಯಿತೆಂದು ಹೇಳಲಾರೆ. ಅವರ ಪುಸ್ತಕ, ಪಾಶ್ಚಾತ್ಯರಿಗೆಂದು ಬರೆದುದು. ಆ ಪುಸ್ತಕದಿಂದ ನನಗೆ ಯಾವ ಲಾಭವೂ ಆಗಿಲ್ಲವೆಂದು ಹೇಳುವಷ್ಟು ದೂರ ಹೋಗಲಾರೆ; ಆದರೆ ಅದು ನನಗೆ ಕೊಡಬಹುದಾದಂಥದು ಏನೂ ಇಲ್ಲ. ಯಾವ ವಿಷಯಗಳು ನನ್ನ ಮೆಚ್ಚುಗೆಯನ್ನು ಸೆಳೆದವೋ ಆ ವಿಷಯಗಳು ರೋಲಾರವರ ಪುಸ್ತಕದಲ್ಲಿಯೂ ಇವೆ; ಆತ ಕೊಟ್ಟಿರುವ ಇತರ ವಿವರಗಳು ಆ ಮೆಚ್ಚುಗೆಯನ್ನು ಹೆಚ್ಚಿಸಲಿಲ್ಲ. ಸ್ವಾಮೀ ವಿವೇಕಾನಂದರು ತಮ್ಮ ಗುರು ಶ್ರೀ ರಾಮಕೃಷ್ಣರಷ್ಟು ಭಕ್ತರಾಗಿರಲಿಲ್ಲವೆಂದು ನನ್ನ ನಂಬಿಕೆ. ಅವರಲ್ಲಿ ಅಗಾಧ ಮಾನವಪ್ರೇಮವಿತ್ತು; ಅವರು ಭಾವಪ್ರಧಾನ ವ್ಯಕ್ತಿಯಾಗಿದ್ದರು. ಈ ಭಾವಾತಿಶಯ ಅವರ ಅರಿವನ್ನು ಮಿತಿಗೊಳಿಸುವ ಒಂದು ಅಂಶವಾಗಿತ್ತು. ಧರ್ಮಕ್ಕೂ ರಾಜನೀತಿಗೂ ಅವರು ಮಾಡಿರುವ ವ್ಯತ್ಯಾಸ ಸಮರ್ಥನೀಯವಲ್ಲ; ಆದರೆ ಅಂಥ ಮಹಾವ್ಯಕ್ತಿಯನ್ನು ಟೀಕೆಮಾಡಿ ಪ್ರಯೋಜನವಾದರೂ ಏನು ? ಒಮ್ಮೆ ನಾವು ಟೀಕೆಮಾಡುವುದಕ್ಕೆ ಆರಂಭಿಸಿದರೆ, ಪ್ರತಿಯೊಬ್ಬ ವ್ಯಕ್ತಿಯಲ್ಲಿಯೂ ಏನಾದರೂ ಟೀಕೆಗೆ ಅಂಶವನ್ನು ಕಾಣುತ್ತೇವೆ. ಅಂಥ ಮಹಾವ್ಯಕ್ತಿಗಳ ಬಾಳಿನಿಂದ ಯಾವ ಪಾಠವನ್ನಾದರೂ ನಾವು ಕಲಿಯುವುದೇ ನಮ್ಮ ಕರ್ತವ್ಯ. ತುಳಸೀದಾಸರ ಈ ಶ್ಲೋಕವನ್ನು ನಾನು ಹೃದಯಸ್ಥ ಮಾಡಿಕೊಂಡಿದೇನೆ.

**‘ ಜಡಚೇತನ ಗುಣದೋಷಮಯ ವಿಶ್ವ ಕಿನ್ಹ ಕರತಾರ್ ।**
**ಸಂತ–ಹಂಸಗುಣ–ಯಹ ಗಹಹೀಂ, ಪರಿಹರಿ ವಾರಿವಿಕಾರ್ ॥ ’**

(ಜಡ, ಚೇತನ ; ಗುಣ, ದೋಷ ; ಇವುಗಳಿಂದ ಈ ವಿಶ್ವವನ್ನು ಸೃಷ್ಟಿಮಾಡಿದಾನೆ ಕರ್ತಾರ. ಹಂಸವು ನೀರು ಮಿಶ್ರಿತವಾದ ಹಾಲಿನಲ್ಲಿ ನೀರನ್ನು ತ್ಯಜಿಸಿ ಹಾಲನ್ನು ಕುಡಿಯುವಂತೆ ಜ್ಞಾನಿಗಳು ದೋಷವನ್ನು ತ್ಯಜಿಸಿ, ಗುಣಗ್ರಹಣ ಮಾಡುತ್ತಾರೆ.)

ಆದುದರಿಂದ ನಾನು ಟೀಕೆಮಾಡಲು ಬಯಸುವುದಿಲ್ಲ. ಆದರೆ ನನ್ನ ಮನಸ್ಸಿನ ಟೀಕೆಯ ಭಾವವನ್ನೂ ನೀನು ಅರಿತುಕೊಳ್ಳಲೆಂಬ ದೃಷ್ಟಿಯಿಂದ ಇದನ್ನು ಬರೆದಿದೇನೆ. ವಿವೇಕಾನಂದರು ರಾಷ್ಟ್ರದ ಮಹಾ ಸೇವಕರೆಂಬುದರಲ್ಲಿ ನನಗೆ ಯಾವ ಸಂಶಯವೂ ಇಲ್ಲ. ಅವರು ಕಂಡ ಸತ್ಯಕ್ಕಾಗಿ ಹೇಗೆ ದುಡಿದರೆಂಬುದನ್ನು ನೋಡುವ ಭಾಗ್ಯ ನಮ್ಮದು. ೧೯೦೧ರಲ್ಲಿ ನಾನು ಬೇಲೂರು ಮಠಕ್ಕೆ ಹೋದಾಗ ಅವರ ದರ್ಶನಲಾಭ ಪಡೆಯಲು ಬಹಳ ಉತ್ಸಾಹಭರಿತನಾಗಿದ್ದೆ. ಆದರೆ ಅವರನ್ನು ನೋಡಿಕೊಳ್ಳುತ್ತಿದ್ದ ಸಂನ್ಯಾಸಿ ಅವರು ಕಾಯಿಲೆಯಾಗಿ ಕಲ್ಕತ್ತಾದಲ್ಲಿರುವರು ಎಂದೂ ಯಾರೂ ದರ್ಶನಮಾಡಲು ಅವಕಾಶವಿಲ್ಲವೆಂದೂ ತಿಳಿಸಿದರು. ಇದರಿಂದ ನನಗೆ ಮಹಾನಿರಾಶೆಯಾಯಿತು. ಮಹಾಪುರುಷರ ಬಗೆಗೆ ನನ್ನಲ್ಲಿ ಇರುವ ಪೂಜ್ಯಭಾವ ನನ್ನನ್ನು ಅನೇಕ ದುರಂತಗಳಿಂದ ಪಾರುಮಾಡಿದೆ. ಆಗಿನ ಕಾಲದಲ್ಲಿ ಕಲ್ಕತ್ತಾದಲ್ಲಿದ್ದ ಯಾವೊಬ್ಬ ಪ್ರಸಿದ್ಧ ಕಾರ್ಯಕರ್ತನನ್ನೂ ನಾನು ನೋಡದೆ ಇರಲಿಲ್ಲ. ಅನೇಕ ಸಂದರ್ಭಗಳಲ್ಲಿ ನಾನು ಪಾದಚಾರಿಯಾಗಿಯೇ ಹೋಗಿ ಭೇಟಿಮಾಡುತ್ತಿದ್ದೆ. ಇದು ಹಣವನ್ನು ಉಳಿತಾಯಮಾಡುವ ದೃಷ್ಟಿಯಿಂದಲ್ಲ, ಯಾತ್ರಿಕನ ಮನೋಭಾವದಿಂದ.

## ಕಿಶೋರಲಾಲ್* ಅವರಿಗೆ

ಜುಲೈ ೧, ೧೯೩೨

(ತಾವು ಆಗಲೇ ವ್ಯಾಸಂಗಮಾಡಿರುವುದರ ಜೊತೆಗೆ ಏನನ್ನು ವ್ಯಾಸಂಗ ಮಾಡಬೇಕೆಂದು ಕಿಶೋರಲಾಲ್ ಬಾಪೂವನ್ನು ಕೇಳಿದರು. ಅದಕ್ಕೆ ಉತ್ತರ ಹೀಗಿತ್ತು :)

ನಾನು ಯಾವುದನ್ನೂ ವಿಶೇಷ ರೀತಿಯಲ್ಲಿ ಸಲಹೆ ಮಾಡಲಾರೆ. ನಿನ್ನ ವ್ಯಾಸಂಗ ಈಗಲೂ ಸಾಲದೆಂದು ನಾನು ಭಾವಿಸಲಾರೆ. ನನ್ನ ವ್ಯಾಸಂಗವಂತೂ ವಿಚಿತ್ರ. ಈಗ ನಾನು ಉರ್ದೂ ಕಲಿಯುತ್ತಿದೇನೆ. ಹಣ ಮತ್ತು ಅದರ ವಿನಿಮಯದ ವಿಷಯವಾಗಿ ಸ್ವಲ್ಪ ಕಲಿಯಲು ಪ್ರಯತ್ನಿಸಿದೇನೆ. ಏಕೆಂದರೆ ಅದರ ಬಗೆಗೆ ಅಜ್ಞಾನ ಅಕ್ಷಮ್ಯ. ಈ ವ್ಯಾಸಂಗಗಳ ಹಿನ್ನೆಲೆಯಲ್ಲಿ ಸೇವಾಭಾವನೆ ಇದೆ. ಇದೇ ಭಾವನೆ ತಮಿಳು, ಮರಾಠಿ ಮತ್ತು ಬಂಗಾಳೀ ಭಾಷೆಗಳ ನನ್ನ ಜ್ಞಾನವನ್ನು ವೃದ್ಧಿಪಡಿಸಿ ಕೊಳ್ಳಲು ನನ್ನನ್ನು ಪ್ರಚೋದಿಸುತ್ತದೆ. ನಾವು ಸೆರೆಮನೆಯಲ್ಲಿ ಬಹಳ ದೀರ್ಘಕಾಲ ಇರಬೇಕಾದರೆ ಈ ಎಲ್ಲ ಭಾಷೆಗಳ ವ್ಯಾಸಂಗವನ್ನೂ ನಾನು ಪುನಃ ಪ್ರಾರಂಭಿಸಿಯೇನು. ನಿನ್ನ ಮನಸ್ಸೂ ಇದೇ ದಿಕ್ಕಿನಲ್ಲಿ ಓಡು ತ್ತಿದ್ದರೆ ನೀನೂ ಭಾರತೀಯ ಭಾಷೆಗಳಲ್ಲಿ ಕೆಲವನ್ನು ಅರಿಯಲು ಪ್ರಯತ್ನ ಮಾಡಬಹುದು. ೧೯೧೫ರಲ್ಲಿ ಸತ್ಯಾಗ್ರಹ ಆಶ್ರಮವು ಆರಂಭವಾದಾಗ ಪ್ರಾದೇಶಿಕ ಭಾಷೆಗಳನ್ನು ಕಲಿಯುವುದು ಅಲ್ಲಿನ ಕಾರ್ಯಕ್ರಮದ ಒಂದು ಅಂಗವಾಗಿತ್ತು. ಈ ರೀತಿಯ ವ್ಯಾಸಂಗದ ಬಗೆಗೆ ನನ್ನ ಸ್ವಂತ ಅಭಿಪ್ರಾಯ ಹಿಂದಿನಷ್ಟೇ ಖಚಿತವಾಗಿದೆ. ಆದರೆ ನಿನ್ನನ್ನೂ ಅದರ ಪ್ರಲೋಭನೆಗೆ ಎಳೆಯಲು ನಾನು ಇಚ್ಛಿಸುವುದಿಲ್ಲ. ಆದರೆ ಏನನ್ನೇ ವ್ಯಾಸಂಗಮಾಡಲಿ ಅದನ್ನು ಅರಗಿಸಿಕೊಂಡು ನಮ್ಮ ನಿತ್ಯಜೀವನದಲ್ಲಿ ಅನುಷ್ಠಾನಕ್ಕೆ ತರುವ ಆವಶ್ಯಕತೆಯಂತೂ ಇದೆ ಎನಿಸುತ್ತದೆ ನನಗೆ. ಗೀತಾಧ್ಯಯನವನ್ನೂ

---

* ಕಿಶೋರಲಾಲ್ ಮಶ್ರೂವಾಲಾ — ಇವರು ಗಾಂಧೀದರ್ಶನ ವ್ಯಾಖ್ಯಾನ ಕಾರರಲ್ಲಿ ಪ್ರಸಿದ್ಧರು. 'ಹರಿಜನ' ಪತ್ರಿಕೆಯ ಸಂಪಾದಕರಾಗಿದ್ದರು. 'ಗಾಂಧೀ–ಮಾರ್ಕ್ಸ್', 'ಗಾಂಧೀ ವಿಚಾರದೋಹನ' — ಇವು ಇವರು ಬರೆದಿರುವ ಪುಸ್ತಕಗಳಲ್ಲಿ ಪ್ರಸಿದ್ಧವಾಗಿವೆ.

ರಾಯಚಂದಭಾಯಿಯವರ ಪುಸ್ತಕಗಳನ್ನೂ ವ್ಯಾಸಂಗ ಮಾಡುವುದನ್ನು ಬಿಟ್ಟು ತನ್ನ ಕಾರ್ಯದಲ್ಲಿ ನಿರತನಾಗಿ ಅದರ ಬಗೆಗೆ ಚಿಂತನೆ ಮಾಡಬೇಕೆಂದು ಸಲಹೆ ಇತ್ತಿದ್ದೇನೆ. ಏಕೆಂದರೆ ಆತ ಆ ಪುಸ್ತಕಗಳಲ್ಲಿ ಅನೇಕ ವಿಷಯಗಳನ್ನು ಬಾಯಿಪಾಠಮಾಡಿದರೂ ಅವುಗಳನ್ನು ಕಾರ್ಯರೂಪಕ್ಕೆ ತರಲು ಅಶಕ್ತನಾಗಿದ್ದನು. ಅವನ ಹೃದಯ ಶುದ್ಧ, ಆದರೆ ಬುದ್ಧಿ ಅವನನ್ನು ವಂಚಿಸುತ್ತದೆ; ಏನೇನನ್ನೋ ಕಲ್ಪನೆ ಮಾಡುತ್ತಾನೆ, ಎಲ್ಲ ಹೊಗೆಯಂತೆ ಹಾರಿಹೋಗುತ್ತದೆ. ನನ್ನ ಸಲಹೆ ಅವನಿಗೆ ಹಿಡಿಸಿದೆ; ಅವನ ಮನಸ್ಸು ಯಾವುದೋ ದೊಡ್ಡ ಭಾರದಿಂದ ಮುಕ್ತವಾಗಿದೆ. ಈ ಸಲಹೆಯ ಪರಿಣಾಮ ಏನೇ ಆಗಲಿ, ಅದರ ಹಿಂದಿನ ವಿಚಾರ ಸೂಕ್ತವಾದುದೆಂದು ನನ್ನ ಅನುಭವದಿಂದ ಸ್ಪಷ್ಟವಾಗಿದೆ. ಆದುದರಿಂದ ನಿನ್ನಂದದ ವ್ಯಕ್ತಿಗೆ ಧಾರ್ಮಿಕ ಗ್ರಂಥಗಳನ್ನು ವ್ಯಾಸಂಗ ಮಾಡೆಂದು ನಾನು ಸಲಹೆ ನೀಡಲಾರೆ.

## ಒಬ್ಬ ಕಾರ್ಯಕರ್ತನಿಗೆ

ಜುಲೈ ೩, ೧೯೩೨

(ಈ ವಾರ ಸಹ ಭಾನುವಾರ ರಾತ್ರಿಯೇ ಬಾಪೂ ಆಶ್ರಮದ ಅಂಚೆಯನ್ನು ಮುಗಿಸಿದರು. ಎಂದಿನಂತೆ ದೀರ್ಘ ಪತ್ರ ಬರೆದಿದ್ದ 'ಎಸ್' ಅವರಿಗೆ ಈ ರೀತಿ ಬರೆದರು :)

ಸ್ತ್ರೀಯನ್ನು ಅಪಹರಣಮಾಡಿ ಬಲಾತ್ಕಾರ ಸಂಭೋಗ ನಡೆಸಿದುದರ ಬಗೆಗೆ ನಿಮ್ಮ ವಿಚಾರಸರಣಿ ಸೂಕ್ತವಾಗಿದೆ. ಮಾನಭಂಗಹೊಂದುವ ಅಪಾಯಕ್ಕೆ ತುತ್ತಾದ ಸ್ತ್ರೀ ಆತ್ಮಹತ್ಯೆ ಮಾಡಿಕೊಳ್ಳುವ ಹಕ್ಕನ್ನು ಹೊಂದಿದ್ದಾರೆ, ಹಾಗೆಯೇ ಧರ್ಮದರ್ಶಿಯೊಬ್ಬನ ಸ್ವಾಧೀನದಲ್ಲಿರುವ ಆಸ್ತಿಯ ಅಪಹರಣ ಸ್ಥಿತಿಯಲ್ಲಿ ಅವನಿಗೂ ಹಕ್ಕಿದೆ. ಆದರೆ ಆತ ತನಗೆ ಸರಿಯಾದ ಮಾರ್ಗ ಯಾವುದೆಂಬುದನ್ನು ಕುರಿತು ಚಿಂತಿಸಿರಬೇಕು. ಒಬ್ಬ ಸ್ತ್ರೀ ಬಲಾತ್ಕಾರ ಸಂಭೋಗದಿಂದ ತಪ್ಪಿಸಿಕೊಳ್ಳಲು ಆತ್ಮಹತ್ಯೆ ಮಾಡಿಕೊಳ್ಳದಿದ್ದರೆ ಆಕೆ ಅಪರಾಧವನ್ನು ಎಸಗಿದಾಳೆಂದು ನಾವು ಭಾವಿಸುವುದು ಯುಕ್ತವಲ್ಲ. ಅಥವಾ ಧರ್ಮದರ್ಶಿಯೊಬ್ಬ ತನ್ನ ಸ್ವಾಧೀನದಲ್ಲಿದ್ದ

ಆಸ್ತಿಯ ರಕ್ಷಣಾರ್ಥವಾಗಿ ದೇಹತ್ಯಾಗ ಮಾಡಿದರೆ ಅವನು ಯುಕ್ತವಾದುದನ್ನು ಮಾಡಿದನೆಂದು ನಾವು ಭಾವಿಸಲಾಗುವುದಿಲ್ಲ. ಇವೆಲ್ಲ ಆ ಸಂದರ್ಭದಲ್ಲಿ ವ್ಯಕ್ತಿಯ ಮನಸ್ಸು ಯಾವ ರೀತಿ ಇತ್ತೆಂಬುದನ್ನು ಅನುಸರಿಸುತ್ತದೆ. ಆದರೂ ಸ್ತ್ರೀಯಲ್ಲಿ ಅಗತ್ಯವಾದ ಧೈರ್ಯವಿದ್ದರೆ ಆಕೆ ತನ್ನ ಮಾನಭಂಗಕ್ಕಿಂತಲೂ ಪ್ರಾಣವನ್ನೇ ತ್ಯಜಿಸಿಯಾಳೆಂದು ನನ್ನ ನಂಬಿಕೆ. ಆದುದರಿಂದ ನಾನು ಸ್ತ್ರೀಯರೊಡನೆ ಸಂಭಾಷಣೆ ಮಾಡುವಾಗ ಅಂಥ ಮನೋಧರ್ಮವನ್ನು ಬೆಳೆಸಿಕೊಳ್ಳಬೇಕೆಂದೂ ಮನಸ್ಸು ಮಾಡಿದರೆ ಪ್ರಾಣವನ್ನು ತ್ಯಜಿಸುವುದು ಸುಲಭವೆಂದೂ ಅವರಿಗೆ ಸ್ಪಷ್ಟಪಡಿಸುತ್ತೇನೆ. ಏಕೆಂದರೆ ಅನೇಕ ಸ್ತ್ರೀಯರು, ಅವರನ್ನು ರಕ್ಷಿಸಲು ಪುರುಷರು ಇಲ್ಲವಾದರೆ ಅಥವಾ ಅವರು ಕಠಾರಿ ಮತ್ತು ಪಿಸ್ತೂಲುಗಳ ಉಪಯೋಗವನ್ನು ಕಲಿಯದಿದ್ದರೆ, ದುರುಳನಿಗೆ ವಶವರ್ತಿಯಾಗದೆ ಬೇರೆ ವಿಧಾನವೇ ಇಲ್ಲವೆಂಬ ತಪ್ಪು ಅಭಿಪ್ರಾಯದಿಂದ ಕೂಡಿದಾರೆ. ತಮ್ಮ ರಕ್ಷಣೆಗೆ ಯಾವ ಆಯುಧವನ್ನೂ ಅವರು ನೆಚ್ಚಬೇಕಾಗಿಲ್ಲವೆಂದು ನಾನು ಹೇಳಬಯಸುತ್ತೇನೆ. ಅವರ ಧರ್ಮನಿಷ್ಠೆಯೇ ಅವರ ರಕ್ಷಕಶಕ್ತಿ. ಇದು ಸಾಧ್ಯವಿಲ್ಲವಾದರೆ ಕಠಾರಿ ಇತ್ಯಾದಿಗಳನ್ನು ಉಪಯೋಗಿಸುವುದಕ್ಕೆ ಪ್ರತಿಯಾಗಿ ಅವರು ಆತ್ಮಹತ್ಯೆ ಮಾಡಿಕೊಳ್ಳುವುದೇ ಲೇಸು. ಅವರು ಅಬಲೆಯರೆಂದು ಭಾವಿಸಿಕೊಳ್ಳಲು ಕಾರಣವೇ ಇಲ್ಲ.

ಕೆಲವು ವೇಳೆ ಕಾಲ್ಪನಿಕ ಪ್ರಶ್ನೆಗಳನ್ನು ಕೇಳಬಹುದು, ಆದರೆ ಅವುಗಳಿಗೆ ಗಮನಕೊಡದಿರುವುದೇ ಕ್ಷೇಮ. ಜ್ಯಾಮಿತಿಶಾಸ್ತ್ರದ ವಿದ್ಯಾರ್ಥಿಯೋರ್ವ ತನ್ನ ಅಧ್ಯಾಪಕರಿಂದಲೇ ಪ್ರಮೇಯಗಳಿಗೆ ಉತ್ತರಗಳನ್ನು ಕೇಳಿ ತಿಳಿದುಕೊಳ್ಳುತ್ತ ಹೋದರೆ ಅವನು ಆ ಶಾಸ್ತ್ರದಲ್ಲಿ ಪರಿಣತನಾಗಲು ಹೇಗೆ ಸಾಧ್ಯವಿಲ್ಲವೋ ಹಾಗೆಯೇ ಇಂಥ ಪ್ರಶ್ನೆಗಳನ್ನು ಕೇಳುವ ಅಭ್ಯಾಸ ಮಾಡಿದವನೂ ಆಗಿಹೋಗುತ್ತಾನೆ. ಅಲ್ಲದೆ ನೈತಿಕ ವಿಷಯಗಳಿಗೆ ಸಂಬಂಧಿಸಿದ ಕಾಲ್ಪನಿಕ ಪ್ರಶ್ನೆಗಳಿಗೂ ಜೀವನದ ವಾಸ್ತವಿಕ ಸನ್ನಿವೇಶಗಳಲ್ಲಿ ಉದ್ಭವವಾಗುವ ಸಮಸ್ಯೆಗಳಿಗೂ ಹೊಂದಾಣಿಕೆಯಾಗಲಾರದೆಂಬ ಆಕ್ಷೇಪವಿದೆ. ಎರಡಕ್ಕೂ ಇರಬಹುದಾದ ಅತ್ಯಂತ ಸಣ್ಣ ವ್ಯತ್ಯಾಸವೂ ಬೇರೆ ಬೇರೆ ವರ್ತನೆಯ ಮಾರ್ಗಗಳನ್ನು ಸೂಚಿಸಲು ಸಾಧ್ಯ. ಆದುದರಿಂದ

ನೀನು ಇಂಥ ಕಾಲ್ಪನಿಕ ಪ್ರಶ್ನೆಗಳಿಗೆ ಉತ್ತರ ಕೇಳಿ ತಿಳಿದುಕೊಂಡು, ಕಾಲ್ಪನಿಕ ಸನ್ನಿವೇಶಗಳನ್ನು ಎದುರಿಸಲು ಸಿದ್ಧತೆಹೊಂದುವ ವಿಷಯದಲ್ಲಿ ನಾನು ಎಚ್ಚರಿಕೆ ಇತ್ತಿದ್ದೆ; ಏಕೆಂದರೆ, ಅಂಥ ಉತ್ತರಗಳು ನೆರವಾಗುವುದಕ್ಕೆ ಪ್ರತಿಯಾಗಿ ವಾಸ್ತವಿಕವಾದ ಸಮಸ್ಯೆಗಳನ್ನು ಎದುರಿಸುವಾಗ ಕಂಡಂತೆಯೇ ಅಡಚಣೆಗಳನ್ನು ಒಡ್ಡಬಹುದು. ಅಂಥ ಉತ್ತರಗಳನ್ನು ಹುಡುಕುವವನು ಸ್ವತಂತ್ರ ಯೋಚನೆ ಮಾಡಲು ಅಶಕ್ತನಾಗಿರುತ್ತಾನೆ. ಆದುದರಿಂದ ಮೂಲತತ್ತ್ವವನ್ನು ಪೂರ್ಣವಾಗಿ ಅರಿತುಕೊಳ್ಳುವುದು ಅತ್ಯಂತ ಉತ್ತಮ; ಅದನ್ನು ಜೀವನದಲ್ಲಿ ಕಾರ್ಯರೂಪಕ್ಕೆ ತರಲು ಯತ್ನಿಸಿದಾಗ ಏನಾದರೂ ತಪ್ಪುಗಳಾದರೆ ಅದರ ರೀತಿಯೇ ಬೇರೆ. ಇದೇ ನಿಜ ಶಿಕ್ಷಣದ ಮಾರ್ಗ. ಇದಕ್ಕೆ ಪ್ರತಿಯಾಗಿ ಕಾಲ್ಪನಿಕ ಪ್ರಶ್ನೆಗಳಿಗೆ ಸಿದ್ಧವಾದ ಉತ್ತರಗಳನ್ನು ಪಡೆಯುವವನು ತನ್ನ ಆತ್ಮಸಂಬಿಕೆಯನ್ನೆಲ್ಲ ಕಳೆದುಕೊಳ್ಳುತ್ತಾನೆ. ಇಂಥದೊಂದು ಅನುಭವದಿಂದಲೇ ಗೀತಾಚಾರ್ಯ ಗೀತೆಯ ಹತ್ತನೆಯ ಅಧ್ಯಾಯದ ಹತ್ತನೆಯ ಶ್ಲೋಕವನ್ನು ಬರೆದಿರಬಹುದೆನ್ನಿಸುತ್ತದೆ.

**ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಂ ।**
**ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ ॥**

(ನನ್ನಲ್ಲಿ ಈ ರೀತಿ ತನ್ಮಯರಾದವರಿಗೆ, ಪ್ರೇಮಪೂರ್ವಕ ನನ್ನನ್ನು ಭಜನೆ ಮಾಡುವವರಿಗೆ ನಾನು ಜ್ಞಾನವನ್ನು ಕೊಡುತ್ತೇನೆ. ಆದರಿಂದ ಅವರು ನನ್ನನ್ನು ಹೊಂದುತ್ತಾರೆ.)

ಇದು ಭಗವಂತನ ಆಶ್ವಾಸನೆ. ಇಲ್ಲಿ ಭಗವಂತ 'ಸತ್ಯ' ಎಂದು ಭಾವಿಸಿದರೆ ಅರ್ಥ ಹೆಚ್ಚು ಸ್ಪಷ್ಟವಾಗುತ್ತದೆ. ಕಾಲ್ಪನಿಕ ಪ್ರಶ್ನೆಗಳಿಂದ ನಿನಗೆ ಅಪಾಯವೇ ಹೆಚ್ಚಾಗಿರುವುದರಿಂದ ನೀನು ಅವುಗಳನ್ನು ಕೇಳಲು ನಾನು ಪ್ರೋತ್ಸಾಹಿಸುವುದಿಲ್ಲ.

## ಮಂಗಳಾಗೆ

(ಮಂಗಳಾ ಒಂದು ಸೊಗಸಾದ ಪ್ರಶ್ನೆಯನ್ನು ಕೇಳಿದ್ದಳು. ಆ ಪ್ರಶ್ನೆ, ' ನಾವು ಶೂನ್ಯವಾಗುವುದೆಂದರೇನು ? ' ಎಂಬುದು. ಬಾಪೂ ಉತ್ತರ ಹೀಗೆ :)

ಒಳ್ಳೆಯ ವಸ್ತುಗಳನ್ನು ಹೊಂದುವುದರಲ್ಲಿ ಕೊನೆಯವರಾಗಿರುವುದು, ಸರ್ವರ ಸೇವೆಯನ್ನೂ ಮಾಡುವುದು, ಕೃತಜ್ಞತಾಭಾವವನ್ನು ನಿರೀಕ್ಷಿಸದಿರುವುದು ಮತ್ತು ಆರ್ತರ ಸೇವೆಮಾಡುವುದರಲ್ಲಿ ಪ್ರಥಮವಾಗಿರುವುದು—ಇವೇ ಅದರ ಅರ್ಥ. ಯಾರು ಈ ರೀತಿಯ ಅಹಂಭಾವ ಶೂನ್ಯರಾಗುವರೋ ಅವರು ಸದಾ ತಮ್ಮ ಕರ್ಮನಿರತರಾಗಿರುವರು.

## ನಾರಾಯಣದಾಸ್ ಗಾಂಧೀಯವರಿಗೆ

ಜುಲೈ ೧೦, ೧೯೩೨

(ನಾರಾಯಣದಾಸ್ ಗಾಂಧೀಗೆ ಬರೆದ ಒಂದು ಪತ್ರದಿಂದ :)

ಯಾವಾತ ತನಗೆ ತಾನು ಸತ್ಯವಾಗಿರುವನೋ ಅವನಿಗೆ ಇಷ್ಟು ಸಾಕು : ' ನಿನ್ನ ಸಾಮರ್ಥ್ಯ ಮೀರಿದಕ್ಕೆ ಕೈಹಾಕಬೇಡ, ಹಾಗೆಯೇ ನೀನು ಮಾಡಲು ಸಾಧ್ಯವಾದುದಕ್ಕಿಂತ ಕಡಮೆ ಮಾಡಬೇಕೆಂಬ ಆಸೆಯನ್ನು ಗುಪ್ತವಾಗಿ ಇಟ್ಟುಕೊಳ್ಳಬೇಡ.' ತನ್ನ ಶಕ್ತಿಗೆ ಮೀರಿದುದನ್ನು ಕೈಗೊಳ್ಳುವವನು ಅಹಂಭಾವದಿಂದ ಕೂಡಿದವನು, ಆಸಕ್ತಿಹೊಂದಿದವನು ; ಇದಕ್ಕೆ ಪ್ರತಿಯಾಗಿ ತನ್ನ ಶಕ್ತಿಗೆ ಕಡಮೆಯಾದುದನ್ನು ಮಾಡುವವನು ಕಳ್ಳ. ನಾವು ಒಂದು ವೇಳಾಪಟ್ಟಿಯನ್ನು ಇಟ್ಟುಕೊಂಡರೆ, ನಮಗೆ ಗೋಚರವಿಲ್ಲದೆಯೂ ಈ ಪಾಪವನ್ನು ಎಸಗದಿರಲು ಸಾಧ್ಯವಾದೀತು. ಈ ವೇಳಾಪಟ್ಟಿಯನ್ನು ಹರ್ಷದಿಂದಲೂ ಅರ್ಥಪೂರಿತವಾಗಿಯೂ ಅನುಸರಿಸದಿದ್ದರೆ ಅದು ಹೆಚ್ಚಿನ ಫಲ ನೀಡಲಾರದು.

## ಕಾರ್ಯಕರ್ತನೊಬ್ಬನಿಗೆ

ಜುಲೈ ೧೪, ೧೯೩೨

(ಬಾಪೂ ನಾಸ್ತಿಕನೊಬ್ಬನಿಗೆ ತಮ್ಮ ಸ್ವಹಸ್ತದಿಂದ ಹೀಗೆ ಬರೆದರು :)

ಚೇತನಾತ್ಮಕವಾದ ಈ ಜಗತ್ತು ಒಂದು ನಿಯಮಬದ್ಧವೆಂಬುದರಲ್ಲಿ ಸಂದೇಹವೇ ಇರಲಾರದು. ಈ ನಿಯಮಕ್ಕೆ ಕರ್ತೃವೊಬ್ಬನಿಲ್ಲವೆಂದು ನೀವು ಭಾವಿಸುವುದಾದರೆ, ಆ ನಿಯಮವೇ ನಿಯಮದ ಕರ್ತೃ, ದೇವರು ಎಂದೇನು ನಾನು. ಈ ನಿಯಮವನ್ನು ಕುರಿತು ನಾವು ಪ್ರಾರ್ಥಿಸಿದಾಗ ಇದನ್ನು ಅರಿತುಕೊಂಡು ಅದರಂತೆ ಪಾಲಿಸಬೇಕೆಂಬುದೇ ನಮ್ಮ ಆಕಾಂಕ್ಷೆ. ಇದೇ ಪ್ರಾರ್ಥನೆಯ ಆವಶ್ಯಕತೆ. ನಮ್ಮ ಇಂದಿನ ಜೀವನಕ್ಕೆ ಹಿಂದಿನದು ಕಾರಣವಾಗಿದ್ದರೆ ಇದೇ ಕಾರಣ–ಕಾರ್ಯ ನಿಯಮದ ಪ್ರಕಾರ ನಮ್ಮ ಭವಿಷ್ಯವೂ ಇಂದಿನ ಜೀವನದಿಂದ ಪರಿಣಾಮಗೊಂದಬೇಕು. ಎರಡು–ಮೂರು ಮಾರ್ಗಗಳಲ್ಲಿ ಯಾವುದು ನಮಗೆ ಇಚ್ಛೆಯೋ ಅದನ್ನೇ ಮಾಡಬೇಕು.

ಕೆಟ್ಟುದು ಏಕಿದೆ? ಅದರ ಅರ್ಥವೇನು? — ಈ ಪ್ರಶ್ನೆಗಳು ನಮ್ಮ ಪರಿಮಿತ ವಿಚಾರಶಕ್ತಿಗೆ ಮೀರಿದವು. ಒಳ್ಳೆಯದೂ ಕೆಟ್ಟುದೂ ಎರಡೂ ಇವೆ—ಎಂಬುದನ್ನು ಅರಿತುಕೊಂಡರೆ ಸಾಕು—ಒಳ್ಳೆಯದಕ್ಕೂ ಕೆಟ್ಟುದಕ್ಕೂ ನಮಗೆ ವ್ಯತ್ಯಾಸ ತಿಳಿದಂತೆ, ಒಳ್ಳೆಯದನ್ನು ಆರಿಸಿಕೊಂಡು ಕೆಟ್ಟುದನ್ನು ತ್ಯಜಿಸಬೇಕು.

## ದೇವದಾಸನಿಗೆ

ಜುಲೈ ೭, ೧೯೩೨

(ದೇವದಾಸನಿಗೆ ಹೀಗೆ ಬರೆದರು :)

ಈಚೀಚೆಗೆ ಅಂಚೆ ನಮಗೆ ಕ್ರಮವಾಗಿ ತಲಪುತ್ತಿಲ್ಲ, ಏಕೆಂದರೆ ಅದು ಅನೇಕ ಹಸ್ತಾಂತರವಾಗುತ್ತಿದೆ. ಹೇಗಾದರೂ ಆಗಲಿ, ತಲಪುತ್ತಿವೆಯಲ್ಲಾ, ಎಂಬುದೇ ನನಗೆ ಒಂದು ತೃಪ್ತಿ. ಸೆರೆಯಾಳಿಗೆ ಯಾವ ಹಕ್ಕು ಉಂಟು? ಸೆರೆಮನೆಯ ವಾಸವೆಂದರೆ ಎಲ್ಲ ಹಕ್ಕುಗಳನ್ನೂ ಕಳೆದು

ಕೊಂಡಂತೆ. ಇದನ್ನು ಅರಿತುಕೊಂಡು ನನ್ನ ಮನಸ್ಸಿನ ನೆಮ್ಮದಿಯನ್ನು ರಕ್ಷಿಸಿಕೊಂಡಿದೇನೆ ನಾನು. ನನ್ನ ಭೇಟಿಗೂ ಇದೇ ಅನ್ವಯಿಸುತ್ತದೆ. ಮಹಾದೇವನನ್ನು ನೋಡಲು ನಿನಗೆ ಬಹುಶಃ ಅವಕಾಶ ದೊರೆತೀತು, ಆದರೆ ನೀನು ಸೂಚಿಸುವಂತೆ ವೇಳಾಪಟ್ಟಿಯನ್ನು ಹಾಕಲು ಸಾಧ್ಯವಿಲ್ಲ. ನೀನು ಭೇಟಿ ದೊರಕದಿರುವ ಸ್ಥಿತಿಗೂ ಸಿದ್ಧವಿರಬೇಕು, ಅಥವಾ ಭೇಟಿಯ ಅಭಿಪ್ರಾಯವನ್ನೇ ಪೂರ್ಣವಾಗಿ ತ್ಯಜಿಸಬೇಕು. ನಿನ್ನನ್ನೂ ಲಕ್ಷ್ಮಿಯನ್ನೂ ಭೇಟಿಯಾಗಿದ್ದರೆ ನನಗೆ ಹರ್ಷವಾಗುತ್ತಿತ್ತು. ಆದರೆ ಮೀರಾಬೆಹನಳನ್ನು ಭೇಟಿಯಾಗಲು ನನಗೆ ಅನುಮತಿ ದೊರಕುವವರೆಗೂ ನಾನು ಬೇರೆ ಯಾರನ್ನೂ ನೋಡಲು ನಿರಾಕರಿಸಿದುದು ಸೂಕ್ತವಾದುದೆಂಬ ಬಗೆಗೆ ನನ್ನಲ್ಲಿ ಶಂಕೆಗೆ ಎಡೆಯೇ ಇಲ್ಲ. ಇದರಿಂದ 'ಬಾ'ಗೆ ತೀವ್ರ ವ್ಯಸನವೆನಿಸೀತು; ಆದರೆ ದುಃಖಾನುಭವ ಅವಳಿಗೆ ಸಂಗಾತಿ ಎನಿಸಿದೆ. ನನ್ನೊಂದಿಗೆ ಯಾರು ಸಂಬಂಧವನ್ನು ಇಟ್ಟುಕೊಂಡಿರುವರೋ ಅವರು ಅದಕ್ಕೆ ಭಾರಿ ಬೆಲೆ ತೆರಬೇಕು. ಇಂಥ ಅತ್ಯಂತ ಬೆಲೆಯನ್ನು 'ಬಾ' ತೆತ್ತಿದ್ದಾಳೆ. ಇದರಿಂದ ಅವಳಿಗೆ ಯಾವ ನಷ್ಟವೂ ಇಲ್ಲವೆಂದು ನಾನು ಭಾವಿಸುತ್ತೇನೆ.

## ಕಾರ್ಯಕರ್ತನೊಬ್ಬನಿಗೆ

(ಬಾಪೂ ಆಶ್ರಮಕ್ಕೆ ಬರೆದ ಈ ವಾರದ ಪತ್ರದ ವಿಷಯ ಪ್ರಾರ್ಥನೆಯನ್ನು ಕುರಿತುದಾಗಿತ್ತು. ಇನ್ನೊಂದು ಪತ್ರದ ವಿಷಯವೂ ಇದೇ ಆಗಿತ್ತು. ಮೊದಲನೆಯ ಪತ್ರದಲ್ಲಿ ವೈಯಕ್ತಿಕ ಪ್ರಾರ್ಥನೆಯ ಆವಶ್ಯಕತೆಯನ್ನು ಒತ್ತಿ ಹೇಳಿ ಹೀಗೆ ಮುಂದುವರಿಸಿದರು :)

ವ್ಯಕ್ತಿ ಪ್ರಾರ್ಥನೆ ಸಲ್ಲಿಸುವಾಗ ಎಲ್ಲ ಅಂತರಂಗದ ಕಶ್ಮಲವನ್ನೂ ತ್ಯಜಿಸಿರಬೇಕು. ಬೇರೆಯವರೊಬ್ಬರ ಇದಿರಿಗೆ ಅನೀತಿಕೃತ್ಯವೊಂದನ್ನು ಮಾಡಲು ನಾಚುವಂತೆಯೇ ಭಗವಂತನ ಇದಿರಿನಲ್ಲಿಯೂ ಅವನು ವರ್ತಿಸಬೇಕು. ಭಗವಂತನಿಗೆ ನಮ್ಮ ಪ್ರತಿಯೊಂದು ಕ್ರಿಯೆಯೂ ಪ್ರತಿಯೊಂದು ಆಲೋಚನೆಯೂ ಗೊತ್ತಿರುತ್ತದೆ. ಅವನಿಗೆ ಗೋಚರವಾಗದಂತೆ ನಾವು ಯಾವೊಂದು ಕ್ರಿಯೆಯನ್ನಾಗಲಿ, ಯಾವೊಂದು ಆಲೋಚನೆ

ಯನ್ನಾಗಲಿ, ಒಂದು ಕ್ಷಣಕ್ಕೂ ಮಾಡಲು ಶಕ್ಯವಿಲ್ಲ. ಈ ಕ್ರಮದಲ್ಲಿ, ಯಾರು ಹೃದಯಾಂತರಾಳದಿಂದ ಪ್ರಾರ್ಥನೆ ಸಲ್ಲಿಸುವರೋ ಅವರು ಭಗವದ್ಭಾವಭರಿತರಾಗಿ ಪಾಪವಿಮುಕ್ತರಾಗುವರು.

(ಇನ್ನೊಂದು ಪತ್ರದಲ್ಲಿ ಹೀಗೆ ಬರೆದರು :)

ಒಬ್ಬ ವ್ಯಕ್ತಿಯನ್ನೋ ವಸ್ತುವನ್ನೋ ಕುರಿತು ಪ್ರಾರ್ಥನೆಯನ್ನು ಸಲ್ಲಿಸಬಹುದು; ಅದು ದಯಪಾಲಿಸಲ್ಪಟ್ಟೀತು. ಆದರೆ ಅಂಥ ಭಾವ ವನ್ನು ಉದ್ದೇಶದಲ್ಲಿಟ್ಟುಕೊಳ್ಳದೆ ಮಾಡಿದ ಪ್ರಾರ್ಥನೆಯಿಂದ ನಮಗೂ ಪ್ರಪಂಚಕ್ಕೂ ಹೆಚ್ಚು ಒಳ್ಳೆಯದಾದೀತು. ಪ್ರಾರ್ಥನೆ ನಮ್ಮ ಮೇಲೆ ಪ್ರಭಾವ ಬೀರುತ್ತದೆ; ನಮ್ಮ ಆತ್ಮ ಜಾಗೃತವಾಗುತ್ತದೆ, ಅದು ಜಾಗೃತ ವಾದಷ್ಟೂ ಅದರ ಪ್ರಭಾವ ಹೆಚ್ಚುತ್ತದೆ. ಪ್ರಾರ್ಥನೆ ಹೃದಯಕ್ಕೆ ಸಂಬಂಧಿಸಿದ ಕ್ರಿಯೆ. ಅದನ್ನು ಜಾಗೃತಗೊಳಿಸುವುದಕ್ಕೋಸ್ಕರ ನಾವು ಗಟ್ಟಿಯಾಗಿ ನುಡಿಯುತ್ತೇವೆ. ವಿಶ್ವದಲ್ಲಿ, ಅಂತರ್ಯಾಮಿಯಾಗಿರುವ ಶಕ್ತಿಯೇ ಮಾನವನ ಹೃದಯದಲ್ಲಿಯೂ ಇದೆ. ಶರೀರ ಅದಕ್ಕೆ ಯಾವ ಅಡಚಣೆಯನ್ನೂ ಒಡ್ಡಲಾರದು. ಅಡಚಣೆಗೆಲ್ಲ ನಾವೇ ಕಾರಣ; ಅದು ಸ್ವಯಂಕೃತ. ಪ್ರಾರ್ಥನೆಯಿಂದ ಅದು ದೂರವಾಗುತ್ತದೆ. ಪ್ರಾರ್ಥನೆ ಯಿಂದ ಅಪೇಕ್ಷಿಸಿದ ಫಲಿತಾಂಶ ದೊರೆಯಿತೋ ಇಲ್ಲವೋ ಎಂಬುದನ್ನು ನಾವು ಎಂದಿಗೂ ಅರಿಯಲಾರೆವು. ನರ್ಮದೆಗೆ* ನೋವು ಹೋಗಲೆಂದು ನಾನು ಪ್ರಾರ್ಥಿಸಬಹುದು; ಅವಳ ನೋವು ಹೋದ ತರುವಾಯ ಅದು ನನ್ನ ಪ್ರಾರ್ಥನೆಯ ಫಲವೆಂದು ಭಾವಿಸಬಾರದು. ಪ್ರಾರ್ಥನೆ ಎಂದಿಗೂ ನಿಷ್ಫಲವಲ್ಲ, ಆದರೆ ಅದರ ಫಲ ಏನೆಂಬುದನ್ನು ನಾವು ಅರಿಯಲಾರೆವು; ಅಥವಾ ಅದರಿಂದ ಅಪೇಕ್ಷಿಸಿದ ಫಲ ಸಿದ್ಧಿಸಿದರೆ, ಅದು ಒಳ್ಳೆಯದೆಂದು ನಾವು ಭಾವಿಸಬಾರದು. ಇಲ್ಲಿಯೂ ನಾವು ಗೀತಾಬೋಧೆಯನ್ನು ಅನುಷ್ಠಾನಕ್ಕೆ ತರಬೇಕು. ನಾವು ಯಾವುದಕ್ಕಾದರೂ ಪ್ರಾರ್ಥನೆ ಸಲ್ಲಿಸಿದರೂ, ಅದರ ಆಸಕ್ತಿ ಇಲ್ಲದೆಯೇ ಇರಬಹುದು. ಇತರರಿಗೆ ಮುಕ್ತಿ ಲಭಿಸಲಿ ಎಂದು ನಾವು ಪ್ರಾರ್ಥಿಸಬಹುದು, ಆದರೆ ಅದು ಅವರಿಗೆ

* ಒಬ್ಬ ಕಾರ್ಯಕರ್ತೆ ಇರಬೇಕು.

ಲಭಿಸಿತೋ ಇಲ್ಲವೋ ಎಂದು ಚಿಂತಿಸಬಾರದು. ನಾವು ಪ್ರಾರ್ಥಿಸಿದುದಕ್ಕೆ ವಿರುದ್ಧವಾದ ಫಲ ದೊರೆತರೂ ನಮ್ಮ ಪ್ರಾರ್ಥನೆಯನ್ನು ನಿಷ್ಫಲವೆನ್ನಲು ಅದೇ ಕಾರಣವೆಂದು ತೀರ್ಮಾನಿಸಲು ಬರುವುದಿಲ್ಲ.

## ಕಾರ್ಯಕರ್ತನೊಬ್ಬನಿಗೆ

ಜುಲೈ ೨೪, ೧೯೩೨

(ಪುರಾತನ್ ಬಚ್ಚನಿಗೆ ಬಾಪೂ ಹೀಗೆ ಬರೆದರು :)

ನೀನು ನನ್ನನ್ನು ಪ್ರಶ್ನೆಗಳನ್ನೇ ಕೇಳಬಾರದೆಂಬ ಉದ್ದೇಶದಿಂದ ಎಚ್ಚರಿಸಲಿಲ್ಲ; ನೀನು ಅಂತರ್ಮುಖಿಯಾಗಬೇಕೆಂಬುದೇ ನನ್ನ ಉದ್ದೇಶ. ನಾವು ಮೂಲತತ್ತ್ವಸಿದ್ಧಾಂತವನ್ನು ಅರಿತುಕೊಂಡಮೇಲೆ ಒದಗಿದ ಯಾವುದೇ ಸಂದರ್ಭಕ್ಕಾದರೂ ಅದನ್ನು ಉಪಯೋಗಿಸಲು ಸಾಧ್ಯವಿರಬೇಕು. ನಾವು ಇದನ್ನು ಮಾಡಲು ಸಾಧ್ಯವಿಲ್ಲವಾದರೆ, ನಮ್ಮ ಮೂಲ ಸಿದ್ಧಾಂತದ ಗ್ರಹಿಕೆ ಶಕ್ತಿಹೀನವೆಂದು ಅರ್ಥ. ಇದು ಜ್ಯಾಮಿತಿಶಾಸ್ತ್ರದಂತೆ. ಸಿದ್ಧಾಂತವೊಂದನ್ನು ಅರಿತುಕೊಂಡಮೇಲೆ ಅದಕ್ಕನ್ವಯಿಸುವ ಎಲ್ಲ ಸಮಸ್ಯೆಗಳನ್ನೂ ನಾವು ಉತ್ತರಿಸಬಹುದು.

(ಕಪಿಲನಿಗೆ ಹೀಗೆ ಬರೆದರು :)

ತಕಲಿಯಿಂದ ನೂಲುವುದು ಒಂದು ಸೇವಾಕಾರ್ಯ. ಶಿಶುಶಿಕ್ಷಣ ಅಥವಾ ನಿನ್ನ ಸುತ್ತಮುತ್ತಲಿನ ವಯಸ್ಕರಿಗೆ ರಾತ್ರಿಶಾಲೆಯನ್ನು ನಡೆಸುವುದೂ ಅಂತೆಯೇ. ಆತ್ಮಶುದ್ಧಿ—ಎಂದರೆ ಮನಸ್ಸಿಗೆ ಒಂದೂ ಅಪವಿತ್ರ ಭಾವನೆ ಬರದಿರುವಂತೆ ಪ್ರಯತ್ನಿಸುವುದೂ ಸೇವೆಯೆಂದೇ ನನ್ನ ಭಾವನೆ. ಇದು ರೋಗಗ್ರಸ್ತನಿಗೂ ಸುಲಭಸಾಧ್ಯ.

(....ಪ್ರಶ್ನಿಸಿದ: 'ಲೌಕಿಕ ಲಾಭ ಪಡೆಯುವ ಉದ್ದೇಶದಿಂದ ಅಸತ್ಯ ಮಾರ್ಗ ಅನುಸರಿಸುವ ವ್ಯಕ್ತಿ ದೇವರನ್ನು ಕಾಣಲು ಸಾಧ್ಯವೆ ಅಥವಾ ಸತ್ಯತತ್ತ್ವವನ್ನು ಆಚರಿಸಲು ಎಲ್ಲ ಕ್ರಿಯೆಗಳನ್ನೂ ತ್ಯಜಿಸುವ ವ್ಯಕ್ತಿಗೆ ಮಾತ್ರ ಆ ದಿವ್ಯ ದರ್ಶನ ಸಾಧ್ಯವೆ?' ಎಂದು. ಬಾಪೂ ಹೀಗೆ ಉತ್ತರವಿತ್ತರು :)

ಯಾವ ಉದ್ದೇಶದಿಂದಲೇ ಆಗಲಿ ಅಸತ್ಯಪಥ ಹಿಡಿದವನು ರಾಗ ದ್ವೇಷಗಳಿಂದ ಕೂಡಿದವನಾಗುತ್ತಾನೆ. ಅವನಿಗೆ ಎಂದಿಗೂ ಪರಮಪದ ಲಭಿಸದು. ನಿನ್ನ ಎರಡನೆಯ ಪ್ರಶ್ನೆ ಅಸಾಧ್ಯವಾದುದನ್ನು ಸೂಚಿಸುತ್ತದೆ, ಸತ್ಯಪಥ ಅನುಸರಿಸುವುದೂ, ಸಕಲ ಕ್ರಿಯೆಗಳನ್ನು ತ್ಯಜಿಸುವುದೂ ಪರಸ್ಪರ ವಿರೋಧವಾಗಿ ಕಾಣುತ್ತವೆ. ಕ್ರಿಯೆಯಲ್ಲಿ ತೊಡಗದ ವ್ಯಕ್ತಿ ತನ್ನ ಮಾರ್ಗದ ವಿಷಯವಾಗಿ ಏನನ್ನು ಹೇಳಬಲ್ಲ? ಸತ್ಯಪಥಾನುಸರಣೆ ಮಾಡುವುದೆಂದರೇನೇ, ಪ್ರಪಂಚದ ಜನರ ಮಧ್ಯೆ ಇದ್ದು ಕ್ರಿಯೆಯಲ್ಲಿ ತೊಡಗಿರುವುದೆಂದು ಅರ್ಥ. ಅಂಥ ಕ್ರಿಯೆಯೇ ಇಲ್ಲವಾದರೆ ಸತ್ಯವನ್ನು ಅನುಸರಿಸುವ ಅಥವಾ ಸತ್ಯದಿಂದ ವಿಮುಖವಾಗುವ ಪ್ರಶ್ನೆಯೇ ಇರುವುದಿಲ್ಲ. ಮಾನವ ವ್ಯಕ್ತಿ ಒಂದು ಕ್ಷಣವೂ ಕರ್ಮವಿಲ್ಲದೆ ಇರಲಾರನೆಂದು ಸ್ಪಷ್ಟವಾಗಿ ಹೇಳುತ್ತದೆ ಗೀತೆ. ಯಾರು ದೈವಭಕ್ತನಾಗಿರುವನೋ ಮತ್ತು ಯಾರು ಆ ರೀತಿ ಆಗಿಲ್ಲವೋ ಅವರಿಬ್ಬರಿಗೂ ಇಷ್ಟೇ ವ್ಯತ್ಯಾಸ ಎನ್ನಬಹುದು; ದೈವಭಕ್ತ ಪರಹಿತಕಾರ್ಯದಲ್ಲಿ ತೊಡಗಿದ್ದು ತನ್ನ ಕರ್ಮಗಳಲ್ಲಿ ಎಂದಿಗೂ ಸತ್ಯವನ್ನು ತ್ಯಜಿಸದೆ, ಕಾಲಾನುಕ್ರಮದಲ್ಲಿ ತನ್ನ ರಾಗದ್ವೇಷಗಳಿಂದ ಮುಕ್ತನಾಗುತ್ತಾನೆ; ಆ ರೀತಿ ಇಲ್ಲದವನು ಸದಾ ಸ್ವಾರ್ಥಮಗ್ನನಾಗಿದ್ದು, ಆ ಸ್ವಾರ್ಥಪರ ಉದ್ದೇಶಗಳನ್ನು ಹೊಂದುವುದಕ್ಕೋಸ್ಕರ ಉಪಯೋಗಿಸುವ ಸಾಧನಗಳ ಬಗೆಗೆ ಸ್ವಲ್ಪವೂ ಹಿಂದೆಮುಂದೆ ನೋಡುವುದಿಲ್ಲ. ಈ ಜಗತ್ತೇ ಕೆಟ್ಟ ಸ್ವಭಾವದ್ದಲ್ಲ, ಏಕೆಂದರೆ, ಕರ್ಮನಿರತವಾದ ಬಾಳಿನಿಂದಲೇ ನಾವು ಭಗವಂತನ ಸಾಕ್ಷಾತ್ಕಾರಹೊಂದಲು ಸಾಧ್ಯ. ಈ ಕರ್ಮ ಪರಹಿತಕಾರ್ಯವಾಗಬೇಕು. ಸ್ವಾರ್ಥಪರ ಕರ್ಮ ಖಂಡನೆಗೆ ಯೋಗ್ಯ, ತ್ಯಜಿಸಲ್ಪಡಬೇಕು.

## ಕಾಕಾ ಕಾಲೇಲ್‌ಕರ್ ಅವರಿಗೆ

(ಬಾಪೂ ನಕ್ಷತ್ರಗಳ ಅಧ್ಯಯನದ ಬಗೆಗೆ ಕಾಕಾ ಕಾಲೇಲ್‌ಕರರಿಗೆ ಹೀಗೆ ಬರೆದರು :)

ಈ ವಿಷಯದಲ್ಲಿ ನನ್ನ ಆಸಕ್ತಿಯ ಉದ್ದೇಶ ಬೇರೆ ರೀತಿಯದು. ನಾವು ಆಕಾಶದ ಕಡೆ ದೃಷ್ಟಿಸಿದಾಗ ಅನಂತದ ಕಲ್ಪನೆ ಅರಿವಾಗುತ್ತದೆ;

ನಮ್ಮನ್ನು ಶುದ್ಧಗೊಳಿಸುವ ಪರಿಶುದ್ಧತೆ, ಕ್ರಮಬದ್ಧತೆ ಮತ್ತು ದಿವ್ಯ ವೈಭವದ ಅರಿವೂ ಆಗುತ್ತದೆ. ಗ್ರಹ ಮತ್ತು ತಾರಾಲೋಕಗಳಲ್ಲಿ ಭೂಲೋಕದಲ್ಲಿರುವಂಥ ಜೀವನವೇ ಇದೆಯೆಂದು ಅಲ್ಲಿಗೆ ಹೋಗಿ ಸೇರುವ ಮಾನವನಿಗೆ ಅರಿವಾದೀತು. ಆದರೆ ಅವುಗಳ ಸೌಂದರ್ಯ ದೂರದಿಂದ ಅವರ್ಣನೀಯ ಶಾಂತಿಯನ್ನು ಬೆಳಗುತ್ತವೆ. ನಾವು ಒಮ್ಮೆ ಆಕಾಶ ದೊಂದಿಗೆ ಸಮರಸರಾದರೆ ಸಾಕು, ನಮ್ಮ ಭೂಲೋಕದ ಪರಿಸ್ಥಿತಿಯು ಎಲ್ಲ ಪ್ರಭಾವವನ್ನೂ ಕಳೆದುಕೊಳ್ಳುತ್ತದೆ. ನಾವು ಎಲ್ಲೇ ಇದ್ದರೂ ಸದಾ ಕಂಡುಬರುವ ಆಕಾಶ, ಚಿಮ್ಮಿಬಂದು ನಮ್ಮನ್ನು ಪವಿತ್ರಗೊಳಿಸುವ ಗಂಗೆ ಯಂತಿರುತ್ತದೆ. ಈ ಕಾರಣದಿಂದಲೇ ನಾನು ನಕ್ಷತ್ರಲೋಕವನ್ನು ವೀಕ್ಷಿಸಲು ಉತ್ಸುಕನಾಗಿದೇನೆ; ಈ ನನ್ನ ವಿಚಿತ್ರ ಆಸೆಯನ್ನು ತೃಪ್ತಿಪಡಿಸಿ ಕೊಳ್ಳಲು ಸಾಕಷ್ಟು ಜ್ಞಾನವನ್ನು ಸಂಪಾದಿಸಲು ಯತ್ನಿಸುತ್ತಿದೇನೆ.

## ಕಾರ್ಯಕರ್ತನೊಬ್ಬನಿಗೆ

ಜುಲೈ ೨೫, ೧೯೩೨

(....ರವರು ಅಶಕ್ತ ಮತ್ತು ರೋಗಗ್ರಸ್ತ ಮಕ್ಕಳು ಜನಿಸದಿರುವ್ರದಕ್ಕೆ ಕೃತಕ ಸಂತಾನನಿರೋಧ ಆವಶ್ಯಕವೆಂದು ಮತ್ತೆ ವಾದ ಮಾಡಿದರು. ಅವರಿಗೆ ಬಾಪೂ ಹೀಗೆ ಬರೆದರು :)

ಯಾವ ಸಂದರ್ಭದಲ್ಲಿಯೂ ಅದನ್ನು ಒಪ್ಪಿಕೊಳ್ಳುವ ಆವಶ್ಯಕತೆಗೆ ಮಾರ್ಗವೇ ಕಾಣುವುದಿಲ್ಲ. ನನಗೆ ಗೋಚರವಿಲ್ಲದಂತೆಯೇ ನಾನು ಪ್ರಾಚೀನ ಸಂಪ್ರದಾಯಗಳ ಪ್ರಭಾವಕ್ಕೆ ಗುರಿಯಾಗಿರಬಹುದಾದರೂ, ಇದರ ಆಚರಣೆಯನ್ನು ವಿರೋಧಿಸುವುದಕ್ಕೆ ನನ್ನನ್ನು ಸ್ಫೂರ್ತಿಗೊಳಿಸುವ ಕಾರಣಗಳು ಇನ್ನೂ ವಾಸ್ತವವಾಗಿವೆ. ಕೃತಕ ವಿಧಾನಗಳಿಂದ ಆಗಿರುವ ದುಷ್ಟ ಪರಿಣಾಮಗಳನ್ನು ನಾವೇ ಸ್ವತಃ ಕಾಣಬಹುದು. ಇದನ್ನು ಅಭ್ಯಸಿಸುವವರು ಈಗ ತಮ್ಮಲ್ಲಿರುವ ಅಲ್ಪಸ್ವಲ್ಪ ವೀರ್ಯವನ್ನೂ ಕಳೆದು ಕೊಳ್ಳುವರು. ಸಂತಾನನಿರೋಧ ಕುರಿತು ಹೇಳುವ ವಿಚಾರವೆಲ್ಲ ಕೆಟ್ಟದು ಮತ್ತು ಅಪಾಯಕರ. ಇದನ್ನು ಪ್ರತಿಪಾದಿಸುವವರು, ಮಾನವ ವ್ಯಕ್ತಿ

ಅವನಲ್ಲಿರುವ ಪಾಶವಿಕ ಸ್ವಭಾವವನ್ನು ತೃಪ್ತಿಪಡಿಸಿಕೊಳ್ಳುವ ಹಕ್ಕನ್ನು ಹೊಂದಿರುವುದಲ್ಲದೆ ಆ ರೀತಿ ತೃಪ್ತಿಪಡಿಸಿಕೊಳ್ಳುವುದು ಅವನ ಕರ್ತವ್ಯ ಎಂದೂ ಹೇಳುತ್ತಾರೆ; ಆ ರೀತಿ ತೃಪ್ತಿಪಡಿಸಿಕೊಳ್ಳದಿದ್ದರೆ ಅವನ ಬೆಳವಣಿಗೆ ಕುಂಠಿತವಾಗುತ್ತದೆಂದೂ ಹೇಳುತ್ತಾರೆ. ಈ ಹೇಳಿಕೆ ತಪ್ಪು ಎಂದು ನನ್ನ ಭಾವನೆ. ಕೃತಕ ವಿಧಾನಗಳನ್ನು ಉಪಯೋಗಿಸುವವನು ಇಂದ್ರಿಯನಿಗ್ರಹ ಮಾಡುವೆನೆನ್ನುವುದು ವ್ಯರ್ಥ ಪ್ರಲಾಪ. ಪಾಶವಿಕ ಕಾಮೇಚ್ಛೆಯನ್ನು ನಿಗ್ರಹಕ್ಕೆ ತಂದುಕೊಳ್ಳುವುದು ಅಸಾಧ್ಯ ಎಂಬ ಕಾರಣದಿಂದಲೇ ಸಂತಾನನಿರೋಧದ ವಾದ. ಇಂದ್ರಿಯನಿಗ್ರಹ ಅಸಾಧ್ಯ, ಅನಾವಶ್ಯಕ ಅಥವಾ ಕೆಡುಕಿನಿಂದ ಕೂಡಿದುದೆನ್ನುವುದು, ಧರ್ಮವನ್ನೂ ಅಲ್ಲಗಳೆದಂತೆ. ಏಕೆಂದರೆ, ಎಲ್ಲ ಧರ್ಮಗಳೂ ಇಂದ್ರಿಯನಿಗ್ರಹದ ತಳಹದಿಯ ಮೇಲೆಯೇ ನಿಂತಿರುತ್ತವೆ. ಕೆಲವು ನೇರವೂ, ಸರಳವೂ, ಅಪಾಯರಹಿತವೂ ಆದ ವಿಧಾನಗಳಿಂದ ಅಶಕ್ತ ಸಂತಾನವಾಗದಂತೆ ಮಾಡಿಕೊಳ್ಳಲು ಸಾಧ್ಯವಿದೆ. ಇಂಥದನ್ನೆಲ್ಲ ತ್ಯಜಿಸಿ, ಅಪಾಯಕರವಾದ ಸಂತಾನನಿರೋಧದ ಮಾರ್ಗವನ್ನು ಅನುಸರಿಸುವುದಾದರೂ ಏಕೆ? ಇದು ಅಪಾಯಕರವೆಂದು ಬಹುತೇಕ ಎಲ್ಲರೂ ಒಪ್ಪಿಕೊಳ್ಳುವರು. ಆದುದರಿಂದ ಕೃತಕ ವಿಧಾನಗಳು ಖಂಡನಾರ್ಹವೆಂದು ನನ್ನ ಭಾವನೆ. ನೀವು ಸೆರೆಮನೆಯಲ್ಲಿರುವುದರಿಂದ ದೀರ್ಘವಾಗಿ ಆಲೋಚನೆ ಮಾಡಲು ನಿಮಗೆ ಹೆಚ್ಚು ಕಾಲಾವಕಾಶವಿದೆ. ಆದುದರಿಂದ ನೀವು ಚೆನ್ನಾಗಿ ಆಲೋಚನೆ ಮಾಡಿರಿ ಎಂದು ನಾನು ಸಲಹೆಮಾಡುತ್ತೇನೆ. ಇದನ್ನು ಮಾಡಿದಮೇಲೆ ನೀವು ಯಾವ ತೀರ್ಮಾನಕ್ಕೆ ಬಂದರೂ ನನ್ನ ಆಕ್ಷೇಪವಿಲ್ಲ. ನಿಮ್ಮ ನೇರ ವರ್ತನೆ ನಿಮ್ಮನ್ನು ತಪ್ಪಿನಿಂದ ಪಾರುಮಾಡೀತು. ಇದಕ್ಕೆ ಪ್ರತಿಯಾಗಿ ನಾನು ತಪ್ಪು ಮಾಡಿದ್ದರೆ ನೀವು ನನ್ನನ್ನೂ ತಿದ್ದಬಹುದು. ಸಂತಾನನಿರೋಧ ಒಂದು ಕರ್ತವ್ಯವೆಂದು ನೀವು ಭಾವಿಸುವುದಾದರೆ ನಿಮ್ಮ ಅಭಿಪ್ರಾಯಕ್ಕೆ ನನ್ನನ್ನು ಪರಿವರ್ತಿಸುವವರೆಗೂ ನೀವು ಸುಮ್ಮನಿರಬಾರದು. ನನ್ನನ್ನು ಒಪ್ಪಿಸುವುದು ಸುಲಭಸಾಧ್ಯ. ಯಾವುದಾದರೊಂದು ಅಭಿಪ್ರಾಯವನ್ನು ನಾನು ಭದ್ರವಾಗಿ ಹಿಡಿದುಕೊಂಡಿದ್ದರೂ ಅದು ನನಗೆ ತಪ್ಪೆಂದು ಕಂಡು ಬಂದ ಕೂಡಲೇ ಅದನ್ನು ತ್ಯಜಿಸುತ್ತೇನೆ.

## ಷಿರೀನೀಬಾಯಿಗೆ

ಜುಲೈ ೨೬, ೧೯೩೨

ನನ್ನ ಪ್ರಿಯ ಭಗಿನಿ,

ಈ ದಿನ ನಿನ್ನ ವ್ಯಸನಭರಿತ ಪತ್ರ ನನಗೆ ತಲಪಿತು. ನನಗೆ ತಲಪುವುದಕ್ಕೆ ಮುಂಚೆ ಅದು ಎಷ್ಟೋ ಹಸ್ತಾಂತರವಾಯಿತು. ನಿನಗೂ ನಿನ್ನ ವೃದ್ಧ ತಾಯಿಗೂ ನನ್ನ ಅಂತಃಕರಣ ಹರಿಯುತ್ತದೆ. ನಾವು ದೇವರನ್ನು ಬೈಯಬಹುದು, ಅವನು ಇಲ್ಲವೆನ್ನಬಹುದು. ಇದೆಲ್ಲ ನಮ್ಮ ಅಜ್ಞಾನ. ನಾವು ಪ್ರತಿದಿನವೂ ಬೆಳಗಿನ ಪ್ರಾರ್ಥನೆಯಲ್ಲಿ ಹೇಳುವ ಒಂದು ಸುಂದರ ಸಂಸ್ಕೃತ ಶ್ಲೋಕ ಈ ರೀತಿ ಇದೆ: 'ವಿಪತ್ತು ಎಂದು ಕಂಡುಬಂದುದು ವಿಪತ್ತಲ್ಲ, ಸಂಪತ್ತೆಂದು ಕಂಡುಬಂದುದು ಸಂಪತ್ತಲ್ಲ, ಭಗವಂತನನ್ನು ಮರೆತುದೇ ವಿಪತ್ತು, ಅವನು ನಮ್ಮ ಹೃದಯಸಿಂಹಾಸನ ದಲ್ಲಿ ರಾರಾಜಿಸಿದಾನೆಂದು ಭಾವಿಸುವುದು ನಿಜ ಸಂಪತ್ತು.' ಒಬ್ಬ ಆಂಗ್ಲ ಕವಿ ಹೀಗೆ ಹೇಳಿಲ್ಲವೆ? 'Things are not what they seem.' (ತೋರಿಕೆಯೇ ನಿಜ ವಸ್ತುವಲ್ಲ.) ಇದರ ಸತ್ಯಾಂಶವಿಷ್ಟು: ಭಗವಂತನ ಎಲ್ಲ ಕಟ್ಟಲೆಗಳೂ ನಮಗೆ ಅರಿವಾಗುವುದೆಂದರೆ, ಯಾವುದನ್ನು ನಾವು ವರ್ಣಿಸಲಸಾಧ್ಯವೋ ಅದನ್ನು ವರ್ಣಿಸಿದಂತೆ. ನಿನ್ನ ಸಹೋದರ ನಮ್ಮಿಂದ ಬೇರ್ಪಟ್ಟದ್ದು* ವ್ಯಸನಕರವೆಂದು ನೀನೇಕೆ ಭಾವಿಸುತ್ತೀಯೆ? ನಮಗಂತೂ ಏನೂ ಅರಿವಾಗದು. ಆದರೂ ಇದನ್ನು ಅರಿತಿದೇವೆ, ಅಥವಾ ಅರಿಯ ಬೇಕು; ಭಗವಂತ ಪೂರ್ಣ ಸೌಜನ್ಯಪರ, ನ್ಯಾಯಪರ ಎಂದು. ನಿನ್ನ ಇತರ ಸಹೋದರರ ಅನಾರೋಗ್ಯಸ್ಥಿತಿಯೂ ದುರದೃಷ್ಟವೆನಿಸಲಾರದು. ಇಡೀ ಜೀವನ ಒಂದು ಸಂಯಮವಾಗಬೇಕು. ನಾವು ಕ್ಲೇಶಾನುಭವದ ಅಗ್ನಿಕುಂಡವನ್ನು ಹೊಗಲೇಬೇಕು. ಆದುದರಿಂದ ನೀನೂ ಮತ್ತು ನಿನ್ನ ತಾಯಿಯೂ ಈ ಎಲ್ಲ ಕ್ಲೇಶಗಳಿದ್ದರೂ ನಿಜವಾಗಿ ಹರ್ಷಿಸುವಿರೆಂದು ನಾನು ಬಯಸುತ್ತೇನೆ. ನಿಮಗೆ ಶಾಂತಿ ಲಭಿಸಲಿ.

---

* ಸೆರೆಮನೆಯಿಂದ ಇರಬೇಕು. ಇದು ಯಾರೋ ಗೊತ್ತಾಗುವುದಿಲ್ಲ.

## ರಾಜಾಜೀಯವರಿಗೆ

(ರಾಜಾಜೀ ತಮ್ಮ ಅಳಿಯ ವಿಧಿವಶರಾದ ಸುದ್ದಿಯನ್ನು ತಿಳಿಸಿ ಒಂದು ಪತ್ರ ಬರೆದಿದ್ದರು. ಅದಕ್ಕೆ ಬಾಪೂ ಹೀಗೆ ಉತ್ತರವಿತ್ತರು :)

೨೩ರಂದು ನೀವು ಬರೆದ ಹೃದಯವಿದ್ರಾವಕ ಪತ್ರ ಇಂದು ನನ್ನ ಹಸ್ತ ಸೇರಿತು. ಪಾಪಾ ಬರೆದಿರುವ ಪತ್ರ ಇನ್ನೂ ನನ್ನ ಕೈಸೇರಿಲ್ಲ. ಅಧಿಕಾರಿಗಳು ನನ್ನ ಕಾಗದಪತ್ರಗಳನ್ನು ಪರಿಶೀಲಿಸುತ್ತಾರೆ. ಆದುದರಿಂದ ಅವು ನನ್ನ ಕೈಸೇರಲು ಬಹಳ ನಿಧಾನವೂ, ಅನಿಶ್ಚಿತ ಸ್ಥಿತಿಯೂ ಉಂಟಾಗುತ್ತದೆ. ನನಗೆ ಬರುವ ಪತ್ರಗಳು ಸಕಾಲದಲ್ಲಿ ಸೇರುತ್ತವೆ.

ನಿಮಗೆ ಸಂಭವಿಸಿರುವ ದುರಂತದ ಸಂದರ್ಭದಲ್ಲಿ ಸಾವಿನ ಬಗೆಗೆ ನಾನು ವಿಚಾರ ಮಾಡಲು ಇಚ್ಛಿಸುವುದಿಲ್ಲ. ಜಾಬ್* ಹೇಳಿದಂತೆ— 'ಕ್ಲೇಶಭರಿತ ಸಮಾಧಾನ' ಎಂದೀರಿ ನೀವು. ಆದರೆ ಭಗವಂತನನ್ನು ಅರಿವುದೆಂದರೆ, ಸಾವಿನಲ್ಲಿಯೂ ನಾವು ಆನಂದ ಪಡಬೇಕೆಂದು ನಾನು ಭಾವಿಸುತ್ತೇನೆ. ಗುಜರಾತಿನ ಪ್ರಥಮ ಕವಿ–ಭಕ್ತ ನರಸಿಂಹ ಮೆಹತಾ ತಮ್ಮ ಪುತ್ರನನ್ನು ಕಳೆದುಕೊಂಡಾಗ ಹರ್ಷಭರಿತರಾಗಿ, 'ನನಗೆ ಈ ಹೊರೆ ಕಡಮೆಯಾದುದು ಒಳಿತೇ ಆಯಿತು. ನಾನಿನ್ನು ಜಾಗ್ರತೆ ಭಗವಂತನನ್ನು ಕಂಡೇನು' ಎಂದು ಉದ್ಗಾರ ತೆಗೆದರಂತೆ. ಇದನ್ನು ಒಂದು ಸುಂದರ ಗೀತೆ ಕಾವ್ಯದ ಅನ್ವಯರಹಿತ ಭಾಷಾಂತರವಿದ್ದಂತೆ ಎನ್ನಬಹುದು. ಈ ಕಾರ್ಗತ್ತಲು ಹರಿದು ನಿಮಗೆ ಅತಿಶಯ ಬೆಳಕು ದೊರಕಲಿ. ನಮ್ಮಲ್ಲಿ ಯಾರಿಂದಲೂ ನೀವು ಸಮಾಧಾನವನ್ನು ನಿರೀಕ್ಷಿಸುವ ಆವಶ್ಯಕತೆ ಇಲ್ಲ ಎಂತಲೂ, ಅದು ಅಂತರಂಗದಿಂದಲೇ ಹೊಮ್ಮಬೇಕೆಂತಲೂ ನಾನು ಬಲ್ಲೆ. ನಾವು ಮೂವರೂ† ಯಾವ ರೀತಿ ಭಾವಿಸುತ್ತಿದೇವೆಂಬುದಕ್ಕೆ ಇದೊಂದು ಕೇವಲ ನಿದರ್ಶನ.

---

* ಬೈಬಲಿನ ಹಳೆ ಒಡಂಬಡಿಕೆಯಲ್ಲಿ ಬರುವ ಒಬ್ಬ ವ್ಯಕ್ತಿ.

† ಬಾಪೂ, ಬಾ, ಮಹಾದೇವ್ ಇರಬೇಕು.

## ಸುಬ್ಬಯ್ಯನಿಗೆ*

(ಸೆರೆಮನೆಯಿಂದ ಬಿಡುಗಡೆ ಹೊಂದಿದ ದಿನವೇ ಸುಬ್ಬಯ್ಯನ ಮಗಳು ಕಾಲವಶವಾದಳು. ಬಾಪೂ ಆತನಿಗೆ ಈ ರೀತಿ ಬರೆದರು :)

ತನ್ನ ಮಗಳ ವಿಷಯವಾಗಿ ಅಷ್ಟು ಪ್ರೇಮದಿಂದ ಬರೆಯುತ್ತಿದ್ದ ಲಲಿತಳಿಗೂ† ನಿನಗೂ ಸಂಭವಿಸಿರುವ ನಷ್ಟದಿಂದ ಆಗಿರುವ ದುಃಖವನ್ನು ನಾನು ಅರಿತುಕೊಳ್ಳಬಲ್ಲೆ. ಆದರೆ ಆಶ್ರಮದಲ್ಲಿ ಬಹಳ ಕಾಲ ವಾಸಿಸಿರುವ ನಿನಗೆ ಇಂಥ ಸಂದರ್ಭಗಳಲ್ಲಿ ಏನನ್ನು ತಿಳಿದುಕೊಳ್ಳಬೇಕೆಂಬುದು— ಕೊಟ್ಟ ದೇವರು ಅದನ್ನು ಅವನೇ ಪುನಃ ತೆಗೆದುಕೊಳ್ಳುವ ಅಧಿಕಾರವನ್ನು ಹೊಂದಿವಾನೆ ಎಂಬುದು—ಅರಿವಾಗಿರಬೇಕು. ನಮ್ಮ ನಂಬಿಕೆಯೂ ನಿನಗೆ ಗೊತ್ತಿದೆ. ಇದು ನಮ್ಮ ನಂಬಿಕೆ: ನಾವೆಲ್ಲ ಋಣಭರಿತರಾಗಿ ಈ ಲೋಕದಲ್ಲಿ ಜನಿಸುತ್ತೇವೆ; ತಾತ್ಕಾಲಿಕವಾಗಿ ಅದು ತೀರಿದಾಗ ನಾವು ಪ್ರಯಾಣ ಮಾಡುತ್ತೇವೆ. ಋಣ ತೀರಿಸಿರುವ ಮಗು ಮುಕ್ತವಾದಂತೆ. ನೀನೂ, ಲಲಿತ ಮತ್ತು ನಾವೆಲ್ಲ ಇನ್ನೂ ಋಣ ತೀರಿಸಬೇಕಾಗಿದೆ

## ಕಾರ್ಯಕರ್ತನೊಬ್ಬನಿಗೆ

ಜುಲೈ ೨೭, ೧೯೩೨

(....ಅವರಿಗೆ ಎರಡನೆಯ ವಿವಾಹವನ್ನು ಸಲಹೆಮಾಡುತ್ತಾ ಬಾಪೂ ಹೀಗೆ ಬರೆದರು :)

ಸದ್ಯಕ್ಕಂತೂ ನಿಮಗೆ ಜಯಿಸಲು ಅಸಾಧ್ಯವೆನಿಸಿರುವ ಪಾಶವಿಕ ಕಾಮೇಚ್ಛೆಯನ್ನು ಎಂದಾದರೊಂದು ದಿವಸ ಜಯಿಸಲು ಇದೇ ಮಾರ್ಗ. ಆ ಇಚ್ಛೆಯಿಂದಲೇ ನಿಮ್ಮ ಸುಖ ಜನಿಸುತ್ತದೆ. ನೀವು ಒಳ್ಳೆ ಭೋಜನ ಪ್ರಿಯರಾಗಿರುವುದು ನನಗೇನೂ ಆಶ್ಚರ್ಯಕರವಾಗಿ ಕಂಡುಬರುವುದಿಲ್ಲ, ಏಕೆಂದರೆ ಇವೆಲ್ಲ ಜೊತೆಗೂಡಿ ಹೋಗುತ್ತವೆ. ನೀವು ನಿಮ್ಮ ಕಾರ್ಯದಲ್ಲಿ ನಿಮಗ್ನರಾಗಿದೀರೆಂದು ಹೇಳುತ್ತೀರಿ. ಇದನ್ನು ನಾನು ನಂಬಲಾರೆ. ಹೀಗೆ ಹೇಳಿದರೆ ನೀವು ಎಚ್ಚರಿಕೆ ತಪ್ಪಿದವರೆಂದು ಹೇಳಿದಂತಲ್ಲ. ಆದರೆ ತನ್ನ

* ಒಬ್ಬ ಸತ್ಯಾಗ್ರಹಿ ಇರಬೇಕು. † ಸುಬ್ಬಯ್ಯನ ಪತ್ನಿ ಇರಬೇಕು.

ಕರ್ತವ್ಯಗಳಲ್ಲಿ ನಿಮಗ್ನನಾದ ವ್ಯಕ್ತಿ ಎಂದಿಗೂ ಕಾಮೇಚ್ಛೆಗೆ ಗುಲಾಮನಾಗಿರುವುದಿಲ್ಲ. ಅಂಥದಕ್ಕೆ ಅವನಿಗೆ ವಿರಾಮವೇ ಇರಲಾರದು. ನಿಮ್ಮ ಸ್ಥಿತಿಯಂತೂ ನಿಜವಾಗಿ ಈ ರೀತಿ ಇಲ್ಲ. ನೀವು ನಿಮ್ಮ ಕಾರ್ಯದಲ್ಲಿ ನಿಮಗ್ನರಾಗಿರುವುದಲ್ಲದೆ ಕಾಮೇಚ್ಛೆಯನ್ನು ದಮನಗೊಳಿಸುವ ಕಾರ್ಯದಲ್ಲೂ ತೊಡಗಿದೀರೆಂಬುದು ಸ್ಪಷ್ಟವಾಗಿದೆ. ಆದರೆ ಈ ಎರಡು ಗುರಿಗಳಲ್ಲಿ ನೀವು ಯಾವುದನ್ನೂ ಸಾಧಿಸಲು ಸಾಧ್ಯವಾಗಿಲ್ಲ. ನೀವು ನಿಮ್ಮ ಕಾರ್ಯಗಳಲ್ಲಿ ನಿಮಗ್ನರಾಗಿರುವಾಗಲೂ ದುರ್ಭಾವನೆ ನಿಮ್ಮನ್ನು ಕಾಡುತ್ತಿದೆ. ನಾನೂ ಒಮ್ಮೆ ಇಂಥ ದುಃಖಸ್ಥಿತಿಯಲ್ಲಿದ್ದೆ. ನನ್ನ ಕಾರ್ಯಗಳಲ್ಲಿ ನನಗೆ ತಪ್ಪುಗಳು ಕಂಡುಬರುವಂತೆ ಇತರರಿಗೆ ಕಂಡುಬರಲಾರದು. ಇದರ ಪರಿಣಾಮವಾಗಿಯೇ, ಸೇವಾನಿರತರಿಗೆ ಬ್ರಹ್ಮಚರ್ಯದ ಆವಶ್ಯಕತೆ ನನಗೆ ಕಂಡುಬಂದುದು.

(ಶ್ರೀಮತಿ ....ಅವರಿಗೆ :)

ನೀವು ವಾಸ್ತವವಾಗಿಯೂ ಪಾಶವಿಕ ಕಾಮೇಚ್ಛೆಯಿಂದ ಮುಕ್ತರಾಗಿದ್ದರೆ ನಿಮ್ಮ ಪತಿಯ ಇಚ್ಛೆಯನ್ನು ಸಲ್ಲಿಸಿಯೂ ಸಲ್ಲಿಸದಂತಿರಬಹುದು. ಪ್ರಾಪಂಚಿಕ ಲಾಲಸೆಗಳಿಂದ ಕೂಡಿರುವ ಎಲ್ಲ ಮನುಷ್ಯರ ಅನುಭವವೂ ಇದೇ. ಅತೃಪ್ತಿಯಿಂದ ಆಸೆ ಹೆಚ್ಚುತ್ತದೆ. ನೀವೀರ್ವರೂ ಒಂದುಗೂಡಿ ಇರಬೇಕೆಂದರೆ ನೀವು ನಿಮ್ಮ ಪತಿಯ ಭೋಗೇಚ್ಛೆಯಲ್ಲಿ ಆಸಕ್ತರಾಗಿರಬೇಕು. ಇದು ನಿಮಗೆ ಅಸಾಧ್ಯವೆನಿಸಿದರೆ, ನೀವು ಅವರ ಸಂಗಡ ವಾಸಿಸಲೇಬಾರದು. ಸದ್ಯಕ್ಕೆ ನೀವೀರ್ವರೂ ಜೊತೆಗೂಡಿ ಇರುವುದರಿಂದ ಯಾವ ಒಳ್ಳೆಯದೂ ಆಗದು. ನೀವು ಪರಸ್ಪರ ವಂಚಿಸಿಕೊಂಡಂತಾಗುತ್ತದೆ, ಜಗತ್ತನ್ನೂ ವಂಚಿಸಿದಂತಾಗುತ್ತದೆ. ನನ್ನೊಬ್ಬನನ್ನು ಬಿಟ್ಟು ಉಳಿದವರೆಲ್ಲರೂ ನೀವು ಆಶ್ರಮದಲ್ಲಿ ಜೀವಿಸುತ್ತಿದ್ದಂತೆ ಸಂನ್ಯಾಸಿಯಾಗಿಯೂ ಸಂನ್ಯಾಸಿನಿಯಾಗಿಯೂ ಬಾಳುತ್ತಿರುವಿರೆಂದು ನಂಬಿದಾರೆ. ನೀವು ಈ ಅಸತ್ಯದಿಂದ ದೂರವಾಗಬೇಕಲ್ಲದೆ, ಒಬ್ಬರು ಮತ್ತೊಬ್ಬರಿಗೆ ಹೊಂದುವಂಥ ಸಂಗಾತಿಯನ್ನು ಕಂಡುಕೊಳ್ಳಬೇಕು. ನಿಮ್ಮ ಸದ್ಯದ ಸ್ಥಿತಿ ನಿಂದಾರ್ಹವೆಂದು ನಾನು ಭಾವಿಸುತ್ತೇನೆ. ನಿಮ್ಮ ಪತಿ ಮತ್ತೊಬ್ಬಾಕೆ

ಯನ್ನು ವಿವಾಹವಾದರೆ ಆತನ ಜೀವನ ಸಹಜಸ್ವರೂಪ ಪಡೆಯುವು ದೆಂದೂ, ಅದರಿಂದ ಕಳಂಕರಹಿತವಾಗಿ ಎಲ್ಲ ಸರಿಹೋಗುವುದೆಂದೂ ನಾನು ಭಾವಿಸುತ್ತೇನೆ. ಈ ಸುಧಾರಣೆಯನ್ನು ಮಾಡಿಕೊಳ್ಳುವ ದೃಷ್ಟಿ ಯಿಂದ ನೀವು ಪರಸ್ಪರ ಸ್ಪಷ್ಟವಾಗಿ ಮಾತುಕತೆಯಾಡಿಕೊಂಡು, ನಿಮಗೆ ಸೂಕ್ತವೆನಿಸುವ ತೀರ್ಮಾನಕ್ಕೆ ಬರುವುದು ಉತ್ತಮ. ಈ ಮಾರ್ಗ ದಿಂದಲೇ ಆತ ಒಂದಲ್ಲ ಒಂದು ದಿನ ಕಾಮೋಚ್ಛೆಯಿಂದ ಪಾರಾಗಬಹುದು. ಆದರೆ ಈಗಿನ ಸ್ಥಿತಿಯಲ್ಲಿ ಆತ ಹೆಚ್ಚು ಕಿರಿಕಿರಿಗೂ ಹೆಚ್ಚು ಆಸೆಗೂ ಪಾತ್ರ ಗುರಿಯಾದಾನು. ನೀವಂತೂ ನಿಮ್ಮ ವೈಶಿಷ್ಟ್ಯವನ್ನು ಕಳೆದುಕೊಳ್ಳ ಬಾರದು. ನಿರಾಶರಾಗಬೇಡಿ. ದೇವರು ನಿಮಗೆ ನೆರವಾಗಲಿ.

ಜುಲೈ ೩೧, ೧೯೩೭

(....ಅವರು ತಾವು ಏಕಾಂಗಿ ಎಂಬ ಭಾವದಿಂದ ಕೂಡಿರುವುದಾಗಿಯೂ, ಯಾವುದಕ್ಕೂ ಪ್ರಯೋಜಕರಲ್ಲವೆಂಬುದಾಗಿಯೂ ಬರೆದ ಪತ್ರಕ್ಕೆ ಬಾಪೂ ಹೀಗೆ ಉತ್ತರಿಸಿದರು :)

ಏಕಕಾಲದಲ್ಲಿ ಸೂಕ್ಷ್ಮವಾದ ಹೆಮ್ಮೆ ಮತ್ತು ಆತ್ಮವಿಶ್ವಾಸಶೂನ್ಯತೆ ಇವುಗಳಿಂದ ನೀವು ತೊಳಲುತ್ತಿದೀರಿ. ಯಾವ ಅನೇಕ ಮಾನವ ವ್ಯಕ್ತಿಗಳ ಸೇವೆಗಾಗಿ ನೀವು ನಿಮ್ಮ ಬಾಳನ್ನು ನಿವೇದಿಸಿಕೊಂಡಿದೀರೋ ಮತ್ತು ಅವರಲ್ಲಿ ಪ್ರತಿಯೊಬ್ಬರೂ ನಿಮ್ಮ ಸೇವೆಯನ್ನೇ ಬೇಡುತ್ತಿರುವರೋ ಇಂಥವರ ನಡುವೆ ಇರುವಾಗ ನಿಮಗೆ ಏಕಾಂಗಿ ಎಂಬ ಭಾವ ಬರುವು ದಾದರೂ ಹೇಗೆ ಸಾಧ್ಯ ? ನೀವು ಗ್ರಂಥಗಳ ನಡುವೆ ಇದ್ದರೂ ಅವುಗಳನ್ನು ಮುಟ್ಟುವುದಿಲ್ಲ. ಹಿಂದೀ ಮಾತನಾಡುವ ಸ್ತ್ರೀಪುರುಷರ ನಡುವೆ ನೀವು ಇದೀರಿ, ಆದರೂ ಯಾರೊಡನೆಯೂ ಮಾತನಾಡುವುದಿಲ್ಲ. ನೀವು ಕಾರ್ಯಕರ್ತರ ಮಧ್ಯೆ ಇದೀರಿ ; ನಿನ್ನೆ ಒಂದು ಗರಿಕೆ ಬೆಳೆಯುತ್ತಿದ್ದ ಕಡೆ ಅದನ್ನು ಇಮ್ಮಡಿಸಲು ಪ್ರಯತ್ನಿಸುವುದಿಲ್ಲ, ನಿನ್ನೆ ಒಂದು ಗಜ ಬಟ್ಟೆ ಆಗುತ್ತಿದ್ದ ಕಡೆ ಅದನ್ನು ಇಮ್ಮಡಿಸಲು ಪ್ರಯತ್ನಿಸುವುದಿಲ್ಲ. ನಮ್ಮ ಸಿದ್ಧಾಂತ ಪ್ರೇಮಭರಿತ ಸೇವಾರೂಪದಲ್ಲಿ ತತ್‌ಕ್ಷಣ ಕಾರ್ಯರೂಪಕ್ಕೆ ಬರದೆ ಹೋದರೆ ಅದು ವ್ಯರ್ಥವೇ. ನೀವು ಕೈಗೊಂಡಿರುವ ಹಿರಿಯ

ಆದರ್ಶದಲ್ಲಿ ನಿಮ್ಮ ಸ್ವಾರ್ಥವನ್ನು ಲೀನಮಾಡಿ. ಇಂದು ನಿಮ್ಮನ್ನು ಕಾಡುತ್ತಿರುವ ಈ ಜಡತ್ವವನ್ನು ನೀವು ಕೊಡವಿಹಾಕಬೇಕು.

(....ಎಂಬಾಕೆ ತಮ್ಮನ್ನು ಆಕರ್ಷಿಸಿದ್ದ ಬಾಪೂ ಆಶ್ರಮದಲ್ಲಿ ಇಲ್ಲವಾದ ಕಾರಣ ಅಲ್ಲಿಗೆ ಹೋಗಲು ಮನಸ್ಸಿಲ್ಲವೆಂದು ಬರೆದ ಕಾಗದಕ್ಕೆ ಈ ರೀತಿ ಉತ್ತರ ಕೊಟ್ಟರು :)

ಆಶ್ರಮಕ್ಕೆ ಹೋಗದಿರಲು ಎಂಥ ಕಾರಣ! ನಿನ್ನ ಮಾರ್ಗವನ್ನೇ ಎಲ್ಲರೂ ಅನುಸರಿಸಿದರೆ ಏನಾದೀತು? ನೀನು ಖಾಜೀ ಮತ್ತು ಅವನ ನಾಯಿಯ ಕಥೆಯನ್ನು ಕೇಳಿಲ್ಲವೇ? ನಾಯಿ ಸತ್ತಾಗ, ಊರಿಗೆ ಊರೇ ಅದನ್ನು ಮೆರವಣಿಗೆಯಲ್ಲಿ ಕೊಂಡೊಯ್ದು ಮಣ್ಣುಮಾಡಿತು. ಆದರೆ ಖಾಜಿಯೇ ಮೃತನಾದಾಗ ಅವನ ಶವವನ್ನು ಹೊತ್ತುಕೊಂಡುಹೋಗಲು ಕೂಡ ಯಾರೂ ಇಲ್ಲವಾಗಿತ್ತು. ಖಾಜಿಯ ಹೊಗಳುಭಟ್ಟರು ಮಾಡಿದಂಥ ತಪ್ಪಿಗೆ ನೀನೂ ಗುರಿಯಾದಂತಲ್ಲವೆ? ಅಥವಾ, ಈ ರೀತಿಯೋ? ಗುಜರಾತೀ ಭಜನೆಯೊಂದು ಈ ರೀತಿ ಹೇಳುತ್ತದೆ: ಮನುಷ್ಯನ ಗೆಳೆಯರೆಲ್ಲ ಸ್ವಾರ್ಥಿಗಳೇ; ಎಲ್ಲರೂ ಕೊನೆಯಲ್ಲಿ ಕೈಬಿಡುತ್ತಾರೆ. ಮನುಷ್ಯನೊಬ್ಬ ಕಾಲವಾದಾಗ ನಾವು ಅವನ ಕಳೇಬರವನ್ನು ಸುಡುತ್ತೇವೆ. ಆದರೆ ನೀನು ....ಈ ವಾಕ್ಯವನ್ನು ನೀನೇ ಪೂರ್ಣಮಾಡು. ನನ್ನ ಅಭಿಪ್ರಾಯವಿಷ್ಟು: ವ್ಯಕ್ತಿಯನ್ನು ನಮ್ಮ ಅಭಿಮಾನದ ಕೇಂದ್ರವನ್ನಾಗಿ ಮಾಡಿಕೊಳ್ಳಬಾರದು, ಅದು ವ್ಯಕ್ತಿಗತ ಗುಣಗಳಿಗೆ ಮಾತ್ರ ಮೀಸಲಾಗಬೇಕು. ಪ್ರತಿಯೊಬ್ಬ ವ್ಯಕ್ತಿಯ ಗುಣಗಳೂ ಒಂದಲ್ಲ ಒಂದು ರೀತಿಯಾಗಿ ವ್ಯಕ್ತ ಕ್ರಿಯೆಯಲ್ಲಿ ಪರಿಣಮಿಸುತ್ತವೆ. ನಾವು ಗುಣಗಳನ್ನು ಮೆಚ್ಚುವುದೆಂದರೆ, ಅವು ಬಾಹ್ಯ ರೂಪದಲ್ಲಿ ವ್ಯಕ್ತವಾದ ಕ್ರಿಯೆಯನ್ನು ಪ್ರೋತ್ಸಾಹಿಸಬೇಕು. ಆದುದರಿಂದ ನೀನು ಆಶ್ರಮಕ್ಕೆ ಹೋಗಿ ಅಲ್ಲಿನ ಬಾಲಿಕೆಯರ ಅಭಿವೃದ್ಧಿಗಾಗಿ ಕೆಲಸ ಮಾಡು. ಕೆಲವು ವೇಳೆ ಪ್ರಾರ್ಥನೆಯಲ್ಲಿಯೂ ಭಾಗವಹಿಸು.

(ಇದೇ ವಿಷಯವನ್ನು ಕುರಿತು ....ಗೆ ಬರೆದುದು :)

ನಾವು ನಾಯಕನಲ್ಲಿರುವ ಮಹಾಗುಣಕ್ಕೆ ಪೂಜೆ ಸಲ್ಲಿಸಬೇಕೇ ವಿನಾ ನಾಯಕನಿಗಲ್ಲ. ಇಂದು ನಾಯಕನೆನಿಸಿದವನು ನಾಳೆ ಅಪಮಾನಕ್ಕೆ ಗುರಿ

ಆಗಬಹುದು, ಎಂದಿದ್ದರೂ ನಾಶವಾಗುತ್ತಾನೆ, ಆದರೆ ನಾಯಕನಲ್ಲಿರುವ ಮಹಾಗುಣ ಶಾಶ್ವತ.

ಆಶ್ರಮದಲ್ಲಿರುವ ಅನೇಕ ಮಂದಿ ನಿನಗೆ ಇಷ್ಟವಲ್ಲ ಎನಿಸಿದರೆ ಅಲ್ಲಿಯೇ ಸಹನೆಯ ಪಾಠ ಕಲಿಯಲು ಸುವರ್ಣ ಅವಕಾಶ. ನಮ್ಮಲ್ಲಿ ಯಾರೂ ತಪ್ಪಿನಿಂದ ಮುಕ್ತರಲ್ಲ. ಆದುದರಿಂದ ಇತರರನ್ನೂ ನಮಗೆ ಸಮರೆಂದು ಭಾವಿಸಬಹುದಾದರೆ ಈ ಇಷ್ಟ–ಅನಿಷ್ಟ ಎಂಬ ಪ್ರಶ್ನೆಯೇ ಉದ್ಭವಿಸದು.

ಆಶ್ರಮದ ನಿಯಮಗಳು ನಿನಗೆ ಒಪ್ಪಿಗೆಯಾಗುವುದಾದರೆ, ಅದರ ಬಾಹ್ಯರೂಪದ ಬಗೆಗೆ ಅಭಿಪ್ರಾಯಭೇದವಿದ್ದರೂ ಚಿಂತೆಯಿಲ್ಲ. ನಾವು ನಿಯಮಗಳನ್ನು ಪರಿಗಣಿಸಬೇಕೇ ವಿನಾ ಅವುಗಳ ಬಾಹ್ಯರೂಪವನ್ನಲ್ಲ.

ನಿನ್ನ ಗುಣದಲ್ಲಿರುವ ದೋಷವನ್ನು ತಿದ್ದಿಕೊಳ್ಳುವುದಕ್ಕಾದರೂ ನೀನು ಆಶ್ರಮದಲ್ಲಿರಬೇಕು.

ಆಶ್ರಮದಲ್ಲಿ ನೀನು ಆದರ್ಶವನ್ನು ಸಾಧಿಸದೆಹೋದರೆ ಆ ತಪ್ಪು ನಿನ್ನದೆ; ಏಕೆಂದರೆ ಅಲ್ಲಿ ನಿನಗೆ ಪೂರ್ಣ ಸ್ವಾತಂತ್ರ್ಯವಿದೆ.

ನಿನ್ನ ಗೆಳೆಯರ ಪ್ರೇಮ ನೀನು ಆಶ್ರಮವನ್ನು ತ್ಯಜಿಸಲು ಏಕೆ ಯಶಸ್ವಿಯಾಗಬೇಕು? ಇದಕ್ಕೆ ಪ್ರತಿಯಾಗಿ ಅವರ ಪ್ರೇಮವೇ ಆವಶ್ಯಕ ಎನಿಸಿದಾಗ ಆಶ್ರಮಕ್ಕೆ ಬರಲು ಕಾರಣವಾಗಬೇಕು. ಪ್ರೇಮಕ್ಕೆ ದೈಹಿಕ ಸಾಮೀಪ್ಯತೆ ಆವಶ್ಯಕವಿಲ್ಲ; ಅದು ಆ ರೀತಿ ಆದರೆ ಕೇವಲ ಕ್ಷಣಿಕ. ಸಾವಿನಿಂದ ಪ್ರಾಪ್ತವಾದ ವಿಯೋಗವೇ ಪ್ರೇಮದ ನಿಜವಾದ ಪರೀಕ್ಷೆ. ಆದರೆ ಈ ವಾದ ಕೇವಲ ಬುದ್ಧಿಗೆ ಅರ್ಥವಾದೀತು; ಹೃದಯ ಮಾತ್ರ ಇದ್ದ ಕಡೆ ಇದ್ದೀತು. ಆಶ್ರಮದಲ್ಲಿ ನೀನು ಇರಲು ಸಾಧ್ಯವಿಲ್ಲವಾದರೆ ನೀನಾಗಲೀ ನಾನಾಗಲೀ ಏನು ಮಾಡಲು ಸಾಧ್ಯ?

(ಬಾಪೂ ಭಗಿನಿಯೊಬ್ಬಳಿಗೆ ಕಾಗದ ಬರೆದು ಸಚಿವರನ್ನು ದೂಷಿಸಬಾರದೆಂದು ತಿಳಿಸಿದ್ದರು: 'ದೂಷಿಸಿದರೆ ನೀನೂ ದೂಷಣೆಗೆ ಗುರಿಯಾಗುವೆ'. ಅದಕ್ಕೆ ಆಕೆ, ತಾನು ದೂಷಿಸಲ್ಪಡಲು ಯೋಚಿಸುವುದಿಲ್ಲವೆಂದೂ ಸಾರ್ವಜನಿಕ ಮುಖಂಡರನ್ನು ವಿಮರ್ಶಿಸುವ ಹಕ್ಕು ಎಲ್ಲ ಪ್ರಜೆಗಳಿಗೆ ಇದೆಯೆಂದೂ ಉತ್ತರವಿತ್ತಳು. ಅದಕ್ಕೆ ಬಾಪೂ ಈ ಉತ್ತರವಿತ್ತರು:)

'ದೂಷಿಸಿದರೆ ನೀನೂ ದೂಷಣೆಗೆ ಗುರಿಯಾಗುವೆ' ಎಂಬುದನ್ನು ಎಚ್ಚರಿಕೆಯ ಮಾತೆಂದು ನೀನು ಅರ್ಥಮಾಡಿಕೊಂಡಿಲ್ಲವೆನಿಸುತ್ತದೆ. ಆ ಮಾತಿನ ಇನ್ನೊಂದು ಭಾಗ ನಾವೂ ಅದೇ ತಪ್ಪನ್ನು ಮಾಡದಿರಲೆಂದು ಎಚ್ಚರಿಕೆ ನೀಡುತ್ತದೆ. ನಾವು ಪ್ರಪಂಚದಲ್ಲಿ ವ್ಯವಹರಿಸುವಾಗ ಹಮ್ಮಿನಿಂದ ಕೂಡಿರಬಾರದು, 'ಪ್ರಪಂಚ ಏನೆಂದರೇನಾಯಿತು?' ಎಂಬ ಭಾವವು ನಮ್ಮ ಮನಸ್ಸಿಗೆ ಬರಲು ಅವಕಾಶ ನೀಡಬಾರದು. ಅದರ ಮುಂದೆ ನಾವು ಅತಿನಮ್ರತೆಯಿಂದ ಇರಬೇಕು. ನಾವು ಸರಿಯಾದ ಪಥದಲ್ಲಿ ಇದ್ದೇವೆಂದು ಖಚಿತವಾದಾಗಲೂ ಅದನ್ನು ಶಿಕ್ಷಿಸಿ ದೂಷಿಸಲೆತ್ನಿಸಬಾರದು. ಇದಕ್ಕೆ ಪ್ರತಿಯಾಗಿ ಪ್ರಪಂಚದ ಶಿಕ್ಷೆಗೆ ಗುರಿಯಾಗುವುದಲ್ಲದೆ ಅದರ ತೀರ್ಮಾನಕ್ಕೆ ಶಿರಬಾಗುತ್ತೇವೆ. ಇದೇ ನಮ್ರತೆ ಅಥವಾ ಅಹಿಂಸೆ. ನೀನು ಕೋಪ ಭರಿತಳಾಗಿ ಇಂಥ ವಿಷಯಗಳನ್ನು ಬರೆಯಬಾರದು. ನನ್ನ ಮೇಲೆ ನೀನು ಕೋಪಿಸಿಕೊಂಡರೆ ಚಿಂತೆಯಿಲ್ಲ; ನಾನದನ್ನು ಪ್ರಮಾದವಾಗಿ ಭಾವಿಸುವು ದಿಲ್ಲ. ಆದರೆ ನಿನ್ನ ಭಾಷೆ ನನಗೆ ನೋವನ್ನುಂಟುಮಾಡಿದೆ. ವಾಸ್ತವವಾಗಿ ನೀನು ಆ ರೀತಿ ಆಲೋಚನೆಯನ್ನೂ ಮಾಡಬಾರದು. ಯಾವ ಆಲೋಚನೆ ನಿನ್ನ ಮನಸ್ಸಿಗೆ ಬಂದರೂ ಅದನ್ನು ಬರೆದು ನನಗೆ ತಿಳಿಸು. ನೀನು ಆ ರೀತಿ ಮಾಡುವುದು ಒಳ್ಳೆಯದು, ಏಕೆಂದರೆ ಅದರಿಂದ ನಿನ್ನನ್ನು ತಿದ್ದಲು ನನಗೆ ಸಾಧ್ಯವಾಗುತ್ತದೆ. ನನ್ನ ಈ ಟೀಕೆಯ ಪರಿಣಾಮವಾಗಿ ನೀನು ನಿನ್ನ ಭಾವನೆಗಳನ್ನು ನಿನ್ನಲ್ಲಿಯೇ ಮುಚ್ಚಿಟ್ಟುಕೊಳ್ಳಬಾರದು. ನೀನು ಇರುವಂತೆಯೇ ನಿನ್ನನ್ನು ನಾನು ಅರಿಯಲು ಬಯಸುತ್ತೇನೆ; ನೀನು ಹುಚ್ಚಳೇ ಆಗಿರು, ಹಮ್ಮಿನಿಂದ ಕೂಡಿರು, ವಿನೀತಳಾಗಿರು—ಹೇಗಿದ್ದರೂ ಸರಿಯೆ—ನೀನು ಅಂಥ ಯೋಚನೆಗಳನ್ನೂ ಸಹ ಮಾಡಬಾರದೆಂಬುದು ನನ್ನ ಸಲಹೆ.

ಮಾಲ್‌ಥೂಸನ* ಕೆಲವು ಬರೆವಣಿಗೆಗಳು ಸರಿಯಾಗಿ ಅರ್ಥವಾಗಿಲ್ಲ; ಕೆಲವು ದೋಷಭರಿತ. ಪ್ರಾಣಿಗಳಿಗೆ ಅನ್ವಯಿಸುವ ನಿಯಮ ಮಾನವನಿಗೆ

---

* ಇಂಗ್ಲೆಂಡಿನ ಒಬ್ಬ ಅರ್ಥಶಾಸ್ತ್ರಜ್ಞ. ಆಹಾರ ಮತ್ತು ಜನಸಂಖ್ಯೆಗೆ ಸಂಬಂಧಿಸಿದಂತೆ ಈತ ಸಿದ್ಧಾಂತಗಳನ್ನು ಮಾಡಿದ್ದಾನೆ.

ಅನ್ವಯಿಸುವುದಿಲ್ಲ. ಪ್ರಾಣಿಗಳು ಒಂದನ್ನೊಂದು ಕೊಂದು ತಿನ್ನುವುದ ರಿಂದ ಬದುಕುತ್ತವೆ; ಮಾನವ ಇಂಥ ಹಿಂಸಾಕೃತ್ಯ ಮಾಡುವುದನ್ನು ತಪ್ಪಿಸಲು ಪ್ರಯತ್ನಿಸುತ್ತಾನೆ. ಅಹಿಂಸೆ ಅವನ ಆದರ್ಶ. ಅವನ ಆತ್ಮ ಈ ಕಾರ್ಯದ ಬಂಧನವಲ್ಲಿರುವವರೆಗೂ ಇದನ್ನು ಪೂರ್ಣವಾಗಿ ಸಾಧಿಸ ಲಾರ. ಆದರೆ ಆದರ್ಶ ಸದಾ ಅವನ ಮುಂದಿದ್ದರೆ, ಅತ್ಯಂತ ಕನಿಷ್ಠ ಪ್ರಮಾಣದ ಹಿಂಸೆಯಿಂದ ಅವನು ವ್ಯವಹರಿಸುತ್ತಾನೆ. ನಮ್ಮ ಪ್ರಾಣವ ನ್ನಾದರೂ ಕೊಟ್ಟು ಇತರರು ಬಾಳುವಂತೆ ಮಾಡುವುದೇ ಮಾನವೀಯತೆ. ಮಾನವರ ಸಂಖ್ಯೆ ಅಧಿಕವಾದಂತೆಲ್ಲ ಆಹಾರವೂ ಅಧಿಕವಾಗುತ್ತದೆ. ಡಾರ್ವಿನ್ ಆಗಿಹೋದ ತರುವಾಯವೂ ವೈಜ್ಞಾನಿಕ ಮುನ್ನಡೆ ಆಗಿದೆ.

'ಬಹುಜನರ ಬಹುಸುಖ' ಮತ್ತು 'ಬಲಿಷ್ಠರದೇ ಬಾಳು'—ಈ ಎರಡೂ ಅಪಸಿದ್ಧಾಂತಗಳು. ಅಹಿಂಸೆ ಎಲ್ಲರಿಗೂ ಹಿತವನ್ನು ಕೋರುತ್ತದೆ. ದೇವರ ದೃಷ್ಟಿಯಲ್ಲಿ ಸರ್ವರ ಹಿತವೇ ಪರಿಗಣನೆ. ಇದನ್ನು ಹೇಗೆ ಸಾಧಿಸಬೇಕೆಂಬುದೇ ನಮ್ಮ ಪ್ರಯತ್ನವೆಲ್ಲ; ಈ ದೈವೀ ನಿಯಮವನ್ನು ಅಲ್ಲಗಳೆಯುವುದು ನಮ್ಮ ಕರ್ತವ್ಯವಲ್ಲ.

ಆಗಸ್ಟ್ ೭, ೧೯೩೨

('ಜಗತ್ತು ಇದ್ದಂತೆಯೇ ಇದೆ, ಅದು ಉತ್ತಮವಾಗುವುದಾದರೂ ಎಂದು?' —ಈ ಪ್ರಶ್ನೆಯನ್ನು ಯಾರೋ ಒಬ್ಬರು ಕೇಳಿದರು. ಇದು ಬಾಪೂ ಕೊಟ್ಟ ಉತ್ತರ:)

ಜಗತ್ತನ್ನು ಉತ್ತಮಪಡಿಸಲು ಯೋಚಿಸುವುದಕ್ಕೆ ಪ್ರತಿಯಾಗಿ, ನಾವೇ ಉತ್ತಮವಾಗುವ ಕಡೆ ನಮ್ಮ ಗಮನವನ್ನು ಕೇಂದ್ರೀಕರಿಸೋಣ. ಜಗತ್ತು ಒಳ್ಳೆಯ ಪಥ ಹಿಡಿದಿದೆಯೋ ಇಲ್ಲವೋ ಎಂಬುದನ್ನು ನಾವು ಅರಿಯಲಾರೆವು. ಆದರೆ ನೇರವೂ ಕಡಿದೂ ಆದ ಪಥವನ್ನು ನಾವು ಅನುಸರಿಸಿದರೆ ಇತರರೂ ಅದನ್ನು ಅನುಸರಿಸಲು ಪ್ರೇರಣೆ ದೊರೆತೀತು. ದೇಹಾಭಿಮಾನ ತ್ಯಜಿಸುವುದೇ ಅಥವಾ ಅಹಂಭಾವಶೂನ್ಯವಾಗುವುದೇ ಆತ್ಮಜ್ಞಾನ.

(ಮತ್ತೊಬ್ಬರಿಗೆ ಹೀಗೆ ಬರೆದರು :)

....ರವರ ಕಳೇಬರವನ್ನು ನೀವು ದರ್ಶನಮಾಡಲು ಹೋದುದು ಒಳ್ಳೆಯದೇ ಆಯಿತು. ನಾವು ಒಂದಲ್ಲ ಒಂದು ದಿವಸ ಅದೇ ಸ್ಥಿತಿ ಹೊಂದುವವರೇ. ಅದು ಬಂದಾಗ ಈ ಜೀವನದಿಂದ ಸಂತೋಷವಾಗಿ ನಿರ್ಗಮಿಸಲು ಸಾಧ್ಯವಾಗುವುದೆಂದು ಭಾವಿಸೋಣ. ಈ ಮಣ್ಣಿನ ಹೊದಿಕೆಯನ್ನು ಹೊದ್ದಿರುವವರೆಗೂ ಅದನ್ನು ಚೊಕ್ಕಟವಾಗಿಯೂ ಪರಿಶುದ್ಧವಾಗಿಯೂ ಆರೋಗ್ಯದಿಂದಲೂ ಇಟ್ಟುಕೊಳ್ಳೋಣ; ಆದರೆ ಅದನ್ನು ಕಿತ್ತೆಸೆಯುವ ಕಾಲ ಬಂದಾಗ ವ್ಯಸನವಿಲ್ಲದೆ ಆ ರೀತಿ ಮಾಡೋಣ. ಅದು ನಮ್ಮ ಉಪಯೋಗಕ್ಕಾಗಿಯೇ ಕೊಡಲ್ಪಟ್ಟಿದೆ. ಕೊಟ್ಟವನು ಅವನ ಇಚ್ಛೆಬಂದಾಗ ತೆಗೆದುಕೊಂಡು ಹೋಗಲಿ. ನಾವು ಅದನ್ನು ಸೇವೆಗಾಗಿ ಉಪಯೋಗಿಸಬೇಕೇ ವಿನಾ ಭೋಗಕ್ಕಲ್ಲ.

(ಇನ್ನೊಬ್ಬರಿಗೆ ಹೀಗೆ ಬರೆದರು :)

ನಿನ್ನ ಪತ್ನಿ ದುಃಖಮುಕ್ತಳಾದುದರಿಂದ ನಾನು ನಿನ್ನ ದುಃಖದಲ್ಲಿ ಭಾಗಿಯಾಗಲಾರೆ. ಆಕೆ ನಿಧನಳಾದ ಕಾಲ ಮತ್ತು ವಿಧಾನ ನಮಗೆಲ್ಲ ಅಸೂಯೆಯನ್ನು ಕೆರಳಿಸುವಂಥದು. ನಿನ್ನನ್ನು ನೋಡಿಕೊಳ್ಳುವವರು ಯಾರೂ ಇಲ್ಲವೆಂದೇಕೆ ಅಜ್ಞಾನದಿಂದ ಭಾವಿಸುತ್ತೀಯೆ? ನಮ್ಮೆಲ್ಲರನ್ನೂ ಕಾಯುವ ದೇವರಿಲ್ಲವೆ? ಮಣಿಯಾಗಲಿ, ನಿನ್ನ ಪತ್ನಿಯಾಗಲಿ ನಿನ್ನ ರಕ್ಷಕರಲ್ಲ. ಭಗವಂತನಲ್ಲಿ ನಂಬಿಕೆಯೇ ನಮ್ಮ ನಿಜ ರಕ್ಷಣೆ. ಮಾನವದೇಹ ಗಾಜಿನ ಬಳೆಗಿಂತಲೂ ಸೂಕ್ಷ್ಮ; ಗಾಜಿನ ಬಳೆಯನ್ನು ಚೆನ್ನಾಗಿ ಇಟ್ಟುಕೊಂಡರೆ ನೂರಾರು ವರ್ಷ ಬಾಳಿಕೆಬಂದೀತು; ಆದರೆ ಮಾನವದೇಹವನ್ನು ಎಷ್ಟೇ ಎಚ್ಚರಿಕೆಯಿಂದ ನೋಡಿಕೊಂಡರೂ ಅದು ಒಂದು ಪರಿಮಿತ ಕಾಲದನಂತರ ಬಾಳಲಾರದು, ಅದರ ನಡುವೆ ಎಂದಾದರೂ ವಿನಾಶವಾದೀತು. ಅದನ್ನು ನೆಚ್ಚಲಾಗದು. ನೀನು ಎಲ್ಲ ಯೋಚನೆಗಳನ್ನೂ ಬದಿಗಿಟ್ಟು ಆಶ್ರಮದ ಕಾರ್ಯದಲ್ಲಿ ಮಾತ್ರವೇ ನಿಮಗ್ನನಾಗಬೇಕು. ಮಂಗಳೆಗೆ ಇನ್ನೂ ಆರು ವರ್ಷ. ನೀನೇ ಆಕೆಯನ್ನು ನೋಡಿಕೊಳ್ಳಬಹುದು,

ಶಾಂತಿ ಮತ್ತು ಜೆಕೂಂಗ್ ಅವಳನ್ನು ನೋಡಿಕೊಳ್ಳಲು ಕಲಿಸಬಹುದು. ರೂಖಿಯ ತಾಯಿ ಸಂತೋಕ್ ಬದುಕಿದ್ದರೂ ಮಗನ್‌ಲಾಲ್* ಅವಳನ್ನು ಬಾಲ್ಯದಿಂದಲೇ ಕಾಪಾಡಿದುದು ನಿನಗೆ ತಿಳಿದಿರಬೇಕು. ಸಂತೋಕಳ ಬಾಳು ಎಂದೋ ಮುಗಿದಂತೆ ಭಾವಿಸಲಾಗಿತ್ತು ; ಅವಳು ಉಸಿರಾಡುವುದೇ ಕಷ್ಟವಾಗಿತ್ತು. ಮಗನ್‌ಲಾಲ್ ರೂಖಿಗೆ ಮೈ ತೊಳೆದು, ಕೂದಲನ್ನು ಬಾಚಿ, ಅನ್ನ ತಿನ್ನಿಸಿ, ಚೆನ್ನಾಗಿ ನೋಡಿಕೊಳ್ಳುತ್ತಿದ್ದುದಲ್ಲದೆ ತನ್ನ ಇತರ ಮಕ್ಕಳನ್ನೂ ಕಾಪಾಡುತ್ತಿದ್ದನು. ಇಷ್ಟೆಲ್ಲ ಆದರೂ ಅವನು ನಮ್ಮೆಲ್ಲರಿಗಿಂತ ಹೆಚ್ಚು ಕೆಲಸವನ್ನು ಮಾಡುತ್ತಿದ್ದನು. ಫೀನಿಕ್ಸ್ ಆಶ್ರಮದಲ್ಲಿ ಅವನ ತೋಟ ಸರ್ವೋತ್ತಮವಾಗಿತ್ತು. ಅಲ್ಲಿ ಮೊದಲನೆಯ ಗುಲಾಬಿಯ ಹೂವನ್ನು ಬೆಳೆದವನು ಅವನೇ. ಆಶ್ರಮದ ಗಟ್ಟಿ ನೆಲವನ್ನು ಅವನು ಅಗೆದಾಗ ಭೂಮಿಯೇ ನಡುಗುವಂತೆ ಕಾಣುತ್ತಿತ್ತು. ಮಗನ್‌ಲಾಲ್ ಮಾಡಿದ ಎಲ್ಲವನ್ನು ನೀನೂ ಮಾಡಲು ಶಕ್ತನಾಗಿದೀಯೆ. ಈ ವರೆಗೂ ನಾನು ಮಗನ್‌ಲಾಲನ ಸಾಹಿತ್ಯ ಮತ್ತು ಕಲಾಪ್ರೌಢಿಮೆಯ ಬಗೆಗೆ ಹೇಳಿಲ್ಲ. ಅವನಿಗೆ ತನ್ನ ಕೆಲಸದಲ್ಲಿ ಆತ್ಮವಿಶ್ವಾಸವೂ ನಂಬಿಕೆಯೂ ಇತ್ತು. ದೇವರು ಅವನಿಗೆ ಒಳ್ಳೆ ಭವ್ಯ ಶರೀರವನ್ನು ದಯೆಪಾಲಿಸಿದ್ದನು. ಆ ಶರೀರ ಅವನು ಮಾಡಿದ ತಪಸ್ಸಿನಿಂದ (ಆಶ್ರಮದ ಕೆಲಸದಿಂದ) ಜರ್ಝರಿತವಾಯಿತು. ಆದರೆ ಅವನು ಬದುಕಿದ್ದ ಅಲ್ಪಕಾಲದಲ್ಲಿ ಒಂದು ಶತಮಾನದಲ್ಲೋ ಅಥವಾ ಶತಮಾನಗಳಲ್ಲೋ ಎಸಗುವಷ್ಟು ಅವನು ಮಾಡಿದನು. ನೀನು ಅವನನ್ನು ಬಲ್ಲವನಾಗಿರುವುದರಿಂದಲೂ ಅವನು ನಿನ್ನನ್ನು ಪ್ರೀತಿಸಿದ ಫಲವಾಗಿ ನೀನು ಆಶ್ರಮದ ಸಂಬಂಧವನ್ನು ಹೊಂದಿದುದರಿಂದಲೂ ಅವನ ನಿದರ್ಶನವನ್ನೇ ನಿನಗೆ ತಿಳಿಸಿದೇನೆ. ಅವನ ನೆನಪು ತಂದುಕೊಂಡು ನೀನು ಅಂಗವಿಕಲನಾದೆನೆಂಬುದನ್ನೂ ಅಥವಾ ಅಂಧಕಾರದಲ್ಲಿ ಮುಳುಗಿಸಲ್ಪಟ್ಟಿರುವೆನೆಂಬುದನ್ನೂ ಮರೆತುಬಿಡು. ನಿನಗಿರುವ ಅನುಕೂಲ್ಯಗಳು ಹತ್ತು ಸಾವಿರದಲ್ಲಿ ಒಬ್ಬನಿಗೂ ದೊರಕಲಾರದು.

---

* ಗಾಂಧೀಜೀಯ ಬಂಧು ; ಅವರ ಜೊತೆಯಲ್ಲಿ ದಕ್ಷಿಣ ಆಫ್ರಿಕಾದಲ್ಲಿಯೂ ಭಾರತದಲ್ಲಿಯೂ ಕೆಲಸಮಾಡಿದವರು.

('ಆರ್' ಎಂಬುವವರಿಗೆ :)

ಎಲ್ಲ ಉಪಯುಕ್ತ ಕಾರ್ಯಗಳೂ ಸಮಾನವಾದುವು. ಅವನ್ನು ನಾವು ಮಾಡಬಹುದು. ಚರ್ಮ ಹದಮಾಡುವುದು, ಬಡಗಿಕೆಲಸ, ಕಕ್ಕಸನ್ನು ಶುದ್ಧ ಮಾಡುವುದು, ವ್ಯವಸಾಯ, ನೇಕಾರಿಕೆ, ಅಡಿಗೆ ಮಾಡುವುದು, ಗೋಪಾಲನೆ—ಇವೆಲ್ಲವೂ ಸಮಾನ ಬೆಲೆಯುಳ್ಳುವು. ನನ್ನ ಈ ಅಭಿಪ್ರಾಯವನ್ನು ಜನ ಒಪ್ಪುವುದಾದರೆ, ಅಕ್ಷರಸ್ಥರು–ಅನಕ್ಷರಸ್ಥರು, ಅಧ್ಯಾಪಕ–ಭಂಗಿ — ಎಲ್ಲರಿಗೂ ಅವರ ಕೆಲಸಕ್ಕೆ ಸಮಾನ ಪ್ರತಿಫಲ ಸಂದೀತು. ಈ ಕ್ಷೇತ್ರದಲ್ಲಿ ಪರಿಶೋಧನೆ ನಡೆಸುವ ದೃಷ್ಟಿಯಿಂದ ಆಶ್ರಮವಾಸಿಗಳು ಮಾಡಿದ ಕೆಲಸವನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಲಾಗಿದೆಯೆಂಬುದು ನಿನಗೆ ಗೊತ್ತಿರಬೇಕು. ಆದುದರಿಂದ ಸದ್ಯಕ್ಕೆ ನೂಲುವುದರಿಂದ ನಿನ್ನ ನೂಲು ಕಡಮೆಯಾದರೂ ವ್ಯವಸಾಯ ಇತ್ಯಾದಿ ಕೆಲಸಗಳನ್ನು ಮಾಡುವುದರಿಂದ ನಿನ್ನ ಅಂತಸ್ತು ಕಡಮೆಯಾಯಿತೆಂದು ಭಾವಿಸಬಾರದು.

(.... ಎಂಬುವವರಿಗೆ :)

ನಿನ್ನ ಪತ್ನಿಯ ಬಗೆಗೆ ನಿನ್ನ ಮನೋಭಿಪ್ರಾಯ ಏನೆಂಬುದನ್ನು ನೀನು ಮೊದಲು ತಿಳಿದುಕೊಳ್ಳಬೇಕು. ನೀನು ಆಕೆಯೊಂದಿಗೆ ಸಹಜೀವನ ನಡೆಸಬಾರದೆಂದು ಸ್ಥಿರಸಂಕಲ್ಪ ಮಾಡಿದ್ದರೆ ಅದನ್ನು ಆಕೆಗೂ ಸ್ನೇಹಿತರಿಗೂ ತಿಳಿಸಿಬಿಡಬೇಕು. ಅದು ಆಕೆಗೆ ತಲ್ಲಣವನ್ನು ಉಂಟುಮಾಡಬಹುದು, ಆದರೂ ನಿನ್ನ ಸ್ಥಿರಮನಸ್ಸು ಆಕೆಗೆ ಮಿಂಚಿನಂತೆ ಬಡಿದೀತು. ಇದರ ಪರಿಣಾಮವಾಗಿ ಆಕೆಗೆ ಹುಚ್ಚು ಹಿಡಿದರೂ, ಕೊನೆಗೆ ಆಕೆ ಕಾಲವಾದರೂ ನೀನು ಚಿಂತಿಸುವುದಿಲ್ಲವೆಂಬುದೇ ನಿನ್ನ ಸ್ಥಿರಸಂಕಲ್ಪದ ಅರ್ಥ. ಈ ಹೆಜ್ಜೆ ನಿಮ್ಮಿಬ್ಬರ ಶ್ರೇಯಸ್ಸಿಗೂ ಕಾರಣವೆಂದು ನೀನು ಪೂರ್ಣವಾಗಿ ಅರಿಯಬೇಕು. ಒಂದುವೇಳೆ ನೀನು ಅಷ್ಟು ದೂರ ಹೋಗಲು ಸಾಧ್ಯವಿಲ್ಲ ಎಂದೆನಿಸಿದರೆ ನಿನ್ನ ಪತ್ನಿಯ ಸಂಗಡ ವ್ಯಾಜ್ಯವಾಡುವುದನ್ನು ಬಿಟ್ಟು, ಸಾಮಾನ್ಯ ವಿವಾಹಿತ ಪುರುಷರಂತೆ ಜೀವಿಸುತ್ತಾ, ಅದರಿಂದ ಸಾಧ್ಯವಾಗುವ ಸಂಯಮವನ್ನು ನಡೆಸಬೇಕು. ಈ ವರ್ತನೆಯಿಂದ ಲೋಕಾಪ-

ವಾದ ಬರದು, ಏಕೆಂದರೆ ಪ್ರತಿಯೊಬ್ಬನೂ ಅವನವನ ಸಾಮರ್ಥ್ಯಕ್ಕೆ ತಕ್ಕಂತೆ ಮಾತ್ರ ಮುನ್ನಡೆಯಲು ಸಾಧ್ಯ. ಯಾವುದನ್ನೂ ನಿರ್ಧರಿಸದೆ ಇರುವುದು, ಆತ್ಮವಂಚನೆ ಮಾಡಿಕೊಳ್ಳುವುದು, ತನ್ನ ಜನತೆಯನ್ನೂ ಲೋಕವನ್ನೂ ವಂಚಿಸುವುದು ಉಗ್ರ ಆಕ್ಷೇಪಣೆಗೆ ಖಂಡಿತ ಗುರಿಯಾಗುತ್ತವೆ. ಅನೇಕ ವರ್ಷಗಳಿಂದ ನೀನು ಸಿಕ್ಕಿರುವ ಈ ಡೋಲಾಯಮಾನದ ಪರಸ್ಪರ ವಿರೋಧ ಅಭಿಪ್ರಾಯಗಳಿಂದ ಮುಕ್ತನಾಗು. ಒಂದು ಸೌಮ್ಯ ತೀರ್ಮಾನಕ್ಕೆ ಬಂದರೆ ಅದರಿಂದ ನಿನಗೆ ಮನಶ್ಶಾಂತಿ ಲಭಿಸುತ್ತದೆ. ಇದು ಗೀತಾಬೋಧೆ.

'....ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ'

(ಕುರುನಂದನಾ, ವ್ಯವಸಾಯಾತ್ಮಿಕ ಬುದ್ಧಿಯು ಏಕರೂಪವಾಗಿರುತ್ತದೆ.)

ಇದನ್ನೂ ಮುಂದಿನ ಶ್ಲೋಕಗಳನ್ನೂ ಎಚ್ಚರಿಕೆಯಿಂದ ಅಧ್ಯಯನ ಮಾಡಿದರೆ ಈ ಪತ್ರದ ವಿಷಯದ ಮೇಲೆ ಹೆಚ್ಚು ಬೆಳಕು ಚೆಲ್ಲೀತು.

(ಗಾಂಧೀ ಕುಟುಂಬದಿಂದ ತಾವು ಏನನ್ನು ನಿರೀಕ್ಷಿಸುವುದಾಗಿ ಯಾರೋ ಕೇಳಿದ ಪ್ರಶ್ನೆಗೆ ಬಾಪೂ ಹೀಗೆ ಉತ್ತರವಿತ್ತರು :)

ಅವರೆಲ್ಲರೂ ಸೇವೆಗೆ ತಮ್ಮ ಬಾಳನ್ನು ಮುಡುಪಾಗಿ ಇಡಬೇಕು, ಸಾಧ್ಯವಾದಷ್ಟು ಇಂದ್ರಿಯನಿಗ್ರಹವನ್ನು ಅಭ್ಯಸಿಸಬೇಕು, ವಿವಾಹದ ಯೋಚನೆಯನ್ನೇ ಬಿಡಬೇಕು, ಆಗಲೇ ವಿವಾಹಿತರಾಗಿದ್ದರೆ ಬ್ರಹ್ಮಚರ್ಯವನ್ನು ಪಾಲಿಸಬೇಕು, ಸೇವೆಸಲ್ಲಿಸಿ ತಮ್ಮ ಜೀವನ ಸಾಗಿಸಬೇಕು—ಎಂದು ನಾನು ನಿರೀಕ್ಷಿಸುತ್ತೇನೆ. ಸೇವಾಕ್ಷೇತ್ರ ಎಷ್ಟು ಮಂದಿ ಸ್ತ್ರೀಪುರುಷರನ್ನು ಬೇಕಾದರೂ ಒಳಗೊಳ್ಳುವಷ್ಟು ವಿಶಾಲವಾಗಿದೆ. ಇದಕ್ಕೆ ಇನ್ನೇನನ್ನು ಸೇರಿಸುವುದಿದೆ ?

## ಛಗನ್‌ಲಾಲ್ ಜೋಷೀ ಅವರಿಗೆ

ಆಗಸ್ಟ್ ೧೪, ೧೯೩೨

ಇತರ ಕಡೆಗಳಲ್ಲಿ ಮಾಡುವ ಕರ್ಮ ಗುಲಾಮತನದಿಂದ ಕೂಡಿದ್ದರೆ ಆಶ್ರಮದಲ್ಲಿ ಮಾಡುವ ಕರ್ಮ ಸ್ವಾತಂತ್ರ್ಯದಿಂದ ಕೂಡಿದೆ. ಒಂದು

ದೃಷ್ಟಿಯಿಂದ ನೋಡಿದರೆ ಎಲ್ಲೆಲ್ಲಿಯೂ ಸ್ವಾತಂತ್ರ್ಯವಿದೆ. ಕ್ಲೇಶವನ್ನು ಆಹ್ವಾನಿಸುವಾತ ಯಾವ ವಿಧದಲ್ಲಿಯೂ ದೂರಿಡುವುದಿಲ್ಲ. ಅವನಿಗೆ ಕ್ಲೇಶವೇ ಆನಂದದಾಯಕವಾಗಿರುತ್ತದೆ. ಮರಳುವ ಎಣ್ಣೆಯ ಕೊಪ್ಪರಿಗೆಯಲ್ಲಿ ನೂಕಲ್ಪಟ್ಟಾಗ ಸುಧನ್ವ ಆನಂದದಿಂದ ಕುಣಿದಾಡಿದ. ಪ್ರಹ್ಲಾದ ಕಾದ ಕಬ್ಬಿಣದ ಕಂಬವನ್ನು ಹೇಗೆ ಅಪ್ಪಿಕೊಂಡ? ಈ ಪ್ರಸಂಗಗಳೆಲ್ಲ ಏನೋ ಕಾಲ್ಪನಿಕ ಕಥೆಗಳೆಂದು ತೆಗಳದಿರೋಣ. ಏಕೆಂದರೆ ಇಂದು ನಮಗೆ ಅಂಥ ಅನುಭವ ಬರಬಹುದು. ಲ್ಯಾಟಿಮರ್, ರಿಡ್ಲೆ ಮತ್ತು ಮನಸೂರ್ ಇವರೆಲ್ಲ ಚಾರಿತ್ರಿಕ ವ್ಯಕ್ತಿಗಳೇ. ಎಲ್ಲ ಮನಸ್ಸಿನ ಅಧೀನ.

## ಭುಷ್ಕುಟೀಗೆ

(ಭುಷ್ಕುಟೀ ಬಾಪೂಗೆ ಒಂದು ಪತ್ರವನ್ನು ಬರೆದು ಈ ಎರಡು ದೇವರುಗಳಲ್ಲಿ ಅವರು ಯಾವ ದೇವರನ್ನು ನಂಬುವುದಾಗಿ ಪ್ರಶ್ನಿಸಿದ್ದರು. ಅವರಿಗೆ ಬಾಪೂ ಬರೆದರು :)

ನಾನು ಈ ಎರಡೂ ಬಗೆಯ ದೇವರನ್ನು ನಂಬುತ್ತೇನೆ; ಸೇವೆ ಸಲ್ಲಿಸುವ ದೇವರು ಮತ್ತು ಯಾವ ದೇವರಿಗೆ ನಾವು ಸೇವೆಸಲ್ಲಿಸುವೆವೋ ಆ ದೇವರು. ನಾವು ಯಾವುದಾದರೂ ಸೇವೆಯನ್ನು ಸಲ್ಲಿಸಿ ಅದಕ್ಕೆ ಏನನ್ನಾದರೂ ಪ್ರತಿಫಲದ ರೂಪದಲ್ಲಿ ಹೊಂದದಿರುವುದು ಅಸಾಧ್ಯ. ಆದರೆ ವಸ್ತುತಃ ಎರಡೂ ದೇವರುಗಳೂ ಕಾಲ್ಪನಿಕ. ನಿಜವಾಗಿಯೂ ದೇವರು ಮಾನವಕಲ್ಪನೆಗೆ ಮೀರಿದವನು. ಅವನು ಸೇವೆಮಾಡುವುದಿಲ್ಲ, ಸೇವೆಯನ್ನು ಮಾಡಿಸಿಕೊಳ್ಳುವುದೂ ಇಲ್ಲ. ಅವನು ಗುಣಾತೀತ; ಅವನು ಯಾವ ಬಾಹ್ಯವಸ್ತುವೂ ಅಲ್ಲ, ಆದರೂ ಮಾನವಹೃದಯದಲ್ಲಿ ಸ್ಥಿತನಾಗಿದಾನೆ. ಅವನ ಕ್ರಿಯೆಯ ವಿಧಾನವೂ ನಮಗೆ ಅರಿವಾಗುವುದಿಲ್ಲ. ನಮ್ಮ ಮನಸ್ಸಿಗೂ ಗೋಚರಿಸದು. ಆದುದರಿಂದಲೇ ನಾವು ಅವನನ್ನು ಧ್ಯಾನಿಸಬೇಕು. ನಾವು ಅವನನ್ನು ಕುರಿತು ಧ್ಯಾನಿಸಲು ಆರಂಭಿಸಿದ ಕೂಡಲೆ ನಮ್ಮ ಕಲ್ಪನೆ ಅವನಿಗೆ ಒಂದು ಸ್ವರೂಪವನ್ನು ಕೊಡುತ್ತದೆ. ಸಾಕಾರ ದೇವತಾವಾದವು ಮಾನವನ ಬುದ್ಧಿಯ ಫಲವಲ್ಲ, ನಂಬಿಕೆಯ ಒಂದು ಪ್ರಕ್ರಿಯೆ. ಈ ವಿಷಯದಲ್ಲಿ ಬುದ್ಧಿ

ಯಾವ ಪ್ರಯೋಜನಕ್ಕೂ ಬರದು. ನಾವು ಪರೋಕ್ಷವಾಗಿ ದೇವರನ್ನು ನಂಬಿದಮೇಲೆ ಜಗತ್ತಿನ ಪ್ರಕಾರದ ಬಗೆಗೆ ಹೆಚ್ಚು ಚಿಂತಿಸುವುದು ಅನಾವಶ್ಯಕ. ಏಕೆಂದರೆ, ನಾವು ದೇವರನ್ನೇ ನಂಬುವುದರಿಂದ ಅವನ ಸೃಷ್ಟಿಯ ಭಾಗವೂ ಉದ್ದೇಶರಹಿತವಾದುದಲ್ಲವೆಂದು ನಂಬುತ್ತೇವೆ.

## ಛಗನ್‌ಲಾಲ್ ಜೋಷೀ ಅವರಿಗೆ

ಆಗಸ್ಟ್ ೨೦, ೧೯೩೨

(ಇಂದು ಬಾಪೂ ಅನೇಕ ಪತ್ರಗಳನ್ನು ಬರೆದರು. ಛಗನ್‌ಲಾಲ್ ಜೋಷೀ ಅವರು ತಮ್ಮ ಪರಿಸ್ಥಿತಿಯ ಬಗೆಗೆ ನಿರಾಶೆಹೊಂದುತ್ತಿರುವುದಾಗಿಯೂ—ಅವರು ಬಾಕಿ ನಿಂತ ಕೆಲಸವನ್ನು ಮಾಡಲು ಅವಸರದಿಂದ ಇರುವುದಾಗಿಯೂ ಬರೆದಿದ್ದರು. ಬಾಪೂ ಉತ್ತರ ಹೀಗಿತ್ತು :)

ಅವಸರ (ತಾಳ್ಮೆ ತಪ್ಪಿರುವುದು) ಶಾರೀರಕ ರೋಗಗಳಿಗೆ ಒಂದು ಕಾರಣ. ಮೊದಲು ಮನಸ್ಸು ತಾಳ್ಮೆ ತಪ್ಪುತ್ತದೆ, ಅದನ್ನು ಶರೀರ ಅನುಸರಿಸುತ್ತದೆ. ಆದರೆ ಅವಸರದಿಂದ ಕೇವಲ ನಷ್ಟವೇ. ಜಗತ್ತು ಅಗ್ನಿಯಿಂದ ಉರಿಯುತ್ತಿದ್ದರೆ ಅದನ್ನು ನಮ್ಮ ಅವಸರದಿಂದ ಆರಿಸಲು ಸಾಧ್ಯವಿಲ್ಲ. ವಾಸ್ತವಿಕವಾಗಿ ಅದನ್ನು ಆರಿಸಲು ನಾವಾದರೂ ಯಾರು? ದೊಡ್ಡ ಬೆಂಕಿ ಬಿದ್ದಾಗ ಅಗ್ನಿಶಾಮಕದಳ ಅದರ ಮೇಲೆ ಹೆಚ್ಚು ನೀರನ್ನು ಉಪಯೋಗಿಸುವುದಿಲ್ಲವೆಂಬುದು ನಿಮಗೆ ಗೊತ್ತಿಲ್ಲವೆ? ಅವರು ಸುತ್ತ ಮುತ್ತಲ ಪ್ರದೇಶವನ್ನು ರಕ್ಷಿಸಲು ಯತ್ನಿಸುತ್ತಾರೆ. ಅದರಲ್ಲಿ ಅವರು ಯಶಸ್ವಿಯಾದರೆ ಕರ್ಮಕುಶಲರಾದ ಯೋಗಿಗಳೇ ಸರಿ. ನಾವು ನಮ್ಮ ನಮ್ಮ ಕರ್ತವ್ಯಗಳನ್ನು ನೆರವೇರಿಸಿದರೆ ಬೆಂಕಿಯನ್ನೆಲ್ಲ ಆರಿಸಿದಂತೆಯೇ. ಅದು ಇನ್ನೂ ಉರಿಯುವಂತೆ ಕಂಡುಬಂದರೂ ಅದು ಆರಿದೆಯೆಂದು ನಾವು ಭಾವಿಸಿ ನಿಶ್ಚಿಂತರಾಗಬಹುದು. ಸತ್ಯಾನ್ವೇಷಕನಾದ ನನಗೆ ಭಾಸವಾಗಿರುವುದೆಲ್ಲ ಇಷ್ಟೆ. ಇದು ಸರಿಯಲ್ಲವಾದರೆ ಸತ್ಯಾಗ್ರಹ ಅಸಾಧ್ಯ ಎನಿಸೀತು. ಯಾವುದು ಸಾಧ್ಯವೊ ಅದರ ಬಗೆಗೆ ಮಾತ್ರ ನಾವು ಆಗ್ರಹ ಮಾಡಬಹುದು. ಚಂದ್ರಲೋಕದಲ್ಲಿರುವ ಪರ್ವತಗಳ ವಾಯುವಿಗಾಗಿ ಹಾತೊರೆಯುವುದು ನಿಷ್ಫಲ; ಅದು ನಮಗೆ ದೊರಕದಂಥದು. ಇದೇ

ನಮ್ಮ ಕರ್ತವ್ಯಕ್ಕೂ ಅನ್ವಯಿಸುತ್ತದೆ. ಪ್ರತಿಯೊಬ್ಬನೂ ತನ್ನ ಕರ್ತವ್ಯ ಏನೆಂಬುದನ್ನು ಕಂಡುಕೊಳ್ಳಲು ದೂರ ಹೋಗಬೇಕಾಗಿಲ್ಲ.

(ಬಾಲಕೃಷ್ಣನಿಗೆ ಹೀಗೆ ಬರೆದರು :)

ಮಾಯಾ ಶಬ್ದಕ್ಕೆ ಶಂಕರಾಚಾರ್ಯರ ನಿಜವಾದ ಅರ್ಥ ಏನೋ ನಾನರಿಯೆ. ಆದರೆ ಈ ಪ್ರಪಂಚವನ್ನು ನಾವು ನೋಡುವ ವಿಧಾನ ನಮ್ಮ ಕಲ್ಪನೆಯ ರಚನೆಯೆಂದು ಮಾತ್ರ ನಾನು ಬಲ್ಲೆ. ಆದರೆ ಜಗತ್ತು ತನ್ನ ಪಾಡಿಗೆ ತಾನು ಇದ್ದೇ ಇರುತ್ತದೆ. ಅದರ ಸ್ವಭಾವವನ್ನು ನಾವು ಅರಿಯಲಾರೆವು. ಹೀಗೆಯೇ ಬ್ರಹ್ಮನೂ ನಮಗೆ ಅರಿಯಲಾರ. ಆದುದರಿಂದ ಅದನ್ನು ನಿಷೇಧಾತ್ಮಕವಾಗಿ 'ನೇತಿ', 'ನೇತಿ' ಎಂದು ವಿವರಿಸುತ್ತೇವೆ. ಜಗತ್ತೂ ಬ್ರಹ್ಮವೇ. ಅದು ಬ್ರಹ್ಮನಿಂದ ಹೊರತಾದುದಲ್ಲ. ಬ್ರಹ್ಮನಿಗೂ ಜಗತ್ತಿಗೂ ಕಂಡುಬರುವ ವ್ಯತ್ಯಾಸ ಕೇವಲ ತೋರಿಕೆ, ಸತ್ಯವಲ್ಲ.

ನಾವು ನಮ್ಮ ಜೀವಿತಕಾಲವನ್ನು ಹೆಚ್ಚಿಸಿಕೊಳ್ಳಬಹುದು ಅಥವಾ ಕಡಮೆ ಮಾಡಿಕೊಳ್ಳುವುದು ಎಂದು ನಾನು ನಂಬುತ್ತೇನೆ. ವಾಸ್ತವವಾಗಿ ಎಲ್ಲ ಶರೀರಗಳೂ ಗುಣಭರಿತವಾಗಿಯೇ ಹುಟ್ಟುತ್ತವೆ. ಇವು ನಮಗೆ ಅರಿವಿಲ್ಲ, ಇವು ಏನೆಂದು ಅರಿಯಬೇಕಾದ ಆವಶ್ಯಕತೆಯೂ ಇಲ್ಲ.

ಸಾಗರೋಪಮವಾದ ಅನಂತಕಾಲದಲ್ಲಿ ಮಾನವನ ಕಾಲಕಲ್ಪನೆ ಎಲ್ಲೋ ಒಂದು ಹನಿಯಂತೆ. ಮಾನವನ ಕ್ರಿಯೆಯ ಕಾಲ ಎಷ್ಟೇ ಮಹತ್ವದ್ದೆಂದು ಭಾವಿಸಲ್ಪಟ್ಟರೂ ಅದೊಂದು ಕೇವಲ ಏನೂ ಗಣನೆಗೆ ಬಾರದ್ದು.

ಕನಸುಗಳಿಗೆ ಅನೇಕ ದೈಹಿಕ ಕಾರಣಗಳಿವೆ. ಕನಸಿನಲ್ಲೇ, ಅದು ಕನಸಿನಿಂದ ಪೂರ್ಣ ಜಾಗ್ರತ ಅವಸ್ಥೆಗೆ ಪರಿವರ್ತನೆಯನ್ನು ಹೊಂದುವ ಕಾಲದಲ್ಲಿಯೇ, ಅದರ ಅವಾಸ್ತವಿಕತೆಯನ್ನು ನಾನು ಅನುಭವಿಸಿದೇನೆ. ಪಾಶವಿಕ ಕಾಮೇಚ್ಛೆ ಇಲ್ಲದಿದ್ದರೂ ಕೇವಲ ಯಾಂತ್ರಿಕ ಕಾರಣಗಳಿಂದಲೇ ಮನುಷ್ಯರಿಗೆ ಕನಸುಗಳಾಗಿವೆ. ಇದನ್ನು ಹೋಗಲಾಡಿಸಬೇಕಾದರೆ ಆಹಾರವನ್ನು ಬದಲಾಯಿಸಿಕೊಳ್ಳಬೇಕು. ಮಲಬದ್ಧತೆ ಇದಕ್ಕೊಂದು ಪ್ರಧಾನ

ಕಾರಣ. ಹಾಲು ಸೇವನೆಯೂ ಕನಸಿಗೆ ಕಾರಣ. ಏಕೆಂದರೆ ಅದು ಪ್ರಚೋದಕ ವಸ್ತು; ಆದರೆ ಕಾಮೇಚ್ಛೆಯೂ ಸಾಮಾನ್ಯ ಕಾರಣ. ನಿನ್ನ ವಿಷಯಕ್ಕೆ ಇದು ಅನ್ವಯಿಸುವುದಿಲ್ಲ. ಒಬ್ಬ ವ್ಯಕ್ತಿ ದೈಹಿಕವಾಗಿ ಅಶಕ್ತನಾಗಿಲ್ಲದಿದ್ದರೆ ಅವನು ಸ್ವಭಾವತಃ ಕಾಮೇಚ್ಛೆಯುಳ್ಳವನಾಗಿದ್ದರೂ ಹಾಲು ಅದನ್ನು ಕೆರಳಿಸಲಾರದು. ದೈಹಿಕವಾಗಿ ಅಶಕ್ತರಾದವರಿಗೆ ಹಾಲು ಪುಷ್ಟಿಯನ್ನು ನೀಡುತ್ತದೆ.

ಮಾನವಸೇವೆ, ವಿವೇಕಯುತ ವ್ಯಕ್ತಿಯೊಬ್ಬನ ಪ್ರಧಾನ ಗುಣಗಳಲ್ಲಿ ಒಂದು. ಈ ನಿಯಮಕ್ಕೆ ಅಪವಾದವಿರಲಾರದು.

ಎಲ್ಲ ಯೋಚನೆಗಳಿಂದಲೂ ನನ್ನ ಮನಸ್ಸನ್ನು ಎಷ್ಟು ಕಾಲ ಮುಕ್ತವಾಗಿಟ್ಟಿರುವೆನೊ ನಾನು ಹೇಳಲಾರೆ. ಆದರೆ ನಿರರ್ಥಕ ಯೋಚನೆಗಳು ನನ್ನ ಮನಸ್ಸನ್ನು ಪ್ರವೇಶಿಸಲಾರವೆಂದು ಮಾತ್ರ ಬಲ್ಲೆ. ಒಂದುವೇಳೆ ಅವು ಪ್ರವೇಶಿಸಿದರೂ ಪೋಲೀಸರಿಂದ ಹಿಂಬಾಲಿಸಲ್ಪಟ್ಟ ಕಳ್ಳರು ಪಲಾಯನ ಮಾಡುವಂತೆ ಪಲಾಯನ ಮಾಡಲೇಬೇಕು.

ಕಪಟತನವು ಅಸತ್ಯಕ್ಕೊಂದು ಮುಖವಾಡ.

## ಮಥುರಾದಾಸನಿಗೆ

ಕಾಮೇಚ್ಛೆಯನ್ನು ಕುರಿತು ದೀರ್ಘಚಿಂತನೆ ಮಾಡಬೇಡ. ಒಮ್ಮೆ ತೀರ್ಮಾನಕ್ಕೆ ಬಂದಮೇಲೆ ಅದನ್ನು ಪುನಃಪುನಃ ಪರಿಶೀಲಿಸಲೇಬೇಡ. ಸಂಕಲ್ಪ ಮಾಡುವುದೆಂದರೆ, ಆ ಸಂಕಲ್ಪದ ವಿಷಯವಾಗಿ ಪುನಃ ವಿಚಾರ ಮಾಡುವುದಿಲ್ಲವೆಂದು ಅರ್ಥ. ವರ್ತಕನೊಬ್ಬ ವಸ್ತುವನ್ನು ಮಾರಿದ ಮೇಲೆ ಅದನ್ನು ಕುರಿತು ಪುನಃ ಚಿಂತಿಸುವುದಿಲ್ಲ, ಬೇರೆ ವಸ್ತುಗಳ ಬಗೆಗೆ ಯೋಚಿಸುತ್ತಾನೆ. ಸಂಕಲ್ಪ ಮತ್ತು ವ್ರತಗಳ ಮಾತೂ ಇದೇ.

## ಕಾರ್ಯಕರ್ತನೊಬ್ಬನಿಗೆ

ಸಾರ್ವಜನಿಕ ಅಭಿಪ್ರಾಯವೆಂದರೆ ನಾವು ಗೌರವಿಸುವ ಸಮಾಜದ ಒಳ್ಳೆಯ ಅಭಿಪ್ರಾಯ. ಅದು ಅನೀತಿಯಾಗಿರದಿದ್ದರೆ ಅದನ್ನು ಪೂಜ್ಯ

ಭಾವದಿಂದ ಕಾಣಬೇಕು. ರಾಮಚಂದ್ರ ಅಯೋಧ್ಯೆಯ ಅಗಸನೊಬ್ಬನ ಮಾತನ್ನು ಕೇಳಿ ಸೀತಾದೇವಿಯನ್ನು ವನವಾಸಕ್ಕೆ ಕಳುಹಿಸಿದನೆಂದು ಹೇಳುವ ಕಥೆಯನ್ನು ನಂಬುವುದು ಅಸಾಧ್ಯ. ಅಂಥ ತೀರ್ಮಾನವನ್ನು ನಾವು ಅಂಗೀಕರಿಸಲಾರೆವು. ರಾಮಾಯಣದ ಗ್ರಂಥಕರ್ತ ಇಂಥ ಕಥೆಯೊಂದನ್ನು ಜೋಡಿಸಿರುವ ಉದ್ದೇಶವನ್ನು ನಾನು ಅರಿಯಲಾರೆ. ರಾಮಾಯಣದಂಥ ಪುಸ್ತಕಗಳನ್ನು ನಾನು ಅಂಥ ದೃಷ್ಟಿಯಿಂದ ವ್ಯಾಸಂಗವೇ ಮಾಡುವುದಿಲ್ಲ. ಪುಟ್ಟ ಬಾಲಿಕೆಯರ ವಿಷಯದಲ್ಲಿ ನನ್ನ ವರ್ತನೆಯ ಕೆಲವು ಅಂಶಗಳಿಂದ ಆಶ್ರಮವಾಸಿಗಳಲ್ಲಿ ಕೆಲವರು ಅಸಮಾಧಾನಗೊಂಡಿದ್ದರೆ ನಾನು ಅಂಥ ಸಲಿಗೆಯನ್ನು ನಿಲ್ಲಿಸಬೇಕು; ಏಕೆಂದರೆ ಅದು ನನ್ನ ಕರ್ತವ್ಯದ ಒಂದು ಅಂಶವಲ್ಲ; ಅದನ್ನು ತ್ಯಜಿಸುವುದು ಬಾಲಿಕೆಯರ ಮನಸ್ಸಿನಲ್ಲಿ ದುರ್ಭಾವನೆಗೆ ಎಡೆಗೊಡುವುದಾದರೆ ಆಶ್ರಮವಾಸಿಗಳಿಗೆ ವಿವರಣೆ ಕೊಟ್ಟು ನಾನು ಸಲಿಗೆಯಿಂದ ವರ್ತಿಸುವುದನ್ನು ಪುನಃ ಆರಂಭಿಸಬೇಕು. ಬಾಲಿಕೆಯರು ನಾನು ಏಕಾಂಗಿಯಾಗಲು ಬಿಡದೆ ಇದ್ದರೆ ಅದರಿಂದ ಏನೂ ಕೆಡಕು ಸಂಭವಿಸದಂತೆ ನೋಡಿಕೊಳ್ಳುವುದು ನನ್ನ ಕರ್ತವ್ಯ. ಆದರೆ ಬೇರೆ ಯಾರೂ ನನ್ನಂತೆ ಸಲಿಗೆಯಿಂದ ವರ್ತಿಸಲು ಅನುಕರಿಸಬಾರದು. ಅಂಥ ವರ್ತನೆ ಸಹಜವರ್ತನೆಯಾಗಿರಬೇಕು. ಯಾರೇ ಆಗಲಿ, ಎಂದೋ ಒಂದು ದಿವಸದಿಂದ ಆ ರೀತಿ ವರ್ತಿಸುವೆನು ಎಂದು ಕೃತಕ ಸಂಕಲ್ಪ ಮಾಡಬಾರದು; ಅದರಿಂದ ಕೆಡಕಾದೀತು. ಕೆಟ್ಟ ಮನಸ್ಸಿನಿಂದ ಅತ್ಯಂತ ನಿರ್ದುಷ್ಟವೆನಿಸಿದ ಸಲಿಗೆಯನ್ನು ತೆಗೆದುಕೊಂಡರೂ ಅದರಿಂದ ಆತನೂ ಇತರರೂ ಪತನಹೊಂದುವರು. ನಮ್ಮ ಸಮಾಜದಲ್ಲಿ ಸ್ತ್ರೀಪುರುಷರ ಸಂಬಂಧ ಸಹಜವಾಗಿ ವ್ಯವಸ್ಥಿತವಾಗುವ ವರೆಗೂ ಎಚ್ಚರಿಕೆಯಿಂದ ನಡೆಯುವುದೇ ಯುಕ್ತ. ಈ ವಿಷಯದಲ್ಲಿ ಎಲ್ಲರೂ ಅನುಸರಿಸಬಹುದಾದ ಸಾರ್ವತ್ರಿಕ ನಿಯಮವೇನೂ ಇಲ್ಲ. ನಿನ್ನ ವರ್ತನೆ ಅಸಂಸ್ಕೃತ. ನಿನ್ನ ಸಹಜ ನಿಷ್ಕಲಂಕತೆ ನಿನ್ನನ್ನು ರಕ್ಷಿಸುತ್ತದೆ. ಆದರೆ ನೀನು ಅದರ ಬಗೆಗೆ ಹೆಮ್ಮೆಪಟ್ಟುಕೊಂಡು ಅದನ್ನೇ ಬಿಡದೆ ಹಿಡಿದುಕೊಂಡಿದ್ದರೆ ಅಯುಕ್ತವೆನಿಸುತ್ತದೆ. ಅದು ಕೇವಲ ವಿಚಾರ ಶೂನ್ಯತೆ. ಈಗ ನಿನಗೆ ಅದರ ಕೆಡಕು ಗೋಚರವಾಗಲಾರದು, ಆದರೆ

ಎಂದಾದರೊಂದು ದಿನ ಪಶ್ಚಾತ್ತಾಪ ಪಡಬೇಕಾದೀತು. ಅಹಂಕಾರ ಎಂದಿದ್ದರೂ ಪತನಹೇತು. ಆದುದರಿಂದ ಯಾರೇ ಆಗಲಿ ನಮ್ಮ ಸಾಂಪ್ರದಾಯಿಕ ಕಟ್ಟುಕಟ್ಟಲೆಗಳು ಕೆಟ್ಟವೆಂಬ ಅಭಿಪ್ರಾಯದಿಂದ ಸಮಾಜದಲ್ಲಿ ಅನಾವಶ್ಯಕ ರೀತಿಯ ತಲ್ಲಣವನ್ನುಂಟುಮಾಡಬಾರದು.

## 'ಬಾ' ಅವರಿಗೆ

ಇನ್ನು ಕೆಲವೇ ದಿವಸಗಳಲ್ಲಿ ನೀನು ಸೆರೆಮನೆಯಿಂದ ಬಿಡುಗಡೆ ಹೊಂದುವೆ. ಅದು ನನಗೆ ವ್ಯಸನಕರವಾದಂತೆ ನಿನಗೂ. ನಿನ್ನ ವಿಷಯದಲ್ಲಿ ನಾನು ವಿಶೇಷತೆಯನ್ನು ತೋರಿಸಿ, ನಿನ್ನನ್ನು ಭೇಟಿ ಮಾಡಬಹುದು. ಆದರೆ ಇದು ನನಗೆ ತರವಲ್ಲವೆಂದು ನೀನೇ ಒಪ್ಪಿಕೊಂಡೀಯೆ. ನಮ್ಮ ಬಾಳು ತ್ಯಾಗದ ಆಧಾರದ ಮೇಲೆ ನಿಂತಿದೆ. ಆದುದರಿಂದ ಶಾಂತಳಾಗಿ ಇರಲು ಯತ್ನಿಸು. ಪತ್ರ ಬರೆಯುತ್ತಿರು.

## ತಮ್ಮ ಸೊಸೆಗೆ*

(ಬಾಪೂ ತಮ್ಮ ಸೊಸೆ ಸುಶೀಲಾಗೆ ಬರೆದ ಈ ಪತ್ರ ಅವರು ಕುಟುಂಬದ ಯಜಮಾನಿಕೆಯನ್ನು ಹೇಗೆ ನಡೆಸುತ್ತಿದ್ದರೆಂಬುದನ್ನು ತೋರಿಸುತ್ತದೆ :)

ನೀನು ಸೋಮಾರಿತನದ ಹುಡುಗಿ. ನಿನ್ನ ಎರಡು ಪುಟದ ಪತ್ರವೇ ನಿನಗೆ ಬಹುದೀರ್ಘ ಪತ್ರವೆನಿಸಿದೆ; ನನಗೋ ಅದು ಬಹಳ ಕಡಮೆ ಎನಿಸಿದೆ. ನಾನು ಇಂಗ್ಲೆಂಡಿನಲ್ಲಿ ವ್ಯಾಸಂಗಮಾಡುತ್ತಿದ್ದಾಗ ನನ್ನ ಅಣ್ಣನಿಗೆ ಒಂದೇ ಪತ್ರದಲ್ಲಿ ೨೦–೨೫ ಪುಟಗಳಷ್ಟು ಬರೆದರೂ ನನಗೆ ಅದು ಕಡಮೆ ಎನಿಸುತ್ತಿತ್ತು ; ಅಣ್ಣ ಅದು ದೀರ್ಘವೆಂದೂ ಓದಲು ಕಷ್ಟವೆಂದೂ ಭಾವಿಸುವರೆಂದು ಎಂದಿಗೂ ಆಲೋಚಿಸುತ್ತಿರಲಿಲ್ಲ; ಅವರಿಗೆ ಅದು ಇಷ್ಟವಾಗುವುದೆಂದೇ ನಂಬಿದ್ದೆ. ನೀನೂ ಅನೇಕ ಪುಟಗಳನ್ನು ಬರೆಯಬಹುದು ; ವಾರದಲ್ಲಿ ಏನೇನು ಮಾಡಿದೆ, ಯಾವ ಯಾವ ವ್ಯಕ್ತಿಗಳನ್ನು ಭೇಟಿಮಾಡಿದೆ, ಯಾವ ಯಾವ ಪುಸ್ತಕಗಳನ್ನು ಓದಿದೆ, ಏನೇನು ತಪ್ಪನ್ನು ಮಾಡಿದೆ—ಎಲ್ಲವನ್ನೂ ತಿಳಿಸಬಹುದು.

---

* ಮಣಿಲಾಲ್ ಅವರ ಪತ್ನಿಯೆಂದು ಕಂಡುಬರುತ್ತದೆ.

ಆದರೆ ನೀನೋರ್ವ ರಾಣಿಯಂತೆ ಭಾವಿಸಿದೀಯೆ; ಬರೆಯಲು ಸಾಧ್ಯವಾದರೆ ಒಂದೇ ಪಂಕ್ತಿ ಬರೆದು ೫೦ ಸಾಲನ್ನು ಬರೆದಂತೆ ಎಂದು ಭಾವಿಸುತ್ತೀಯೆ; ನೀನು ಮಣಿಲಾಲ್ ಒಬ್ಬನನ್ನು ಹತೋಟಿಗೆ ತಂದು ಕೊಂಡರೆ ಸಾಕು. ಅವನು ನಿನ್ನಷ್ಟು ವಿಚಾರಪರನಲ್ಲ; ಆದುದರಿಂದಲೇ ನಿಮ್ಮಿರ್ವರಿಗೂ ವಿವಾಹಮಾಡಿಸಿದುದು. ನೀನು ಜನರನ್ನು ತಿಳಿದು ಕೊಳ್ಳುವ ಬಗೆ ಸರಿಯಾಗಿರುತ್ತದೆಂದು ನನ್ನ ನಂಬಿಕೆ. ಆದುದರಿಂದ ನಿನ್ನ ಹತೋಟಿಯನ್ನು ಸ್ವಲ್ಪ ಬಿಗಿಮಾಡು. ಅವನು ನಿನ್ನ ಗಂಡನಾಗಿರು ವುದರಿಂದ ಏನೋ ಹೇಳಿಬಿಟ್ಟರೆ ಸಾಕೆಂದು ತಿಳಿಯಬೇಡ. ನಿಜವಾದ ಪತ್ನಿ ತನ್ನ ಪತಿಯ ಅವನತಿಯನ್ನು ತಪ್ಪಿಸುತ್ತಾಳೆ. ನೀನು ಇಂಥ ಕ್ರಿಯೆ ಮಾಡಬಲ್ಲೆ. ಮಣಿಲಾಲ್ ನಿನ್ನನ್ನು ಜೊತೆಗಾರ್ತಿ, ಅರ್ಧಾಂಗಿ ಎಂದು ಸ್ವೀಕರಿಸಿರುವನೇ ಹೊರತು ಕೇವಲ ಗುಲಾಮಳಂತಲ್ಲ. ಆದುದ ರಿಂದ ನೀವಿಬ್ಬರೂ ಒಬ್ಬರಮೇಲೆ ಮತ್ತೊಬ್ಬರು ಸಮಾನ ಅಧಿಕಾರವನ್ನು ಹೊಂದಿದವರಾಗಿದೀರಿ. ನಿನಗೆ ಹೆಚ್ಚು ವಿವೇಚನಾಶಕ್ತಿ ಇರುವುದರಿಂದ, ನಿನ್ನ ಹಕ್ಕು ಹೆಚ್ಚು. ಮಣಿಲಾಲ್ ಯಂತ್ರವೊಂದನ್ನು ನಡೆಸಿಯಾನು, ನಿನಗಿಂತ ಚೆನ್ನಾಗಿ ಜಲಚಿಕಿತ್ಸೆ ಮಾಡಿಯಾನು; ಆದುದರಿಂದ ಆ ವಿಷಯ ಗಳಲ್ಲಿ ಅವನ ಅಧಿಕಾರ ಅಧಿಕ.

## ದರ್ಬಾರಿ ಸಾಧುವಿಗೆ

ಆಗಸ್ಟ್ ೨೩, ೧೯೩೨

ಚಂಚಲಭಾವಗಳು ಎಂದಿಗೂ ಆಧ್ಯಾತ್ಮವಿಕಾಸದ ಒಂದು ಹಂತ ವನ್ನು ತೋರಿಸಲಾರವು. ಅವು ನಮ್ಮಲ್ಲಿ ಅನೇಕರನ್ನು ಪೀಡಿಸುತ್ತವೆ, ಆದುದರಿಂದಲೇ ಮನಸ್ಸಿನ ಏಕಾಗ್ರತೆಯನ್ನು ಸಾಮಾನ್ಯವಾಗಿ ಒತ್ತಿ ಹೇಳುವುದು. ಇಲ್ಲಿ ನಾವು ಗಮನಿಸಬೇಕಾದುದು ಇಷ್ಟು ಮಾತ್ರ— ಕಾಮೋದ್ರೇಕದಿಂದ ವೀರ್ಯ ನಷ್ಟವಾಗುವಂತೆಯೇ ಅನೇಕ ವಿಧದ ಆಲೋಚನೆಗಳೂ ಮಾನಸಿಕ ಸತ್ತ್ವವನ್ನು ನಷ್ಟಗೊಳಿಸುತ್ತವೆ. ಶಾರೀರಕ ದುರ್ಬಲತೆ ಮನಸ್ಸಿನ ಮೇಲೆ ಪರಿಣಾಮ ಮಾಡುವಂತೆಯೇ ಮಾನಸಿಕ ದುರ್ಬಲತೆಯೂ ಶರೀರದ ಮೇಲೆ ಪರಿಣಾಮ ಮಾಡುತ್ತದೆ. ಆದುದರಿಂದ

ನಾನು ಬ್ರಹ್ಮಚರ್ಯವನ್ನು ವಿಶಾಲ ಅರ್ಥದಲ್ಲಿ ಭಾವಿಸುತ್ತೇನೆ; ಎಲ್ಲ ಉದ್ದೇಶರಹಿತ ಭಾವಗಳನ್ನೂ ಬ್ರಹ್ಮಚರ್ಯದ ಭಂಗವೆಂದು ಭಾವಿಸುತ್ತೇನೆ. ನಾವು ಬ್ರಹ್ಮಚರ್ಯವನ್ನು ಸಂಕುಚಿತ ರೀತಿಯಲ್ಲಿ ಅರ್ಥ ಮಾಡಿಕೊಂಡು ಅದರ ಸಾಧನೆ ಕಷ್ಟವೆಂಬುದಾಗಿ ತಿಳಿಯುತ್ತೇವೆ. ಆದರೆ ಅದನ್ನು ವಿಶಾಲವಾದ ರೀತಿಯಲ್ಲಿ ಅರ್ಥಮಾಡಿಕೊಂಡು ಎಲ್ಲ ಹನ್ನೊಂದು ಇಂದ್ರಿಯಗಳನ್ನೂ ನಿಗ್ರಹಗೊಳಿಸಲು ಪ್ರಯತ್ನಿಸಿದರೆ ಆಗ ಪಾಶವಿಕ ಕಾಮೇಚ್ಛೆಯನ್ನು ಅಂಕೆಯಲ್ಲಿಟ್ಟುಕೊಳ್ಳಲು ಹೆಚ್ಚು ಸುಲಭವಾದೀತು. ಬಾಹ್ಯ ಕರ್ಮ ಮಾನಸಿಕ ಶುದ್ಧಿಯನ್ನು ಅರಿತುಕೊಳ್ಳಲು ಕಾಲಾವಕಾಶ ಕೊಡುವುದಿಲ್ಲವೆಂದು ನೀವು ಭಾವಿಸಿರುವಂತೆ ಕಂಡುಬರುತ್ತದೆ. ಆದರೆ ನನ್ನ ಅನುಭವ ಇದಕ್ಕೆ ತೀರ ವಿರುದ್ಧ. ಮಾನಸಿಕ ಶುದ್ಧಿ ಇಲ್ಲದೆ ಬಾಹ್ಯ ಕರ್ಮವನ್ನು ನಿಸ್ವಾರ್ಥಬುದ್ಧಿಯಿಂದ ಮಾಡುವುದು ಸಾಧ್ಯವೇ ಇಲ್ಲ. ಆದುದರಿಂದ ಬಾಹ್ಯ ಕರ್ಮದ ಪರಿಶುದ್ಧತೆಯಿಂದಲೇ ಮಾನಸಿಕ ಶುದ್ಧಿಯನ್ನೂ ಅಳತೆಮಾಡಲು ಸಾಧ್ಯ. ಬಾಹ್ಯ ಕರ್ಮಶುದ್ಧಿ ಇಲ್ಲದೆ ಮಾನಸಿಕ ಶುದ್ಧಿಯನ್ನು ಪಡೆಯಲು ಯತ್ನಿಸುವವರು ತಪ್ಪು ದಾರಿಗೆ ಹೋಗುವ ಅಪಾಯವಿದೆ. ಆ ಬಗೆಯ ಎಷ್ಟೋ ನಿದರ್ಶನಗಳನ್ನು ಯೋಚಿಸಬಲ್ಲೆ. ಆದರೆ ನಾವು ಸಾಮಾನ್ಯ ನಿದರ್ಶನವೊಂದನ್ನು ತೆಗೆದುಕೊಳ್ಳೋಣ. ಸೆರೆಮನೆಯಲ್ಲಿ ನನ್ನ ಸಹಕಾರ್ಯಕರ್ತರನೇಕರು ಬಗೆಬಗೆಯ ಒಳ್ಳೆಯ ಸಂಕಲ್ಪಗಳನ್ನು ಮಾಡುವುದನ್ನು ಕಂಡಿದೇನೆ. ಅವರು ಅಲ್ಲಿಂದ ಹೊರಕ್ಕೆ ಹೋದ ಕೂಡಲೆ ಬಹುಜಾಗ್ರತೆ ಭಂಗಮಾಡಿದಾರೆ. ಸೆರೆಮನೆಯಲ್ಲಿರುವಾಗ, ತಾವು ತಮ್ಮ ಸಂಕಲ್ಪವನ್ನೆಂದಿಗೂ ಭಂಗಪಡಿಸುವುದಿಲ್ಲವೆಂದೂ ಪ್ರಾರ್ಥನೆಯಿಂದ ಮಾನಸಿಕ ಶುದ್ಧಿ ಮತ್ತು ಚಿತ್ತೈಕಾಗ್ರತೆಗಳನ್ನು ಹೊಂದಿರುವುದಾಗಿಯೂ ಖಚಿತ ಅಭಿಪ್ರಾಯಹೊಂದಿದ್ದರು. ಆದರೆ ಸೆರೆಮನೆಯಿಂದ ಹೊರಕ್ಕೆ ಹೋದ ಕೂಡಲೆ ಅವೆಲ್ಲ ಏನೂ ಇಲ್ಲದಂತೆ ಆದವು. ಗೀತೆಯ ಒಂದು ಅದ್ಭುತ ಶ್ಲೋಕ ಭೌತವಿಜ್ಞಾನಿಗಳು ಯಾವ ತತ್ತ್ವಸಿದ್ಧಾಂತವೊಂದರ ಸಾರ್ವತ್ರಿಕ ವ್ಯಾಪಕತೆಯನ್ನು ತಿಳಿಸಿರುವರೊ ಅದನ್ನೇ ತಿಳಿಸುತ್ತದೆ. (೩–೫) ಅದನ್ನು ಈ ರೀತಿ ಅನುವಾದ ಮಾಡಬಹುದು : 'ಒಂದು ಕ್ಷಣವೂ ಕರ್ಮ ಮಾಡದೆ ಯಾರೂ ಇರಲು

ಸಾಧ್ಯವಿಲ್ಲ. ಕರ್ಮವೆಂದರೆ ಚೇತನಾಚೇತನಾತ್ಮಕವಾದ ಸಕಲ ವಸ್ತುಗಳ ಚಲನವಲನ.' ಮಾನವ ವ್ಯಕ್ತಿಗಳು ಇದನ್ನು ನಿಸ್ವಾರ್ಥಬುದ್ಧಿಯಿಂದ ಆಚರಿಸುವುದೇ ಅದರ ಲಕ್ಷಣ. ಗೀತೆಯು ಈ ಶ್ಲೋಕದ ಅರ್ಥವನ್ನು ಪೂರ್ತಿಗೊಳಿಸುವ ಎರಡು ಅದ್ಭುತ ಶ್ಲೋಕಗಳು ಈಶಾವಾಸ್ಯ ಉಪನಿಷತ್ತಿನಲ್ಲಿ ಬರುತ್ತವೆ. ಬುದ್ಧನನ್ನು ಪೂಜೆಮಾಡುವ ನಾನು ಅವನನ್ನು ಟೀಕಿಸಬಾರದು. ಬೌದ್ಧಸಂನ್ಯಾಸಿಗಳ ಸಂಸ್ಥೆಯ ವ್ಯವಸ್ಥೆಗೆ ಬುದ್ಧನೇ ಕಾರಣನೊ ಅಥವಾ ಅವನ ತರುವಾಯ ಬಂದವರು ಕಾರಣರೊ, ಬಲ್ಲವರು ಯಾರು? ಹೇಗಾದರೂ ಆಗಿರಲಿ, ಸಂಘವು ಈ ಸಾರ್ವತ್ರಿಕ ನಿಯಮಕ್ಕೆ ಅಧೀನವಾಗಿ ಜಡವಾಯಿತು ಮತ್ತು ಕರ್ಮಶೂನ್ಯವಾಯಿತು. ಇಂದಿಗೂ ಸಿಲೋನ್, ಬರ್ಮಾ ಮತ್ತು ಟಿಬೆಟ್ ದೇಶಗಳಲ್ಲಿರುವ ಅನೇಕ ಬೌದ್ಧ ಭಿಕ್ಷುಗಳು ವಿವೇಕವಿಲ್ಲದ ಸೋಮಾರಿಗಳಾಗಿದಾರೆ. ಭಾರತದಲ್ಲಿಯೂ ಅನೇಕ ಸಂನ್ಯಾಸಿಗಳು ಇದರಿಂದ ಭಿನ್ನರೇನಲ್ಲ. ಆದುದರಿಂದ ನಿಜವಾದ ಮತ್ತು ಶಾಶ್ವತ ಮಾನಸಿಕ ಶುದ್ಧಿ ಅವಿಚ್ಛಿನ್ನ ಕರ್ಮದಿಂದ ಮಾತ್ರವೇ ಲಭಿಸೀತು. ಗೀತೆಯ ೪ನೆಯ ಅಧ್ಯಾಯದ ೧೮ನೆಯ ಶ್ಲೋಕದಲ್ಲಿ ಈ ರೀತಿ ಹೇಳಿದೆ: 'ಯಾರು ಕರ್ಮದಲ್ಲಿ ಅಕರ್ಮವನ್ನೂ ಅಕರ್ಮದಲ್ಲಿ ಕರ್ಮವನ್ನೂ ಕಾಣುವನೋ ಅವನೇ ಯೋಗಿ, ನಿಜವಾದ ಕರ್ಮಯೋಗಿ.' ಇದೆಲ್ಲ ನನ್ನ ಅನುಭವವೇ. ನಾನು ಈ ಶ್ಲೋಕಗಳನ್ನು ಉದಹರಿಸಲು ಕಾರಣ, ಗೀತೆಯ ತತ್ತ್ವಬೋಧೆಯೇ ಇದೆಂದು. ನನ್ನ ಸ್ವಾನುಭವಕ್ಕೆ ಬಂದ ಹೊರತು ನಾನು ಯಾವ ಶಾಸ್ತ್ರವಾಕ್ಯವನ್ನೂ ಉದಹರಿಸುವುದಿಲ್ಲ. ಇತರರ ಅನುಭವ ನನ್ನ ಅನುಭವಕ್ಕೆ ವಿರುದ್ಧವಾಗಿರಬಹುದು, ಅದಕ್ಕೆ ಪೋಷಕವಾಗಿ ಗೀತಾಶ್ಲೋಕವೊಂದನ್ನೂ ಅವರು ಉದಹರಿಸಬಹುದು. ಅಲ್ಲದೆ ಅವರು ತಮ್ಮ ಅನುಭವವನ್ನು ಸಮರ್ಥಿಸಲು ಈ ಶ್ಲೋಕಗಳನ್ನೇ ಬೇರೆ ವಿಧಾನದಲ್ಲಿ ಅರ್ಥಮಾಡಬಹುದು. ಆದುದರಿಂದ ನನ್ನ ಅನುಭವವೇ ಸರ್ವರಿಗೂ ಅಂಗೀಕಾರಾರ್ಹವೆಂದು ನಾನು ಆಗ್ರಹಮಾಡಬಾರದು.

## ಪ್ಯಾರೇಲಾಲ್ ಅವರಿಗೆ

ಆಗಸ್ಟ್ ೨೮, ೧೯೩೨

ಸರದಾರರು* ತಮ್ಮ ವ್ಯಾಸಂಗದಲ್ಲಿ ಅರಬ್ಬೀ ಕುದುರೆಯಂತೆ ಮುಂದುವರಿಯುತ್ತಿದಾರೆ. ಸಂಸ್ಕೃತದ ಪುಸ್ತಕ ಸದಾ ಅವರ ಹಸ್ತದಲ್ಲಿ ಇರುತ್ತದೆ. ಅವರ ವಿಷಯವಾಗಿ ನಾನು ಎಂದೂ ಇಷ್ಟು ಹೆಚ್ಚು ಆಶಾ ಭರಿತನಾಗಿರಲಿಲ್ಲ. ಲಕೋಟೆಗಳನ್ನು ಮಾಡುವುದರಲ್ಲಿ ಯಾರೂ ಅವರನ್ನು ಮೀರಿಸಲಾರರು. ಯಾವ ಬಗೆಯ ಅಳತೆಯೂ ಇಲ್ಲದೆ ಅದನ್ನು ಅವರು ಮಾಡುತ್ತಾರೆ. ಕೇವಲ ಕಣ್ಣಿನ ಅಳತೆಯಿಂದಲೇ ನೇರವಾಗಿ ಕತ್ತರಿಸು ತ್ತಾರೆ. ಇಷ್ಟೆಲ್ಲ ಆದರೂ ಅವರು ಹೆಚ್ಚು ಕಾಲ ಅದಕ್ಕಾಗಿ ವಿನಿಯೋಗಿಸಿ ದಂತೆ ಕಾಣಬರುವುದಿಲ್ಲ. ಅವರ ವ್ಯವಸ್ಥಾವಿಧಾನ ಅದ್ಭುತವಾದುದು, ಮಾಡಬೇಕಾದುದನ್ನು ಆಗಾಗಲೇ ಮುಗಿಸಿಬಿಡುತ್ತಾರೆ. ಜ್ಞಾಪಕವಿಟ್ಟು ಕೊಳ್ಳಬೇಕಾದ ಪ್ರಮೇಯವೇ ಇಲ್ಲ. ನೂಲುವುದನ್ನೂ ಆರಂಭಿಸಿದಾರೆ; ಘಂಟೆಗೆ ಸರಿಯಾಗಿ ಮೊದಲುಮಾಡುತ್ತಾರೆ; ನೂಲಿನ ವೇಗ ಮತ್ತು ಗುಣಗಳಲ್ಲಿ ಅಭಿವೃದ್ಧಿಹೊಂದುತ್ತಿದಾರೆ. ಅವರು ಆರಂಭಿಸಿದ ಯಾವು ದನ್ನೂ ಮರೆಯುವುದಿಲ್ಲ; ಅವರು ಕಾಲಕ್ಕೆ ಸರಿಯಾಗಿ ಮಾಡುವುದರಿಂದ ಆತುರ, ಅವಸರ ಎಂಬ ಮಾತೇ ಇಲ್ಲ.

## ಕಾರ್ಯಕರ್ತನೊಬ್ಬನಿಗೆ

(ಯಾರೋ ಒಬ್ಬಾಕೆ ಆಜೀವ ಅವಿವಾಹಿತಳಾಗಿ ಇರುವೆನೆಂದು ಪತ್ರ ಬರೆದು ದಕ್ಕೆ ಬಾಪೂ ಹೀಗೆ ಉತ್ತರವಿತ್ತರು :)

ಈ ಅಭಿಪ್ರಾಯವನ್ನು ನಾನು ಒಪ್ಪುತ್ತೇನೆ; ಆದರೆ ಅನೇಕ ಯುವಕ–ಯುವತಿಯರು ಆತ್ಮವಂಚನೆ ಮಾಡಿಕೊಂಡಿರುವುದನ್ನು ನಾನು ಕಂಡಿದೇನೆ. ಪೂರ್ಣವಾಗಿ ಬ್ರಹ್ಮಚರ್ಯವನ್ನು ಆಚರಿಸಬಯಸುವವರು ಸತ್ಯಸಂಧರಾಗಿರಬೇಕು, ಏನನ್ನೂ ಗೋಪ್ಯವಾಗಿ ಇಡಬಾರದು. ಬ್ರಹ್ಮ ಚರ್ಯದ ಇತಿಮಿತಿಗಳನ್ನೆಲ್ಲ ಅರಿತಿರಬೇಕು. ಪಾಶವಿಕ ಕಾಮೇಚ್ಛೆಯನ್ನು

* **ವಲ್ಲಭಭಾಯಿ ಪಟೇಲರು.**

ದಮನ ಮಾಡುವುದು ಸಣ್ಣ ವಿಷಯವಲ್ಲ. ಇದಕ್ಕೆ, ಎಲ್ಲ ಇಂದ್ರಿಯ ಭೋಗಗಳನ್ನೂ ತ್ಯಜಿಸಬೇಕು. ಎಂದರೆ, ಮಾಡಬೇಕಾದುದನ್ನೆಲ್ಲ ಆಗತ್ಯತೆ ದೃಷ್ಟಿಯಿಂದ ಮಾಡಬೇಕೇ ವಿನಾ ಭೋಗಾಪೇಕ್ಷೆಯಿಂದ ಮಾಡಬಾರದು. ಆದುದರಿಂದ ಎಲ್ಲ ಅನಗತ್ಯ ವಸ್ತುಗಳನ್ನೂ ವರ್ಜಿಸಬೇಕು. ಆಹಾರ, ಪಾನೀಯ, ಉಡುಪು ಮತ್ತು ಇತರ ಎಲ್ಲ ವಸ್ತುಗಳಲ್ಲಿಯೂ ಇದೇ ನಿಯಮವನ್ನು ಅನುಸರಿಸಬೇಕು. ಇದನ್ನೆಲ್ಲ ನೀನು ಮಾಡಲು ಸಾಧ್ಯವಿದ್ದರೆ ಒಳ್ಳೆಯದು. ಹಾಗಿಲ್ಲವಾದರೆ ನೀನು ನಿನ್ನ ಅಶಕ್ತಿಯನ್ನು ಒಪ್ಪಿಕೊಂಡು ಇತರ ಎಲ್ಲ ಬಾಲಿಕೆಯರಂತೆಯೇ ವರ್ತಿಸಬೇಕು. ಆಗ ನಿನ್ನ ವರ್ತನೆ ಯೋಗ್ಯವಾದೀತು. ನಿನ್ನ ಯೋಗ್ಯತೆಗೆ ಮೀರಿದ ಯಾವುದನ್ನೂ ಪ್ರಯತ್ನ ಮಾಡಬೇಡ.

(....ರವರಿಗೆ ಪ್ರಾರ್ಥನೆಯ ಸಮಯದಲ್ಲಿ ಮೌನದ ಬಗೆಗೆ :)

ಸಾಯಂಕಾಲದ ಪ್ರಾರ್ಥನೆಯ ಸಮಯದಲ್ಲಿ ಐದು ನಿಮಿಷಗಳ ಮೌನವನ್ನು ನಾನು ಸಲಹೆಮಾಡಿದ್ದೆ. ಇದೇ ರೀತಿ ಬೆಳಗಿನ ಪ್ರಾರ್ಥನೆಯ ಸಮಯದಲ್ಲಿ ಮಾಡಬಹುದು. ಪ್ರಾರ್ಥನೆಗೆ ಕೂಡಿದವರೆಲ್ಲ ಅದರಲ್ಲಿ ಮನಸ್ಸನ್ನು ಇಟ್ಟದ್ದರೆ, ಎಲ್ಲ ಶಬ್ದವೂ ಕ್ರಮಕ್ರಮವಾಗಿ ನಿಲ್ಲಬೇಕು. ಮಕ್ಕಳೂ ಸಹ ಸಹಕರಿಸಲು ಕಲಿಯುವರು. ಇಂಗ್ಲೆಂಡಿನಲ್ಲಿ ಅರ್ಧ ಘಂಟೆ ಕಾಲ ಮೌನವನ್ನು ಆಚರಿಸಿದ ಸಭೆಗಳಲ್ಲಿ ನಾನು ಭಾಗವಹಿಸಿದೇನೆ. ನಮ್ಮ ಜನರೂ ಮೌನವನ್ನು ಮುಖ್ಯ ವಿಷಯವನ್ನಾಗಿ ಪರಿಗಣಿಸಿದ್ದಾರೆ. ಸಮಾಧಿಯೆಂದರೆ ಮೌನವೆಂದು ಅರ್ಥ. ಮುನಿ–ಮೌನಿ ಎಂಬ ಎರಡೂ ಶಬ್ದಗಳು ಒಂದೇ ಮೂಲಶಬ್ದದಿಂದ ಬಂದವು. ಮೌನವನ್ನು ಆರಂಭ ಮಾಡಿದ ಕಾಲದಲ್ಲಿ ಅನೇಕ ಯೋಚನೆಗಳು ನಮ್ಮ ಮನಸ್ಸಿನಲ್ಲಿ ಬರುವು ದಲ್ಲದೆ ಕೆಲವು ವೇಳೆ ನಿದ್ರೆಯೂ ಬರುವುದುಂಟು. ಈ ನ್ಯೂನತೆಗಳನ್ನು ಸರಿಪಡಿಸಿಕೊಳ್ಳುವುದಕ್ಕಾಗಿಯೇ ಮೌನವನ್ನು ಆಚರಿಸುವುದು. ಬಹಳ ಮಾತನಾಡುವುದೂ ಗಟ್ಟಿಯಾದ ಶಬ್ದವನ್ನು ಕೇಳುವುದೂ ನಮಗೆ ರೂಢಿ ಯಾಗಿದೆ. ಇದರಿಂದ ಮೌನವು ಕಷ್ಟವಾಗಿ ಕಂಡುಬರುತ್ತದೆ. ಸ್ವಲ್ಪ

ಅಭ್ಯಾಸಮಾಡಿದರೆ ಅದು ನಮಗೆ ಇಷ್ಟವಾಗುತ್ತದೆ; ಇಷ್ಟವಾದಮೇಲೆ ಅವರ್ಣನೀಯ ಆನಂದವನ್ನು ನೀಡುತ್ತದೆ. ನಾವು ಸತ್ಯಾನ್ವೇಷಕರು. ಆದುದರಿಂದ ನಾವು ಮೌನದ ಅರ್ಥವನ್ನು ತಿಳಿದುಕೊಂಡು ಅದನ್ನು ಅದರಂತೆ ಆಚರಿಸಲು ಪ್ರಯತ್ನಿಸಬೇಕು. ಮೌನದ ಕಾಲದಲ್ಲಿ ನಾವು ರಾಮನಾಮ ಜಪ ಮಾಡಬಹುದು. ಅದಕ್ಕೆ ನಮ್ಮ ಮನಸ್ಸನ್ನು ಸಿದ್ಧ ಮಾಡಿಕೊಳ್ಳಬೇಕು. ಅದನ್ನು ಕುರಿತು ಸ್ವಲ್ಪ ಆಲೋಚಿಸಿದರೆ ಅದರ ಬೆಲೆ ನಮಗೆ ಅರಿವಾಗುತ್ತದೆ. ನಾವು ಸಭೆಯಲ್ಲಿ ಐದು ನಿಮಿಷ ಮೌನವಾಗಿ ಕೂಡಲಾರೆವೆ? ನೀನು ಎಂದಾದರೂ ಒಂದು ನಾಟಕಪ್ರದರ್ಶನವನ್ನು ನೋಡಿದೀಯಾ? ಅನೇಕ ರಂಗಮಂದಿರಗಳಲ್ಲಿ ಮಾತನಾಡುವುದಕ್ಕೇ ವಿರೋಧವುಂಟು. ನನ್ನಂಥ ಉತ್ಸಾಹಿಗಳು ಆಟ ಆರಂಭವಾಗುವುದಕ್ಕೆ ಒಂದು ಘಂಟೆ ಮುಂಚೆ ಅಲ್ಲಿಗೆ ಹೋದಾರು. ಅವರ ಉತ್ಸಾಹದಲ್ಲಿ ಒಂದು ಘಂಟೆ ಕಾಲ ಮೌನವಾಗಿದ್ದಾರು. ಅಷ್ಟೇ ಅಲ್ಲ, ಆಟವೂ ನಾಲ್ಕೋ ಐದೋ ಘಂಟೆ ನಡೆದರೆ, ಆಗಲೂ ಪ್ರೇಕ್ಷಕರು ಮೌನವಾಗಿರಬೇಕು. ಮನಸ್ಸು ಹೊಂದಿಕೊಂಡಿರುವುದರಿಂದ ಈ ಮೌನ ಭಾರವೆನಿಸದು. ಆದುದ ರಿಂದ ದೇವರಿಗಾಗಿ ನಾವು ಐದು ನಿಮಿಷ ಕಾಲ ಮೌನವಾಗಿರಬಾರದೇಕೆ? ಈ ವಾದದಲ್ಲಿ ತಪ್ಪಿದ್ದರೆ ದಯಮಾಡಿ ನನಗೆ ತಿಳಿಸು. ಇದು ಸರಿ ಎನಿಸಿದರೆ ಆಸಕ್ತಿಯಿಂದ ಮೌನವಾಗಿರು. ಇದನ್ನು ವಿರೋಧಿಸುವವರೊಡನೆ ನನ್ನ ಪರ ವಾದಿಸು.

ಯಾವ ತಪ್ಪುಗಳಿಗೆ ನಾವು ಗುರಿಯಾಗಿದೇವೋ ಅದನ್ನು ಅನುಭವಿಸ ಬೇಕೆಂದು ಭಾವಿಸದಿರೋಣ.

ಉತ್ತಮರಾಗಬೇಕೆಂದು ಪ್ರಯತ್ನಿಸುವವರಿಗೆಲ್ಲ ನಾವು ಆಶ್ರಯ ನೀಡಬೇಕೆಂಬುದು ನನ್ನ ಆಶಯ. ಯಾವ ವ್ಯಕ್ತಿ ತನ್ನ ನ್ಯೂನತೆಗಳನ್ನು ಗುಣಗಳೆಂದೇ ಭಾವಿಸುವನೋ ಅವನ ವಿಷಯಕ್ಕೆ ದೇವರೂ ಏನನ್ನೂ ಮಾಡಲಾರ ಎಂದು ತುಲಸೀದಾಸರು ಹೇಳಿದಾರೆ.

## ಪರಶುರಾಮನಿಗೆ

(ಪರಶುರಾಮನ ಪತ್ರ ಬಾಪೂಗೆ ಬಹಳ ನಗೆ ತಂದಿತು. ಅವರು ಪತ್ರ ಓದಿ ಮುಗಿಸಲಾಗಲಿಲ್ಲ. ಮಹಾದೇವ್ ಅದನ್ನು ಓದಿ ಪೂರೈಸಿದಮೇಲೆ ಬಾಪೂ ಹೀಗೆ ಉತ್ತರವಿತ್ತರು :)

ನಿನ್ನ ಒಂಬತ್ತು ಪುಟಗಳ ಪುಸ್ತಕ ನನಗೆ ಬಹಳ ನಗೆ ತಂದಿತು. ನಾನು ಯೌವನದಲ್ಲಿದ್ದಾಗ ಎಲ್ಲೋ ಒಂದು ಸಲ ಭಂಗಿ ಸೇದಿದ್ದೆ. ಅದು ನನ್ನನ್ನು ಪೂರ್ಣವಾಗಿ ತಲ್ಲಣಗೊಳಿಸಿತ್ತು.

ಹಿಮಾಲಯದ ತಪ್ಪಲಿನಲ್ಲಿ* ಮೂರು ಲೋಕದ ಗಂಡ ಅರ್ಜುನ ಸಾಮಾನ್ಯ ದರೋಡೆಗಾರರಿಂದ ಸೋಲಿಸಲ್ಪಟ್ಟನೆಂದು ಹೇಳಿದಾಗ, ಖಡ್ಗ ಹಿರಿದು ಮಾಡುವ ಯುದ್ಧ ನಿಷ್ಪ್ರಯೋಜಕ ಎಂಬುದನ್ನು ತೋರಿಸು ವುದೇ ಮಹಾಭಾರತಕರ್ತ ವ್ಯಾಸರ ಉದ್ದೇಶವಾಗಿತ್ತು. ಶ್ರೀ ಕೃಷ್ಣ ಭಗವಾನನು ತನ್ನನ್ನು ತಾನೇ ವರ್ಣಿಸಿಕೊಂಡಿದಾನೆ ಗೀತೆಯಲ್ಲಿ ; ಎಂದರೆ, ಗೀತೆಯ ಕರ್ತ ಭಗವಂತನ ಬಾಯಿಂದ ಈ ಮಾತುಗಳನ್ನು ಆಡಿಸಿದಾನೆ. ವಾಸ್ತವಿಕವಾಗಿ ಭಗವಂತನಿಗೆ ಆಕಾರವೆಂಬುದೇ ಇಲ್ಲ, ಅವನೆಂದಿಗೂ ಮಾನವರಂತೆ ಮಾತನಾಡನು. ಆಗ ಈ ಪ್ರಶ್ನೆ ಏಳುತ್ತದೆ: ಭಗವಂತನ ಬಾಯಲ್ಲಿ ಇಂಥ ಮಾತನ್ನು ಆಡಿಸುವುದು ಸರಿಯೆ ? ಸರಿ ಎಂದು ನನ್ನ ಉತ್ತರ. ಭಗವಂತ ಸರ್ವಶಕ್ತ, ಸರ್ವಾಂತರ್ಯಾಮಿ, ಸರ್ವದರ್ಶಿ. ಸರ್ವದರ್ಶಿಯಾದವನ ಮಾತು ಸತ್ಯವಾಗಿರಲೇಬೇಕು. ಆದುದರಿಂದ ಅದನ್ನು ಹೆಮ್ಮೆಯ ಮಾತು ಎನ್ನಲಾಗುವುದಿಲ್ಲ. ಯಾವ ಮಾನವನೇ ಆದರೂ ತನ್ನನ್ನು ತಾನೇ ಹೀಗೆ ಅಳತೆಮಾಡಿಕೊಳ್ಳಲು ಸಾಧ್ಯವಿಲ್ಲ; ಅವನು ಇಂಥ ಮಾತನ್ನು ಆಡಿದರೆ ಅದು ಸರಿ ಎನಿಸುವುದಿಲ್ಲ. ಆದರೆ ಸಂದರ್ಭ ಬಂದಾಗ ಒಬ್ಬ ವ್ಯಕ್ತಿ ತನ್ನ ಎತ್ತರ ಇಷ್ಟು ಅಡಿ, ಇಷ್ಟು ಅಂಗುಲ ಎಂದು ಹೇಳಿಕೊಳ್ಳಬಹುದು. ಆಗ ಅವನು ಹೆಮ್ಮೆಯ ಮಾತನ್ನು ಆಡುವುದಿಲ್ಲ, ನಿಜವನ್ನೇ ನುಡಿಯುತ್ತಾನೆ. ಆರು ಅಡಿ ಎತ್ತರ ಇರುವ

---

* ಪಂಜಾಬಿನ ಹಿಸ್ಸಾರದ ಬಳಿ ಅರ್ಜುನ ಸೋತುಹೋದನೆಂದು ಪ್ರತೀತಿ.

ವ್ಯಕ್ತಿ ತಾನು ಐದು ಅಡಿ ಎತ್ತರ ಇರುವೆನೆಂದು ಹೇಳಿಕೊಂಡರೆ ಅದು ನಮ್ರತೆಯಲ್ಲ; ಕೇವಲ ಅಜ್ಞಾನ ಅಥವಾ ಕಾಪಟ್ಯ.

## ಕಾರ್ಯಕರ್ತನೊಬ್ಬನಿಗೆ

ನಮ್ಮ ಮಹಿಳೆಯರು ಕಾಮೇಚ್ಛೆಯನ್ನು ಜಯಿಸಲು ಪ್ರಯತ್ನಿಸುವುದಿಲ್ಲ. ಅವರು ಪತ್ನಿಯರಾಗಬಲ್ಲರೆ ಹೊರತು ಭಗಿನಿಯರಾಗುವುದನ್ನು ಅರಿಯರು. ಭಗಿನಿಯಾಗಬೇಕಾದರೆ ಅಗಾಧ ತ್ಯಾಗಶಕ್ತಿ ಆವಶ್ಯಕ. ಪತ್ನಿಯೋರ್ವಳು ಪೂರ್ಣವಾಗಿ ಭಗಿನಿಯಾಗಲಾರಳೆಂದು ನನ್ನ ಮನಸ್ಸಿಗೆ ಗೋಚರಿಸುತ್ತದೆ. ಭಗಿನಿಯಾದವಳು ಜಗತ್ತಿಗೆಲ್ಲ ಭಗಿನಿಯೇ; ಪತ್ನಿ ಒಬ್ಬ ವ್ಯಕ್ತಿಗೆ ಮಾತ್ರ ಸಂಬಂಧಿಸಿದವಳು. ಪತ್ನೀತ್ವ ಅಗತ್ಯವೇ ಆದರೂ, ಅದನ್ನು ಕಲಿಯಬೇಕಾಗಿಲ್ಲ, ಏಕೆಂದರೆ, ಅದು ಕಾಮತೃಪ್ತಿಯಲ್ಲಿ ಸೇರಿ ಹೋಗುತ್ತದೆ. ಆದರೆ ಜಗತ್ತಿಗೆಲ್ಲ ಭಗಿನಿಯಾಗುವುದು ಕಷ್ಟ. ಯಾರಿಗೆ ಬ್ರಹ್ಮಚರ್ಯವು ಸಹಜಗುಣವಾಗಿಹೋಗಿದೆಯೋ ಯಾರು ಸೇವಾಭಾವದಿಂದ ಉದ್ದೀಪ್ತರಾಗಿರುವರೋ ಅವರಿಗೆ ಮಾತ್ರ ಅದು ಸಾಧ್ಯ.

(ಒಳ್ಳೆಯ ತಂದೆತಾಯಿಗಳ ಮಕ್ಕಳು ಏಕೆ ಕೆಟ್ಟವರಾಗುವರೆಂದೂ, ಕೆಟ್ಟ ತಂದೆತಾಯಿಗಳ ಮಕ್ಕಳು ಏಕೆ ಒಳ್ಳೆಯವರಾಗುವರೆಂದೂ ಕೇಳಿದ ಪ್ರಶ್ನೆಯೊಂದಕ್ಕೆ ಬಾಪೂ ಹೀಗೆ ಉತ್ತರವಿತ್ತರು :)

ತಂದೆತಾಯಿಗಳ ಒಳ್ಳೆಯತನಕ್ಕೆ ಸಾಕ್ಷಿ ಏನು? ಗರ್ಭಧಾರಣೆಯಾದಾಗ ಅವರ ಮಾನಸಿಕ ಸ್ಥಿತಿ ಹೇಗಿತ್ತೋ ಹೇಳಬಲ್ಲವರು ಯಾರು? ಆದುದರಿಂದ ಒಳ್ಳೆಯ ವೃಕ್ಷದ ಹಣ್ಣು ಯಾವಾಗಲೂ ಒಳ್ಳೆಯದಾಗಿರುತ್ತದೆಂದು ನಂಬುವುದೇ ಶ್ರೇಷ್ಠವಾದುದು. ಈ ನಿಯಮಕ್ಕೆ ಅಪವಾದ ಇರುವಂತೆ ಕಂಡುಬಂದರೂ ಅದು ನಮ್ಮ ಅಜ್ಞಾನದ ಪರಿಣಾಮವೇ.

ಪೂರ್ವಕರ್ಮದ ಪರಿಣಾಮ ಎಂಬ ಅರ್ಥದಲ್ಲಿ ದೈವಶಕ್ತಿ ಎಂದಿಗೂ ಇಲ್ಲವೆನಿಸದು.

ಕೆಟ್ಟವರೆಂದು ಹೆಸರಾದ ಸ್ತ್ರೀಯರನ್ನು ಉತ್ತಮಪಡಿಸಬೇಕಾದರೆ ಪುರುಷರು ಪಶುಸ್ವಭಾವಮುಕ್ತರಾಗಬೇಕು. ಎಲ್ಲಿಯ ತನಕ ಮಾನವ

ರೂಪದ ಪಶುಗಳಿರುವರೋ ಅಲ್ಲಿಯ ತನಕ ಸ್ತ್ರೀರೂಪದ ಪಶುಗಳು ಇದ್ದೇ ಇರಬೇಕು. ಇಂಥ ಸ್ತ್ರೀಯರು ತಮ್ಮ ದುಷ್ಟ ವೃತ್ತಿಯನ್ನು ಬಿಟ್ಟು ಹೊಸ ಪಥ ಹಿಡಿದರೆ ಗೌರವಾನ್ವಿತ ಪುರುಷರು ನಿಜವಾಗಿಯೂ ಅವರನ್ನು ವಿವಾಹ ಮಾಡಿಕೊಳ್ಳುವರು. ಒಮ್ಮೆ ಜಾರಿಣಿ, ಎಂದೆಂದಿಗೂ ಜಾರಿಣಿ— ಎಂಬ ಸಿದ್ಧಾಂತ ಸರಿಯಲ್ಲ.

## ಹೀರಾಲಾಲನಿಗೆ

ಆಗಸ್ಟ್ ೨೯, ೧೯೩೨

ನಾನು ಒಬ್ಬ ಮಂದಮತಿ ಎಂದು ಪರಿಗಣಿಸಿಕೊಂಡಿದೇನೆ. ಕೆಲವು ವಿಷಯಗಳನ್ನರಿತುಕೊಳ್ಳಲು ಇತರರಿಗೆ ಬೇಕಾಗುವ ಕಾಲಕ್ಕಿಂತ ನನಗೆ ಹೆಚ್ಚು ಕಾಲ ಬೇಕು. ಇದಕ್ಕೆ ನಾನು ಚಿಂತಿಸುವುದಿಲ್ಲ. ಮಾನವನ ಬುದ್ಧಿಯ ವಿಕಾಸಕ್ಕೆ ಒಂದು ಮಿತಿ ಇದೆ; ಆದರೆ ಹೃದಯದ ಗುಣಗಳ ಬೆಳವಣಿಗೆಗೆ ಪರಿಮಿತಿಯೇ ಇಲ್ಲ.

## ದಿಲೀಪನಿಗೆ

ಸೆಪ್ಟೆಂಬರ್ ೧, ೧೯೩೨

(ಮಥುರಾದಾಸರ ಮಗ ದಿಲೀಪನ ಉಪಾಧ್ಯಾಯರಿಗೆ ಪತ್ರವೊಂದನ್ನು ಬರೆಯುತ್ತಾ ಶಿಕ್ಷಣದ ವಿಷಯದಲ್ಲಿ ಹೀಗೆ ವ್ಯಕ್ತಪಡಿಸಿವಾರೆ :)

ಸ್ವರ–ವ್ಯಂಜನಗಳ ಸಂಯೋಗವನ್ನು ಕಲಿಸುವುದಕ್ಕೆ ಮುಂಚೆಯೇ ಬಾಯಿಪಾಠದಿಂದಲೇ ಹೆಚ್ಚಿನ ಸಾಮಾನ್ಯಜ್ಞಾನವನ್ನು ಎಂದರೆ—ಹುಟ್ಟಿದ ಊರು ಅಥವಾ ಗ್ರಾಮದಿಂದ ಆರಂಭಮಾಡಿ ಅನಂತರ ಪ್ರಾಂತ, ಜಗತ್ತು ಇವುಗಳಿಗೆ ಸಂಬಂಧಿಸಿದಂತೆ ಇತಿಹಾಸ ಮತ್ತು ಭೂವಿವರಣೆಯನ್ನೂ ಪ್ರಕೃತಿಪಾಠ ಎಂದರೆ—ಆಕಾಶ, ವೃಕ್ಷಗಳು, ಮತ್ತಿತರ ಸಸ್ಯಗಳ ವಿಷಯವನ್ನೂ ಬಾಯಿಲೆಕ್ಕ, ಜ್ಯಾಮಿತಿ ಮತ್ತು ಸಾಹಿತ್ಯ ಎಂದರೆ—ತಪ್ಪಿಲ್ಲದ ಉಚ್ಚಾರಣೆ, ವ್ಯಾಕರಣ, ಕಾವ್ಯ, ಸಂಸ್ಕೃತ ಶ್ಲೋಕಗಳು— ಇವನ್ನೆಲ್ಲ ಕಲಿಸಬೇಕೆಂಬುದು ನನ್ನ ಅಭಿಪ್ರಾಯ. ಇವುಗಳನ್ನೆಲ್ಲ ಕಲಿತುಕೊಳ್ಳಲು ಓದು ಬರೆಹ ಬಂದೇ ಇರಬೇಕೆಂಬ ಕಡ್ಡಾಯವಿಲ್ಲ. ಮಗು ಬರೆಯುವುದನ್ನು

ಕಲಿಯುವುದಕ್ಕೆ ಮುಂಚಿತವಾಗಿಯೇ ಓದುವ ಅಭ್ಯಾಸವನ್ನು ಹೊಂದಿರಬೇಕು. ಎಲ್ಲಕ್ಕಿಂತ ಕೊನೆ ಬರೆವಣಿಗೆಯಾಗಬೇಕು. ಲೆಕ್ಕಪತ್ರಗಳನ್ನಿಡುವುದನ್ನು ಬರೆಯುವುದಕ್ಕೆ ಮುಂಚೆ ಸರಳ ಮತ್ತು ವಕ್ರರೇಖೆಗಳನ್ನೂ ತ್ರಿಕೋಣಗಳನ್ನೂ ಬರೆಯುವುದನ್ನು ಕಲಿಸಬೇಕು. ಈ ಪದ್ಧತಿಯನ್ನು ಅನುಸರಿಸಿದರೆ ಮಗುವಿಗೆ ಎಷ್ಟೋ ತೊಂದರೆ ಕಡಮೆಯಾಗುತ್ತದೆ; ಉಪಾಧ್ಯಾಯರ ಬಾಯಿಪಾಠದಿಂದಲೇ ಅದು ಎಷ್ಟೋ ಜ್ಞಾನವನ್ನು ಸಂಪಾದಿಸಿರುತ್ತಲ್ಲದೆ, ಸುಂದರವಾದ ಅಕ್ಷರ ಬರೆವುದನ್ನೂ ಕಲಿಯಬಲ್ಲುದು. ಅಕ್ಷರಗಳನ್ನು ಕುರಿತು 'ದಾಸಬೋಧ' ಎಂಬ ಗ್ರಂಥದಲ್ಲಿ ಒಂದು ಪೂರ್ಣ ಅಧ್ಯಾಯವೇ ಉಲ್ಲೇಖಿತವಾಗಿದೆ. ಅದು ವ್ಯಾಸಂಗಕ್ಕೆ ಅರ್ಹವಾದುದು. ದಿಲೀಪನ ಹಸ್ತಾಕ್ಷರವನ್ನು ನೋಡಿ ಇದನ್ನೆಲ್ಲ ಬರೆಯಬೇಕೆನಿಸಿತು ನನಗೆ. ಇವುಗಳಲ್ಲಿ ನಿಮಗೆ ಯಾವುದು ಸೂಕ್ತವೆನಿಸುತ್ತದೆಯೋ ಅದನ್ನು ಅನುಸರಿಸಿ ಉಳಿದುದನ್ನು ಬಿಡಬಹುದು. ಅಯುಕ್ತ ಶಿಕ್ಷಣದ ಪರಿಣಾಮವಾದ ನನ್ನ ಈ ಕೆಟ್ಟ ಹಸ್ತಾಕ್ಷರವೇ ಈಗ ನಾನು ವಿವರಿಸಿರುವ ಕಾರ್ಯಕ್ರಮದ ಋಜುತ್ವಕ್ಕೆ ಸಾಕ್ಷಿಯಾಗಿದೆ.

## ಕಾರ್ಯಕರ್ತನೊಬ್ಬನಿಗೆ

ಸೆಪ್ಟೆಂಬರ್ ೨, ೧೯೩೨

(ಹೀರಾಲಾಲನಿಗೆ ಬರೆದಿದ್ದ ಒಂದು ಪತ್ರದ ಈ ಕೆಳಗಿನ ಅಭಿಪ್ರಾಯವನ್ನು ....ಅವರಿಗೆ ಈ ರೀತಿ ವಿಸ್ತಾರಮಾಡಿ ಬರೆದರು ಬಾಪೂ :)

ನನ್ನ ಬಾಳಿನಲ್ಲಿ ಬುದ್ಧಿಶಕ್ತಿಯ ಪಾತ್ರ ಗೌಣವೆಂದು ಧಾರಾಳವಾಗಿ ಹೇಳಬಹುದು. ನಾನು ಒಬ್ಬ ಮಂದಮತಿ ಎಂದು ಭಾವಿಸಿಕೊಂಡಿದೇನೆ. ಭಗವಂತನಲ್ಲಿ ಶ್ರದ್ಧೆಯಿರುವ ವ್ಯಕ್ತಿಗೆ ಎಷ್ಟು ಬುದ್ಧಿಶಕ್ತಿ ಆವಶ್ಯಕವೋ ಅಷ್ಟನ್ನು ಅವನು ದಯಪಾಲಿಸುತ್ತಾನೆಂಬುದಕ್ಕೆ ನನ್ನ ಜೀವನವೇ ಒಂದು ನಿದರ್ಶನ. ನಾನು ಹಿರಿಯರಲ್ಲಿಯೂ ಜ್ಞಾನಿಗಳಲ್ಲಿಯೂ ನಂಬಿಕೆಯನ್ನೂ ಗೌರವವನ್ನೂ ಸದಾ ಇಟ್ಟಿದೇನೆ. ಆದರೆ ನನ್ನ ಗಾಢನಂಬಿಕೆ ಸತ್ಯದಲ್ಲಿಯೇ; ಆದುದರಿಂದಲೇ ದುರ್ಗಮವಾದ ಪಥವೂ ನನಗೆ ಸುಲಭವೆನಿಸಿದೆ.

ಅತ್ಯಂತ ದುಷ್ಟ ಸ್ವಭಾವದ ಮನುಷ್ಯರನ್ನೂ ಯಶಸ್ವಿಯಾಗಿ ಎದುರಿಸಲು ದೇವರು ಶಕ್ತಿ ನೀಡುವನೆಂದು ನಂಬು. ಎಂದಿಗೂ ಅಂಜಬೇಡ. ಪರೀಕ್ಷಾಸಮಯ ಬಂದಾಗ ನಿನ್ನ ಸರ್ವಶಕ್ತಿಯನ್ನೂ ಪ್ರಯೋಗಿಸು. ಅದು ಹಿಂಸೆ ಎನಿಸಿಕೊಳ್ಳಲಾರದು. ಒಂದು ಇಲಿಮರಿ ಬೆಕ್ಕಿಗೆ ಹಿಂಸೆಯನ್ನು ಮಾಡಲಾರದು. ಆದರೆ ಅದು ಸಂಕಲ್ಪ ಮಾಡಿದರೆ ಬೆಕ್ಕು ಅದನ್ನು ಜೀವಸಹಿತವಾಗಿ ತಿನ್ನಲು ಸಾಧ್ಯವಿಲ್ಲದಂತೆ ಮಾಡಬಹುದು. ಹೀಗೆ ಬೆಕ್ಕಿನ ಉದ್ದೇಶವನ್ನು ವಿಫಲಗೊಳಿಸುವ ಇಲಿಮರಿ ಹಿಂಸೆಯನ್ನು ಎಸಗುವುದಿಲ್ಲ. ದುಷ್ಟ ಉದ್ದೇಶದ ವ್ಯಕ್ತಿಯೇ ಸ್ವಾಭಾವಿಕವಾಗಿ ಅಶಕ್ತನಾಗಿರುತ್ತಾನೆಂಬುದನ್ನು ನೆನಪಿಡು. ಪವಿತ್ರ ಸ್ತ್ರೀಯಿಂದ ಪ್ರಜ್ವಲಿಸುವ ಉಗ್ರ ತೇಜಸ್ಸಿನ ಮುಂದೆ ಅವನು ತಲ್ಲಣಿಸಿಯಾನು; ಆಕೆಯ ಕೂಗಿಗೆ ಭಯಪಟ್ಟು ಕಂಪಿಸಿಯಾನು.

## ಮತ್ತೊಬ್ಬರಿಗೆ

ಪ್ರತಿ ಹೆಜ್ಜೆಗೂ ಎಲ್ಲಿ ಅಪರಾಧವನ್ನು ಎಸಗಿಯೇನೋ ಎಂಬ ಭಯದಿಂದ ಯಾವ ವ್ಯಕ್ತಿಯನ್ನೂ ಪ್ರೀತಿಸಬೇಡ. ನಮ್ಮ ವರ್ತನೆಯಿಂದ ನಮ್ಮ ಗೆಳೆಯ ಎನ್ನಿಸಿಕೊಂಡವನು ಎಂದಿಗೂ ಅಪರಾಧವೆಣಿಸುವುದಿಲ್ಲ ಎಂಬ ವಿಷಯದಲ್ಲಿ ನಮಗೆ ಪೂರ್ಣ ವಿಶ್ವಾಸವಿರಬೇಕು. ಈ ವಿಶ್ವಾಸವಿಲ್ಲದಿದ್ದರೆ ನಾವು ಆತನಿಗೆ ಅನ್ಯಾಯವನ್ನೇ ಎಸಗಿಯೇವು.

## ಸತ್ಯವತಿ ಚಿದಂಬರ್* ಅವರಿಗೆ

ಸೆಪ್ಟೆಂಬರ್ ೪, ೧೯೩೨

ಪ್ರಿಯ ಭಗಿನೀ,

ನಿನ್ನ ಪತ್ರ ಬಂದಿದೆ. ಏಸು ಒಬ್ಬನಲ್ಲಿಯೇ ಸತ್ಯವಡಗಿದೆಯೆಂದು ನೀನೇಕೆ ಭಾವಿಸುತ್ತೀಯೆ. ಸಂಪ್ರದಾಯಸ್ಥ ಹಿಂದೂ ಏಸುವಿನ ಗುಡ್ಡದ ಮೇಲಿನ ಬೋಧೆಗಳನ್ನು ಅನುಸರಿಸಲು ಸಾಧ್ಯವಿಲ್ಲ ಎಂದು ನೀನೇಕೆ

---

* ಈಕೆ ಕ್ರಿಸ್ತಾನುಯಾಯಿ ಎಂದು ಕಾಣುತ್ತದೆ.

ಭಾವಿಸುವೆ? ಜೀಸಸ್ ಮತ್ತು ಅವನ ಬೋಧೆಗಳನ್ನು ನೀನು ಒಬ್ಬಳೇ ಅರಿತಿರುವೆಯೆಂದು ಖಚಿತವಾಗಿರುವೆಯಾ? ನಾನು ನಿನ್ನ ಉತ್ಸಾಹವನ್ನು ಮೆಚ್ಚಿದರೂ ನಿನ್ನ ವಿವೇಕವನ್ನು ಮೆಚ್ಚಲಾರೆ. ನಾಲ್ವತ್ತೈದು ವರ್ಷಗಳ ನನ್ನ ಪ್ರಾರ್ಥನೆ ಮತ್ತು ಧ್ಯಾನಗಳ ಅನುಭವ, ನಿನಗಿರುವಂಥ ಸೊಕ್ಕನ್ನು ಮಾತ್ರ ನನಗೆ ಕೊಟ್ಟಿಲ್ಲ — ಎಂದೆಂದಿಗಿಂತ ನಾನು ಹೆಚ್ಚು ವಿನೀತನೇ ಆಗಿದೇನೆ. ನನ್ನ ಪ್ರಾರ್ಥನೆಗೆ ಉತ್ತರ ಈ ರೀತಿ ಸ್ಪಷ್ಟವಾಗಿಯೂ ನಿಶ್ಚಿತವಾಗಿಯೂ ಇದೆ; ದೇವರು ಯಾವುದೋ ಒಂದು ಸುಭದ್ರ ಪೆಟ್ಟಿಗೆ ಯಲ್ಲಿ ಅವಿತುಕೊಂಡಿಲ್ಲ, ಅಂಥ ಪೆಟ್ಟಿಗೆಯ ಯಾವುದೋ ಸಣ್ಣ ರಂಧ್ರ ದಿಂದ ತನ್ನನ್ನು ವೀಕ್ಷಿಸಬೇಕೆಂದು ಅವನು ಬಯಸುವುದಿಲ್ಲ; ವಿನೀತರೂ ಪರಿಶುದ್ಧಹೃದಯರೂ ಆದ ಅನೇಕ ಕೋಟಿ ಕೋಟಿ ಹೃದಯಗಳಲ್ಲಿ ಅವನು ವೀಕ್ಷಣೆಗೆ ಲಭಿಸುತ್ತಾನೆ. ಯಾವ ಶಿಖರಾಗ್ರವನ್ನು ನೀನೊಬ್ಬಳೇ ಏರಿ ಅಲ್ಲಿ ನಿನ್ನ ಹೊರತು ಮತ್ತೊಬ್ಬರಿಗೆ ಸ್ಥಾನವಿಲ್ಲವೆಂದು ಕಲ್ಪಿಸಿ ಕೊಂಡಿದೀಯೋ ಆದರಿಂದ 'ಕೆಳಗಿಳಿದು ಬಾ' ಎಂದು ನಿನ್ನನ್ನು ಆಹ್ವಾನಿಸುತ್ತೇನೆ.

ಪ್ರೇಮ ಮತ್ತು ಪ್ರಾರ್ಥನೆಯೊಂದಿಗೆ.

ನಿನ್ನ ವಿಶ್ವಾಸಿ,
ಮೋ. ಕ. ಗಾಂಧೀ

## ....ಅವರಿಗೆ

ನಾನು ನಿನ್ನಂತೆ ಸೋಲಿನ ಮನೋವೃತ್ತಿಯವನಲ್ಲ. ಭಗವಂತನ ಕೃಪೆಯಿಂದ ಅತ್ಯಂತ ಕಠೋರಹೃದಯ ಉಳ್ಳವರನ್ನೂ ಪರಿವರ್ತನೆ ಗೊಳಿಸಬಲ್ಲೆನೆಂದು ನಂಬಿದೇನೆ; ಆ ಗುರಿಯ ಸಾಧನೆಗಾಗಿಯೇ ಸದಾ ಶ್ರಮಿಸುತ್ತಿದೇನೆ.

# ೬. ಮೀರಾ ಬೇನ್ ಅವರಿಗೆ

(ಬಾಪೂವಿನ ವಾತ್ಸಲ್ಯಭರಿತ ಹೃದಯ ಸಾಗರೋಪಮವಾದುದು ವ್ಯಾಪಕತೆಯಲ್ಲಿ; ಜಾತಿ, ಬಣ, ಬಣ್ಣಗಳ ವ್ಯತ್ಯಾಸಕ್ಕೆ ಎಡೆಕಾಣದುದು. ಅದಕ್ಕೆ ಶರಣು ಹೋದ ಪಾಶ್ಚಾತ್ಯರಲ್ಲಿ ಮೀರಾ ಬೇನ್ ಒಬ್ಬರು.

ಬ್ರಿಟಿಷ್ ಸಾಮ್ರಾಜ್ಯದ ನೌಕಾಧಿಪತಿಯಾಗಿದ್ದ ಸ್ಲೇಡ್ ಅವರ ಏಕಮಾತ್ರ ಪುತ್ರಿ, ಮ್ಯೇಡಿಲೇನ್ ಸ್ಲೇಡ್, ಮೀರಾ; ಪಾಶ್ಚಾತ್ಯ ದಿವ್ಯಗಾಯಕ ಬಿಥೋವನ್ನನ ಅಮರಗಾನಗಳಿಂದ ಆತ್ಮಜಾಗೃತಿಹೊಂದಿದವಳಾಗಿ, ಫ್ರಾನ್ಸಿನ ಜ್ಞಾನವಿಭೂತಿ ರೋಮೇ ರೋಲಾ ಅವರ ಬಳಿ ಶಿಷ್ಯವೃತ್ತಿ ಮಾಡಿ, ಕೊನೆಗೆ ಬಾಪೂ ಸಾನ್ನಿಧ್ಯದಲ್ಲಿ ತನ್ನ ಅಧ್ಯಾತ್ಮತೃಷೆಯನ್ನು ಹಿಂಗಿಸಿಕೊಳ್ಳಲು ಶ್ರಮಿಸಿದ ಆಕೆಯ ಜೀವನ ಒಂದು ಭವ್ಯಗೀತೆಯಂತಿದೆ. ಬಾಪೂ ಆಕೆಗೆ ಸರ್ವಶರಣ್ಯಶಕ್ತಿಯಂತಿದ್ದರು; ಆ ಶಕ್ತಿಯ ಅನವರತ ಸೇವೆಯೇ ಆಕೆಯ ಪರಮಪುರುಷಾರ್ಥವಾಗಿತ್ತು.

ಮೀರಾ ೧೯೨೫ರಲ್ಲಿ ಸಾಬರಮತಿ ಆಶ್ರಮವಾಸಿಯಾಗಿ ಬಾಪೂ ಪರಿವಾರ ಸೇರಿದರು. ಅಂದಿನಿಂದ ೧೯೪೮ರವರೆಗೂ ಆ ಪರಿವಾರದಲ್ಲಿ ಸೇವಾಜೀವನದ ಮೂರ್ತ ಸ್ವರೂಪವಾಗಿದ್ದರು. ಆಶ್ರಮದಲ್ಲಿರಲಿ ಹೊರಗಡೆ ಇರಲಿ, ಸೆರೆಮನೆಯಲ್ಲಿರಲಿ ಹೊರಗಡೆ ಇರಲಿ, ಎಲ್ಲೆಲ್ಲೂ ಬಾಪೂ ನಿಯುಕ್ತಮಾಡಿದ ಕಾರ್ಯವೇ ಅವರ ಜಪ–ತಪ–ಕಾರ್ಯ ಆಗಿತ್ತು. ಬಾಪೂ ಪಾರ್ಥಿವಶರೀರ ತ್ಯಜಿಸಿದಮೇಲೆ, ಹಿಮಾಚಲದ ಅನಿರ್ವಚನೀಯ ಕರೆಗೆ ಅವರು ಮಾರುಹೋದರು. ಅದರ ತಪ್ಪಲಿನಲ್ಲಿ 'ಪಶು-ಲೋಕ' ಎಂಬುದನ್ನು ಸ್ಥಾಪಿಸಿ, ಗೋಸೇವೆ ಮತ್ತು ಸಮಗ್ರ ಗ್ರಾಮಸೇವೆಗಳಲ್ಲಿ ನಿಮಗ್ನರಾದರು. ಅಲ್ಲಿನ ಜೀವನ ಅವರಿಗೆ ಆತ್ಮಸಂತೃಪ್ತಿ ನೀಡಿತೋ ಹೇಗೊ, ಬಾಪೂ ತೋರಿದ ಹಾದಿಯಲ್ಲಿ ಅವರ ತಪಸ್ಸಂತೂ ನಡೆದೇ ಇದೆ; ಈಗ ಅವರು ಭಾರತದಿಂದ ದೂರವಾಗಿ, ತಮ್ಮ ಜನ್ಮಭೂಮಿ ಇಂಗ್ಲೆಂಡಿನಲ್ಲಿಯೇ ಇದಾರೆ.

ಬಾಪೂ ಮೀರಾ ಅವರಿಗೆ, ಸಾಧನಾಪಥದಲ್ಲಿ ಸಾಗಿದ ಅವರ ಜೀವಕ್ಕೆ, ನೆರವಾಗಲೆಂದು ಬರೆದ ಕೆಲವಾರು ಪತ್ರಗಳನ್ನು ಇಲ್ಲಿ ಕೊಡಲಾಗಿದೆ.)

(ರೋಮೇ ರೋಲಾ ಬಾಪೂ ಕುರಿತು ಬರೆದ ಗ್ರಂಥವೊಂದನ್ನು ಓದಿ ಮ್ಯೆಡಿಲೀನ್ ಸ್ಲೇಡ್ (ಮೀರಾ)* ಅವರ ಹೃದಯವೀಣೆ ಮಿಡಿಯತೊಡಗಿತು ; ಭಾರತಕ್ಕೆ ಹೋಗಿ, ಬಾಪೂ ಸೇವೆಯನ್ನು, ಅವರು ಕೈಗೊಂಡ ಕಾರ್ಯವನ್ನು ಮಾಡುವುದರ ಮೂಲಕ ತಮ್ಮ ಆತ್ಮಸಂತೋಷವನ್ನು ಪಡೆಯಬೇಕು ಎಂಬ ಆಕೆಯ ಬಯಕೆ ಗರಿಗೂಡಿತ್ತು ; ವೇದ, ಉಪನಿಷತ್ತುಗಳು, ಭಗವದ್ಗೀತೆ, ಗಾಂಧೀಜೀ ಮತ್ತು ಠಾಕೂರರ ಬರೆಹ, ಉರ್ದು ಭಾಷೆ ಇವುಗಳನ್ನು ವ್ಯಾಸಂಗಮಾಡಲಾರಂಭಿಸಿದರು, ಸಾಬರಮತಿ ಆಶ್ರಮದ ನಿಯಮಗಳನ್ನು—ಆಹಾರ, ಪ್ರಾರ್ಥನೆ, ಸೂತ್ರಯಜ್ಞ—ಜೀವನದಲ್ಲಿ ಅನುಸರಿಸಲಾರಂಭಿಸಿದರು. ಹಿಂದೂ-ಮುಸ್ಲಿಂ ಐಕ್ಯಸಾಧನೆಗಾಗಿ ಬಾಪೂ ಕೈಗೊಂಡ ೨೧ ದಿನಗಳ ಉಪವಾಸದ ವಾರ್ತೆ ಆಕೆಯನ್ನು ಕ್ಲೇಶಭರಿತರನ್ನಾಗಿ ಮಾಡಿತು. ಉಪವಾಸ ಯಶಸ್ವಿಯಾಗಿ ಕೊನೆಗೊಂಡಿತು ಎಂಬ ಹರ್ಷದ ಸುದ್ದಿ ಕೇಳಿ, ತಮ್ಮ ವಂದನಾಪೂರ್ವಕವಾದ ಪತ್ರದ ಜೊತೆಗೆ ೨೦ ಪೌಂಡುಗಳ ಚೆಕ್ಕೊಂದನ್ನೂ (Cheque) ಬಾಪೂಗೆ ಕಳಿಸಿದರು. ಅದಕ್ಕೆ ಬಾಪೂ ಕೊಟ್ಟ ಉತ್ತರದಿಂದ ಈ ಪತ್ರಸಂಕಲನ ಆರಂಭವಾಗುತ್ತದೆ.)

ಪೋಸ್ಟ್ ಕಾರ್ಡ್ ರೈಲಿನಲ್ಲಿ

೩೧-೧೨-೧೯೨೪

ಪ್ರಿಯ ಬಂಧು,

ಇದಕ್ಕಿಂತ ಮುಂಚಿತವಾಗಿ ನಿಮಗೆ ಬರೆಯದಿದ್ದುದಕ್ಕೆ ನಿಮ್ಮ ಕ್ಷಮೆ ಕೇಳಬೇಕು ನಾನು. ನಾನು ಅವಿಚ್ಛಿನ್ನ ಪ್ರವಾಸದಮೇಲೆ ಇದ್ದೇನೆ. ನೀವು ಕಳಿಸಿದ ೨೦ ಪೌಂಡುಗಳಿಗಾಗಿ ನಿಮಗೆ ವಂದನೆ. ಈ ಹಣ ಚರಕಾವನ್ನು ಜನಪ್ರಿಯವನ್ನಾಗಿ ಮಾಡುವ ಕಾರ್ಯಕ್ಕೆ ಉಪಯೋಗಿಸಲಾಗುತ್ತದೆ.

ನಿಮ್ಮ ಮನಸ್ಸಿಗೆ ತತ್‌ಕ್ಷಣ ಬಂದ ಅಭಿಪ್ರಾಯಕ್ಕೆ ಮನ್ನಣೆಕೊಡದೆ, ಇಲ್ಲಿನ ಆಶ್ರಮಜೀವನಕ್ಕೆ ಹೊಂದಿಕೊಳ್ಳಲು ಸಿದ್ಧತೆ ಪಡೆದುಕೊಳ್ಳಬೇಕು ಎಂದು ನಿರ್ಧರಿಸಿದುದು ನನಗೆ ನಿಜವಾಗಿಯೂ ಹರ್ಷವೆನಿಸಿದೆ. ಒಂದು ವರ್ಷ ನಿಮ್ಮನ್ನು ನೀವು ಪರೀಕ್ಷಿಸಿಕೊಂಡಮೇಲೂ ಇಲ್ಲಿಗೆ ಬರಬೇಕೆಂಬ

* ಸಾಬರಮತಿ ಆಶ್ರಮವನ್ನು ಸೇರಿದಾಗ ಬಾಪೂ ಪ್ರೇಮದಿಂದ ಇಟ್ಟ ಹೆಸರು.

ಮಾನಸಿಕ ಒತ್ತಾಯ ನಿಮ್ಮಲ್ಲಿದ್ದರೆ, ನೀವು ಭಾರತಕ್ಕೆ ಬರುವುದು ಸರಿ ಎನಿಸೀತು.

ನಿಮ್ಮ ವಿಶ್ವಾಸಿ,

**ಮೋ. ಕ. ಗಾಂಧೀ**

ಮಿಸ್ ಮ್ಯೇಡಿಲೇನ್ ಸ್ಲೇಡ್
೬೩, ಬೆಡ್‌ಫರ್ಡ್ ಗಾರ್ಡನ್ಸ್
ಕ್ಯಾಂಪ್‌ಡೆನ್ ಹಿಲ್
ಲಂಡನ್, ಡಬ್ಲ್ಯೂ–೮

ಹೇಳಿ ಬರೆಸಿದುದು

೧೪೮, ರುಸ್ಸಾ ರಸ್ತೆ
ಕಲ್ಕತ್ತಾ
೨೪ ಜುಲೈ, ೧೯೨೫

ಪ್ರಿಯ ಬಂಧು,

ನಿಮ್ಮ ಪತ್ರ ತಲಪಿ ನನಗೆ ಹರ್ಷವಾಗಿದೆ. ಅದು ನನ್ನ ಮನಸ್ಸಿನ ಮೇಲೆ ತುಂಬ ಪರಿಣಾಮ ಮಾಡಿದೆ. ನೀವು ಕಳಿಸಿರುವ ಉಣ್ಣೆಯ ರಖಮು ಅತ್ಯಂತ ಸೊಗಸಾಗಿದೆ.

ನೀವು ಯಾವಾಗ ಬಂದರೂ ಸ್ವಾಗತವೆ. ನೀವು ಯಾವ ಜಹಜಿನಲ್ಲಿ ಬರುವಿರೆಂಬ ವಾರ್ತೆಯನ್ನು ತಿಳಿಸಿದರೆ, ಲಂಗರಿನಲ್ಲಿಯೇ ಯಾರಾದರೂ ನಿಮ್ಮನ್ನು ಭೇಟಿಮಾಡಿ, ಸಾಬರಮತಿಗೆ ಒಯ್ಯುವ ರೈಲಿನ ಮಾಹಿತಿ ಕೊಡುವರು. ಆಶ್ರಮದ ಜೀವನ ಸುಖಮಯವಲ್ಲವೆಂಬುದನ್ನು ಮಾತ್ರ ನೆನಪಿನಲ್ಲಿ ಇಟ್ಟುಕೊಳ್ಳಿ. ಅದು ಶ್ರಮಭರಿತವಾದುದು. ಪ್ರತಿಯೊಬ್ಬ ಆಶ್ರಮವಾಸಿಯೂ ಶಾರೀರಕ ಶ್ರಮ ಮಾಡಬೇಕು. ಈ ದೇಶದ ಹವಾಗುಣವೂ ಸಾಮಾನ್ಯ ವಿಷಯವೇನಲ್ಲ. ನಿಮ್ಮನ್ನು ಅಂಜಿಸಲು ನಾನು ಈ ವಿಷಯಗಳನ್ನು ತಿಳಿಸುತ್ತಿಲ್ಲ, ನಿಮಗೆ ಎಚ್ಚರಿಕೆ ನೀಡುವುದಕ್ಕೆ ಮಾತ್ರ.

ನಿಮ್ಮ ವಿಶ್ವಾಸಿ,

**ಮೋ. ಕ. ಗಾಂಧೀ**



ಪತಿ ಪಾದಸೇವಾ ನಿರತೆ—ಬಾ—ಸೇಗಾಂ. ೧೯೩೯

(ತೆಂಡುಲ್‌ಕರರ 'ಮಹಾತ್ಮಾ' ಗ್ರಂಥದಿಂದ)



ಆಜೀವ ಸಂಗಾತಿಗಳು—ಬಾಪೂ—ಬಾ—

(ಸುಮತೀ ಮೊರಾರ್ಜೀ ಸಂಗ್ರಹ)

ನನ್ನ ಬಲಗೈಗೆ ವಿಶ್ರಾಂತಿ ಬೇಕಾಗಿರುವುದರಿಂದ ಈ ಪತ್ರವನ್ನು ಹೇಳಿ ಬರೆಸುತ್ತಿದೇನೆ.

ಮಿಸ್ ಮ್ಯೇಡಿಲೇನ್ ಸ್ಲೇಡ್
೬೩, ಬೆಡ್‌ಫರ್ಡ್ ಗಾರ್ಡನ್ಸ್
ಕ್ಯಾಂಪ್‌ಡೆನ್ ಹಿಲ್
ಲಂಡನ್, ಡಬ್ಲ್ಯು–೮ (ಇಂಗ್ಲೆಂಡ್)

(೧೯೨೫ರ ಅಕ್ಟೋಬರ್ ೨೫ರಂದು ಯೂರೋಪಿನಿಂದ ಪ್ರಯಾಣ ಬೆಳೆಸಿ, ನವೆಂಬರ್ ೭ರ ಪ್ರಾತಃಕಾಲ ಸಾಬರಮತಿ ಆಶ್ರಮವನ್ನು ತಲಪಿದರು ಮ್ಯೇಡಿಲೇನ್ ಸ್ಲೇಡ್. ಬಾಪೂ ಆಕೆಯನ್ನು ತಮ್ಮ ಮಗಳೆಂದೇ ಸ್ವೀಕರಿಸಿದರು ; 'ಮೀರಾ' ಎಂಬ ಹೆಸರನ್ನಿಟ್ಟರು. ಹಲವಾರು ಕಾರ್ಯಗಳಲ್ಲಿ ಮಗ್ನರಾಗಿದ್ದ ಬಾಪೂ ಆಶ್ರಮ ದಿಂದ ಹೊರಕ್ಕೆ ಹೋದ ಕಾಲ ಮೀರಾಗೆ ಬಹಳ ತ್ರಾಸದಾಯಕ ಅಗಲಿಕೆಯಾಗು ತ್ತಿತ್ತು. ಈ ಕಾಲ ದೀರ್ಘವಾದರೆ, ಆಕೆಯ ಆರೋಗ್ಯವೂ ಕೆಡುತ್ತಿತ್ತು. ಒಂದು ಸಲ ಬಾಪೂ ಹೀಗೆ ಬರೆದರು :)

ಚಿ. ಮೀರಾ,

ನಮ್ಮ ಅಗಲಿಕೆ ನಿನಗೆ ವ್ಯಥೆಯೆಂದು ನನಗೆ ಗೊತ್ತು. ನೀನು ಇದನ್ನು ಗೆಲ್ಲಲೇಬೇಕು, ಏಕೆಂದರೆ ಇದು ಎಂದಿದ್ದರೂ ಗೆಲ್ಲಲೇಬೇಕಾದುದು. ಈ ಕೆಲವು ದಿನಗಳ ಅಗಲಿಕೆ ಸಾವು ತರುವ ದೀರ್ಘ ಅಗಲಿಕೆಗೆ ಸಿದ್ಧತೆ ಇದ್ದಂತೆ. ವಾಸ್ತವವಾಗಿ, ಅಗಲಿಕೆ ಎನ್ನುವುದು ಕೇವಲ ತೋರಿಕೆ ಮಾತ್ರ. ಸಾವು ನಮ್ಮನ್ನು ಅತ್ಯಂತ ಹತ್ತಿರಕ್ಕೆ ಒಯ್ಯುತ್ತದೆ. ದೇಹವೂ ಒಂದು ಬಂಧನವಲ್ಲವೆ ?

ಪ್ರೀತಿ,
ನಿನ್ನ,
**ಬಾಪೂ**

(ಸಾಬರಮತಿ ಆಶ್ರಮದಲ್ಲಿ ಒಂದು ವರ್ಷ ಕಳೆದಮೇಲೆ ಮೀರಾಳನ್ನು ದಿಲ್ಲಿಯ ದಾರಿಯಾಗಂಜ್‌ನಲ್ಲಿದ್ದ ಕನ್ಯಾಗುರುಕುಲಕ್ಕೆ ಹಿಂದೀ ವ್ಯಾಸಂಗಮಾಡಲು ಕಳಿಸಿದರು ಬಾಪೂ. ಮೀರಾ ಹಿಂದೀ ಕಲಿಯುವುದಲ್ಲದೆ ಅಲ್ಲಿನ ವಿದ್ಯಾರ್ಥಿನಿ

ಯರಿಗೆ ಹಂಜಿಮಾಡುವುದನ್ನೂ ನೂಲುವುದನ್ನೂ ಕಲಿಸಬೇಕಾಗಿತ್ತು. ಆ ಕಾಲದಲ್ಲಿ ಬರೆದ ಪತ್ರಗಳಲ್ಲಿ ಕೆಲವು ಇವು :)

ಚಿ. ಮೀರಾ,

ಒಂದೇ ದಿನ ನಿನ್ನ ಎರಡೂ ಕಾಗದಗಳು ನನ್ನ ಕೈಸೇರಿದವು. ನೀನು ಇಷ್ಟೊಂದು ವಿವರವಾಗಿ ಬರೆದುದು ನನಗೆ ಹರ್ಷ. ಈ ಅಭ್ಯಾಸವನ್ನು ಮುಂದುವರಿಸು. ನನ್ನ ಸಂಚಾರದ ಕಾಲದಲ್ಲಿ ನೀನು ನನ್ನೊಂದಿಗಿಲ್ಲದೆ ಇರುವುದು ನನಗೆ ತುಂಬ ಕೊರತೆ ಎನಿಸಿದೆ.

ಪ್ರೀತಿ,

**ಬಾಪೂ**

ವರ್ಧಾ
೯–೧೨–೧೯೨೬

ಶ್ರೀಮತಿ ಮೀರಾಬಾಯಿ
‘ ಕನ್ಯಾಗುರುಕುಲ ’
ದಾರಿಯಾಗಂಜ್, ಡಿಲ್ಲಿ

ವರ್ಧಾ
೧೧–೧೨–೧೯೨೬

ಚಿ. ಮೀರಾ,

ನಿನ್ನ ನಾಲ್ಕು ಪತ್ರಗಳು ತಲಪಿದವು. ಎರಡಕ್ಕೆ ಆಗಲೇ ಉತ್ತರ ಕೊಟ್ಟಿದೇನೆ.

‘ ಚಿ ’ ಎನ್ನುವುದರ ಅರ್ಥ ನಿನಗೆ ತಿಳಿದಿದೆಯೆಂದು ನಂಬಿದೇನೆ. ಅದು ‘ ಚಿರಂಜೀವಿ ’ ಎಂಬುದರ ಸಂಕ್ಷೇಪ ; ಅದರ ಅರ್ಥ ‘ ದೀರ್ಘಾಯು ’ ಎಂದು. ಕುಟುಂಬದ ಕಿರಿಯರಿಗೆ ಹಿರಿಯರು ಆಶೀರ್ವಾದಸೂಚಕವಾಗಿ ಉಪಯೋಗಿಸುವ ಶಬ್ದ ಅದು.

* * * *

ನಿನ್ನ ದಿನದ ಕರ್ತವ್ಯವನ್ನೆಲ್ಲ ನನಗೆ ತಿಳಿಸಬೇಕು ; ಪ್ರಾರ್ಥನೆ, ವ್ಯಾಸಂಗ, ಊಟ ಇವನ್ನೆಲ್ಲ ವಿವರಿಸಬೇಕು. ನಿನ್ನ ಆಹಾರ ಏನು ?

ಕಾಲಪ್ರವೃತ್ತಿ ಸರಿಯಾಗಿದೆಯೆ? ಎಷ್ಟು ಹಾಲನ್ನು ಸೇವಿಸುತ್ತೀಯೆ? ಯಾವ ಯಾವ ಕಾಲಕ್ಕೆ ಊಟ ಮಾಡುತ್ತೀಯೆ? ಅಲ್ಲಿ ಸೊಳ್ಳೆಗಳು ಇವೆಯೆ? ತಪ್ಪದೆ ಸಂಚಾರಮಾಡುತ್ತೀಯೆ ತಾನೆ? ಹಿಂದೀಯಲ್ಲಿ ಏನಾದರೂ ಬರೆಯುತ್ತೀಯಾ? ಅದನ್ನು ಯಾರಾದರೂ ನಿನಗೆ ಬೋಧಿಸುತ್ತಿದ್ದಾರೆಯೆ? ಯಾವ ಬಗೆ ಹಣ್ಣುಗಳು ನಿನಗೆ ದೊರಕುತ್ತಿವೆ?

ಪ್ರೀತಿ,

ಬಾಪೂ

ಚಿ. ಮೀರಾ,

ನಿನ್ನ ಆನಂದದಾಯಕ ಪತ್ರಗಳು ಬರುತ್ತಿವೆ. ಈಗ ಒಂದು ದೀರ್ಘ ಪತ್ರ ಬರೆಯಲಾರೆ. ರೋಲಾ* ಅವರಿಗೆ ಪತ್ರ ಬರೆದರೆ ಅದು ನಿನ್ನ ಮೂಲಕವೇ ಹೋಗುತ್ತದೆ....ನೀನು ದೀರ್ಘ ಸಂಚಾರಮಾಡು.

ಪ್ರೀತಿ,

೧೯-೧೨-೧೯೨೬ ಬಾಪೂ

(ಗೌಹಾತಿ ಕಾಂಗ್ರೆಸ್ ಅಧಿವೇಶನದಿಂದ ಬರೆದ ಪತ್ರವಿದು :)

೨೭-೧೨-೧೯೨೬

ಚಿ. ಮೀರಾ,

ನಿನ್ನ ಎಲ್ಲ ಪತ್ರಗಳೂ ತಲಪಿವೆ.

ನೀನು ಸರಿಯಾಗಿ ವರ್ತಿಸುತ್ತಿದೀಯೆ. ಎಲ್ಲವನ್ನೂ ಪರಿಶೀಲಿಸು. ಸಾಧ್ಯವಾದಷ್ಟು ತಿದ್ದಲು ಯತ್ನಿಸು. ಸಾಧ್ಯವಿಲ್ಲವೆನಿಸಿದಾಗ ಮೌನವಾಗಿರು. ನೀನು ಅಲ್ಲಿಗೆ ಶಿಕ್ಷಣಕ್ಕಾಗಿ ಹೋಗಿದೀಯೆ. ಹಿಂದೀ ಅಧ್ಯಯನವನ್ನು ಮುಗಿಸುವುದು ನಿನ್ನ ಕರ್ತವ್ಯ, ನೀನು ಬೋಧಿಸುವುದೂ, ಸುಧಾರಣೆಮಾಡುವುದೂ ಪ್ರಾಸಂಗಿಕ, ಅಷ್ಟೆ....ಈವರೆಗೂ ನೀನು ಮಾಡಿರುವುದನ್ನೆಲ್ಲ ಟೀಕಿಸುತ್ತಿದೇನೆಂದು ಭಾವಿಸಬೇಡ. ನೀನು ಸರಿಯಾಗಿ ವರ್ತಿಸುತ್ತಿದೀಯೆಂದು ಭರವಸೆ ನೀಡುತ್ತೇನೆ.

* ಫ್ರಾನ್ಸಿನ ಜ್ಞಾನಿ-ವಿದ್ವಾಂಸ, ರೋಮೇ ರೋಲಾ.

ವೆಚ್ಚಕ್ಕಾಗಿ ಕ್ಷಮೆ ಏಕೆ? ನಾವು ಮಿತವ್ಯಯದಿಂದ ಇರಬೇಕೆಂಬುದೇನೋ ನಿಜ; ಆದರೆ ಸೇವೆಮಾಡುವುದಕ್ಕೆ ನಮ್ಮಲ್ಲಿ ಸಾಕಷ್ಟು ಸಾಮರ್ಥ್ಯವಿರಲು ಆವಶ್ಯಕವಾದ ವಸ್ತುಗಳನ್ನು ನಾವು ತ್ಯಜಿಸಬೇಕಾಗಿಲ್ಲ. ನಿನಗೆ ಬೇಕಾದ ಹಣವನ್ನು ಶ್ರೀ ಗದೋದಯ ಕಳಿಸುತ್ತಾರೆ.

ಇಲ್ಲಿನ ದೃಶ್ಯ ಸುಂದರವಾಗಿದೆ. ನಮ್ಮ ಗುಡಿಸಲು ಬ್ರಹ್ಮಪುತ್ರಾ ನದಿಯ ದಂಡೆಯ ಮೇಲಿದೆ; ಜೌಗು, ಚಳಿ; ಗಾಳಿಯೂ ಹೆಚ್ಚು. ಚೆನ್ನಾಗಿ ವ್ಯಾಯಾಮ ಮಾಡುವವರಿಗೆ ಅತ್ಯಂತ ಹಿತವಾದ ವಾತಾವರಣವಿದೆ. ಕಾಂಗ್ರೆಸ್ ಅಧಿವೇಶನದ ಸ್ಥಳ ಇಲ್ಲಿಗೆ ಒಂದು ಮೈಲಿಗಿಂತ ದೂರವಿದೆ. ನಾನು ಅಲ್ಲಿಗೆ ಸಾಮಾನ್ಯವಾಗಿ ನಡೆದೇ ಹೋಗುತ್ತೇನೆ.

ಪ್ರೀತಿ,

**ಬಾಪೂ**

ಚಿ. ಮೀರಾ,

ನಿನ್ನ ಎರಡೂ ಪತ್ರಗಳು ತಲಪಿದವು. ನಿನ್ನ ಮನಃಸ್ಥಿತಿ ನನಗೆ ಅರಿವಾಗಿ, ಸಂತೋಷವಾಯಿತು. ಮಾನವರ ವರ್ತನೆ ಹೇಗಿದ್ದರೂ ನಾವು ಅವರನ್ನು ಪ್ರೀತಿಸಲೇಬೇಕು. ಆಶ್ರಮ ಸಾಬರಮತಿಯಲ್ಲಿಲ್ಲ, ನಿನ್ನಲ್ಲಿಯೇ ಇದೆ. ಅಲ್ಲಿಗೆ ಬರುವ ಅತ್ಯಂತ ಪಾಪಿಯೂ ಶುದ್ಧನಾಗಬೇಕು. 'ಆತ್ಮವತ್ ಸರ್ವಭೂತೇಷು' ಎನ್ನುವುದರ ಅರ್ಥ ಇದೇ. ಈ ಜಗತ್ತು ವಿಷಮತೆಯಿಂದ ಕೂಡಿದುದು; ಆದುದರಿಂದಲೇ ನೀರಿನಲ್ಲಿರುವ ತಾವರೆ ಎಲೆ ಅದಕ್ಕೆ ಅಂಟದೆ ಇರುವಂತೆ, ನಾವು ಅನಾಸಕ್ತಿಯಿಂದ ಇರಬೇಕು.

ಪ್ರೀತಿ,

**ಬಾಪೂ**

(ಈ ಪತ್ರದಿಂದ ಮೀರಾ ಮರೆಯಲಾಗದ ಪಾಠ ಕಲಿತರು. ಅವರೇ ಹೇಳಿರುವಂತೆ, 'ಈ ಪತ್ರ ಅನೇಕ ವರ್ಷಗಳಿಂದ ನನ್ನಲ್ಲಿದೆ, ಸದಾ ಮಾರ್ಗದರ್ಶನಮಾಡುವ ಬೆಳಕಾಗಿ.')

ಚಿ. ಮೀರಾ,

ಹಕೀಂಜೀ* ಅವರೊಂದಿಗೆ ನಿನ್ನ ಸಂಚಾರವನ್ನು ವಿವರಿಸಿರುವ ಪತ್ರ ನನಗೆ ತಲಪಿದೆ. ಬ್ರಜ್‌ಕೃಷ್ಣರವರೊಂದಿಗೆ ನೀನು ಸೇವಿಸಿದ ರುಚಿಕರ ಆಹಾರಕ್ಕಾಗಲೀ ಹಕೀಂಜೀಯವರು ಕೊಟ್ಟ ತಾಂಬೂಲವನ್ನು ಸ್ವೀಕರಿಸಿ ದುದಕ್ಕಾಗಲಿ ನನ್ನ ಆಕ್ಷೇಪವಿಲ್ಲ. ಹಕೀಂಜೀ ತಾಂಬೂಲದ ಆಸೆಯನ್ನು ನಿನ್ನಲ್ಲಿ ಹುಟ್ಟಿಸಿದುದಕ್ಕೆ ನನ್ನ ವ್ಯಥೆ. ಅದೊಂದು ಕೆಟ್ಟ ವಸ್ತು; ಆತ ಅದನ್ನು ನಿನಗೆ ಕೊಡಬಾರದಾಗಿತ್ತು. ಆದರೆ ಅದು ಅಭಿಪ್ರಾಯದ ಮಾತು. ಆತ ಅದು ಅಪಾಯಕಾರಿಯಲ್ಲವೆಂದು ಭಾವಿಸುತ್ತಾರೇನೋ. ಏನೇ ಆಗಲಿ, ಆ ಆಹಾರವನ್ನು ಸೇವಿಸಿದ್ದಕ್ಕಾಗಲಿ ತಾಂಬೂಲ ಸ್ವೀಕರಿಸಿದ್ದ ಕ್ಕಾಗಲಿ ನೀನು ಕೊಟ್ಟಿರುವ ಕಾರಣ ಸರಿಯಲ್ಲವೆಂದು ನನ್ನ ಅಭಿಪ್ರಾಯ. ಬೇಡವಾದ ಅಥವಾ ಅನಾವಶ್ಯಕವಾದ ವಸ್ತುವೊಂದನ್ನು ರುಚಿನೋಡುವು ದಾದರೂ ಏಕೆ? ಎಲ್ಲ ಬಗೆಯ ದುಷ್ಟ ಕಾರ್ಯಗಳನ್ನೂ ಸಮರ್ಥನೆ ಮಾಡಿಕೊಳ್ಳಲು ಕೊಡುವ ಕಾರಣ ಇದೇ ಎಂದು ನಿನಗೆ ಗೊತ್ತೆ? ಲಕ್ಷೋಪಲಕ್ಷ ಸಲ ಹೇಳಿದಂಥ 'ತಿನ್ನಬಾರದ ಹಣ್ಣಿನ ಕಥೆ'ಯಂತೆ (Forbidden Fruit)† ಇದು. ನಾನು ರುಚಿ ನೋಡಬಾರದೆಂದೂ ಮುಟ್ಟಬಾರದೆಂದೂ ಹೇಳಿರುವ ಹಣ್ಣನ್ನು ಏಕೆ ಅರಿಯಬಾರದು? ಇದೇ ಪ್ರಶ್ನೆ. ಇದಕ್ಕಾಗಿ ನೀನು ಚಿಂತಿಸಬೇಡ. ನಾನು ಕೊಡುವ ಕಾರಣ ನಿನಗೆ ಹಿಡಿಸಿದರೆ, ಅದು ಮುಂದಕ್ಕೆ ಎಚ್ಚರಿಕೆಯ ಪಾಠ. ಆದರೆ ಇದು ಆತ್ಮ ನಿಂದೆಯಲ್ಲಿ ಪರಿಣಾಮಗೊಳ್ಳಬಾರದು. ಅದಕ್ಕೆ ಕಾರಣವೇ ಇಲ್ಲ, ಪ್ರಸಂಗ ವೇನೋ ಸಣ್ಣದೆ. ಆದರೆ ಸಣ್ಣ ಪ್ರಸಂಗಗಳೇ ಪ್ರಮಾದಕ್ಕೆ ಕಾರಣ ವಾಗುತ್ತವೆ. ಆದುದರಿಂದಲೇ ಈ ಪಿತೃವಾತ್ಸಲ್ಯದ ಎಚ್ಚರಿಕೆ.

* * * *

---

* ಹಕೀಂ ಅಜಮಲ್‌ಖಾನ್, ಡಿಲ್ಲಿಯ ಸುಪ್ರಸಿದ್ಧ ವೈದ್ಯರಾಗಿದ್ದವರು.

† ಬೈಬಲಿನ ಒಂದು ಕಥೆ. ಸೈತಾನನ ದುಷ್ಟ ಪ್ರೇರಣೆಗೊಳಗಾದ ಈವ್ ಆದಂ ತಿನ್ನಬಾರದ ಹಣ್ಣನ್ನು ತಿನ್ನುವಂತೆ ಮಾಡಿದ ಪ್ರಥಮ ಪಾಪ, ಮಾನವಕುಲಕ್ಕೇ ಅಭಿಶಾಪವಾಗಿ ಪರಿಣಮಿಸಿತು.

ಚಲಿಸುತ್ತಿರುವ ರೈಲಿನಲ್ಲಿ ಇದನ್ನು ಬರೆಯುತ್ತಿದೇನೆ. ಇದು ನನ್ನ ಮೌನದ ಕಾಲ. ಅದು ರಾತ್ರಿ ಒಂಬತ್ತು ಘಂಟೆಗೆ ಮುಗಿಯುತ್ತದೆ.

ಪ್ರೀತಿ,

೧೦-೧-೧೯೨೭ ಬಾಪೂ

ನನ್ನ ಬ್ರಹ್ಮಲಿಪಿ ನಿನಗೆ ಅರ್ಥವಾಗುತ್ತಿದೆ ತಾನೆ?

ಚಿ. ಮೀರಾ,

ನಿನ್ನ ಎಲ್ಲ ಕಾಗದಗಳೂ ಸಕಾಲದಲ್ಲಿ ತಲಪಿದವು. ಅಂಚೆವ್ಯವಸ್ಥೆ ಬಹಳ ಚೆನ್ನಾಗಿದೆ. ನಾವು ಒಂದೇ ಸಮನಾಗಿ ಪ್ರವಾಸದಲ್ಲಿದ್ದರೂ ಯಾವುದೂ ಬರದೆ ತಪ್ಪಿಲ್ಲ.

ನಾವು ಇಂದು ರಾತ್ರಿ ಬಿಹಾರವನ್ನು ಬಿಡುತ್ತೇವೆ. ಇದು ನನಗೆ ವ್ಯಸನಜನಕವಿಲ್ಲದೆ ಇಲ್ಲ. ಬಿಹಾರವೆಂದರೆ ಅದರದೇ ಆದ ಆಕರ್ಷಣೆ ನನಗೆ.

ನನಗೆ ದೊರೆತಿರುವ ಕಾಲದಲ್ಲಿ ನಾನು ಬಹಳ ಬರೆಯಬೇಕಾಗಿರುವುದರಿಂದ ಈ ಪತ್ರವನ್ನು ಸಂಗ್ರಹವಾಗಿ ಬರೆಯಬೇಕು.

ನೀನು ಅಲ್ಲಿನ ಪ್ರಮುಖ ಗೆಳೆಯರನ್ನು ಜೊತೆ ಸೇರಿಸಿ ಅವರ ಮನಸ್ಸು ಗೊಂದಲಕ್ಕೀಡಾಗದಂತೆ ಈ ಕೆಳಗಿನ ಸಂಕಲ್ಪ ಮಾಡು ನೀನು ನಿನ್ನ ಭೋಜನವನ್ನು ದಿನಕ್ಕೆ ಮೂರು ಸಲಕ್ಕೆ ಪರಿಮಿತಿಗೊಳಿಸಿಕೊ; ಕೊನೆಯ ಭೋಜನ ಸಾಯಂಕಾಲ ಏಳು ಗಂಟೆ ಮುಗಿದಮೇಲೆ ಮಾಡಬೇಡ. ಭಕರಿಗೆ ತುಪ್ಪವನ್ನು ಹಚ್ಚಬೇಡ. ತರಕಾರಿ ಸಾಮಾನ್ಯವಾಗಿ ಬೆಂದಿರಲಿ; ಅದಕ್ಕೆ ಉಪ್ಪನ್ನು ಸೇರಿಸಿದರೆ ಸೇರಿಸು, ಇಲ್ಲದಿದ್ದರೆ ಬೇಡ. ಹಾಲಿಗೆ ಸಿಹಿ ಸೇರಿಸಬೇಡ. ಒಂದು ಸಲಕ್ಕೆ ಎರಡು ತರಕಾರಿಗಳ ಮೇಲೆ ಉಪಯೋಗಿಸಬೇಡ; ಒಂದು ಸಲಕ್ಕೆ ಮೂರು ಹಣ್ಣುಗಳ ಮೇಲೆ ಉಪಯೋಗಿಸಬೇಡ. ನಿಂಬೆಹಣ್ಣಿನ ಷರಬತ್ತು, ಜೇನುತುಪ್ಪ, ಸಕ್ಕರೆ, ಉಪ್ಪು, ಸೋಡ ಇವುಗಳಿಗೆ ಯಾವ ನಿರ್ಬಂಧವೂ ಇಲ್ಲ. ಸದ್ಯಕ್ಕೆ ಈ ಸಂಕಲ್ಪ ಮಾರ್ಚ್ ಇಪ್ಪತ್ತರವರೆಗೂ ಮುಂದುವರಿಯಲಿ. ಔಷಧದ

ರೂಪದಲ್ಲಿ ತೆಗೆದುಕೊಳ್ಳಬೇಕಾದ ಯಾವ ವಸ್ತುವನ್ನೂ ನಿಷೇಧಿಸ ಬೇಕಾಗಿಲ್ಲ. ಕಾಯಿಲೆ ಬೀಳಬಹುದಾದ ಪ್ರಸಂಗ ಬಂದಲ್ಲಿ ಇದೆಲ್ಲ ಬದಲಾವಣೆಹೊಂದಬಹುದು.

ಮೇಲೆ ಕಾಣಿಸಿದ ನಿಯಮನಿರ್ಬಂಧಗಳು ಎಲ್ಲಕ್ಕೂ ಸಾಕೆನಿಸು ತ್ತದೆ. ನಾವು ಪರಸ್ಪರ ಭೇಟಿಯಾದಾಗ ಈ ಕಾಲವನ್ನು ಹೆಚ್ಚಿಸಬೇಕಾದ ಆವಶ್ಯಕತೆಯಿದ್ದರೆ ಆಗ ಕುರಿತು ಚರ್ಚಿಸೋಣ.*

ನೀನು ಚುರುಕಾಗಿ ಕೆಲಸ ಮಾಡಲು ಸಾಧ್ಯವಿಲ್ಲವೆಂದು ಕಂಡುಬರು ವಷ್ಟು ಶರೀರವು ಸ್ಥೂಲವಾಗದಿದ್ದರೆ ಅದಕ್ಕಾಗಿ ಚಿಂತೆಗೆ ಒಳಗಾಗಬೇಕಾ ಗಿಲ್ಲ. ಅಂಥದು ಸಂಭವಿಸುವ ಅಪಾಯವೂ ಇಲ್ಲ. ಏನೇ ಆಗಲಿ ಈ ಸಂಕಲ್ಪ ಎಲ್ಲ ಅಪಾಯವನ್ನೂ ಪರಿಹರಿಸುತ್ತದೆ....ಒಪ್ಪಿಗೆ ಆಗದಿರುವ ಎಲ್ಲ ಬಗೆಯ ಟೀಕೆಯೂ ಸ್ವತಂತ್ರ ನಿರ್ಣಯಶಕ್ತಿ ಅಥವಾ ಅದರ ಅಭಿವ್ಯಕ್ತತೆಯನ್ನು ಮೊಟಕುಮಾಡುತ್ತದೆ. ಅದರಲ್ಲಿಯೂ ಈ ಟೀಕೆ ಪ್ರಿಯರಾದವರಿಂದ ಬಂದರೆ ಇನ್ನೂ ಹೆಚ್ಚು. ನೀನು ಸ್ವತಃ ತಪ್ಪನ್ನು ತಿದ್ದಿಕೊಂಡದ್ದು ನನಗೆ ಸಂತೋಷಕರ. ಇವುಗಳ ವಿಷಯದಲ್ಲಿ ನೀನು ಅನಗತ್ಯವಾಗಿ ಚಿಂತೆಗೊಳಗಾಗಬೇಡ. ತಾನಾಗಿಯೇ ತನ್ನ ತಪ್ಪನ್ನು ತಿದ್ದಿಕೊಳ್ಳುವುದು ಆನಂದ ಜನಿಸುವಂತಿರಬೇಕು.

ಸದ್ಯಕ್ಕೆ ಇನ್ನು ಹೆಚ್ಚು ಬರೆಯಲಾರೆ. ನಾನು ಮೂರು ಮೈಲಿ ದೂರದಲ್ಲಿರುವ ರೈಲ್ವೆ ನಿಲ್ದಾಣಕ್ಕೆ ಸಕಾಲದಲ್ಲಿ ತಲುಪಲು ಪಾದಚಾರಿ ಯಾಗಿ ಹೋಗಬೇಕಾಗಿದೆ.

ಪ್ರೀತಿ,

೩೧-೧-೨೭ ಬಾಪೂ

ಶ್ರೀಮತಿ ಮೀರಾಬಾಯಿ
' ಗುರುಕುಲ '
ಕಾಂಗ್ರೀ (ಬಿಜನೂರು ಜಿಲ್ಲೆ)

---

* ಆಹಾರದ ಈ ನಿಯಮವನ್ನು ಮುಂದುವರಿಸಿ ಒಂದು ವರ್ಷ ಪರ್ಯಂತ ನಡೆಸಲು ಬಾಪೂ ಅನುಮತಿ ಕೊಟ್ಟರು. ಆದರ ತರುವಾಯ ಸರಳ ಆಹಾರವು ನಿತ್ಯಪದ್ಧತಿಯಾಯಿತು.

(ಬಾಪೂ ಕಾಂಗ್ರೀ ಗುರುಕುಲಾಶ್ರಮದ ಘಟಿಕೋತ್ಸವಕ್ಕೆ ಹೋದರು. ಅಲ್ಲಿಯೇ ಕೆಲವು ದಿವಸಗಳು ಇದ್ದ ತರುವಾಯ ಮೀರಾಳನ್ನು ತಮ್ಮ ಜೊತೆಯಲ್ಲಿ ಕರೆದುಕೊಂಡು ಹೊರಟರು. ಆದರೆ ಮೀರಾ ಅವರನ್ನು ಪುನಃ ಅಗಲಬೇಕಾಯಿತು. ಆಕೆ ಹಿಂದೂಸ್ತಾನೀ ವ್ಯಾಸಂಗವನ್ನು ಮುಂದುವರಿಸುವ ಸಲುವಾಗಿ ರೇವಾರಿಯ 'ಭಗವದ್ಭಕ್ತಿ' ಆಶ್ರಮಕ್ಕೆ ಹೋಗಬೇಕಾಯಿತು. ಇದರಿಂದ ಇಬ್ಬರಿಗೂ ಪರಸ್ಪರ ಅಗಲಿಕೆ ಆಯಿತು.)

ರೈಲಿನಲ್ಲಿ
ಭರತಪುರ ಆದಮೇಲೆ
೨೨-೩-೧೯೨೭

ಚಿ. ಮೀರಾ,

ನಮ್ಮ ಅಗಲಿಕೆಯ ದಿನ ವ್ಯಸನಕರವಾಗಿತ್ತು. ನಾನೂ ನಿನಗೆ ನೋವನ್ನುಂಟುಮಾಡಿದೆ. ಆದರೆ ಅದು ಅನಿವಾರ್ಯವಾಗಿತ್ತು. ನೀನು ಪರಿಪೂರ್ಣ ಮಹಿಳೆ ಆಗಬೇಕೆಂಬುದೇ ನನ್ನ ಇಚ್ಛೆ. ನಿನ್ನ ಎಲ್ಲ ಓರೆ ಕೋರೆಗಳನ್ನು ನೀನು ತಿದ್ದಿಕೊಳ್ಳಬೇಕು. ಅನಾವಶ್ಯಕವಾದ ಎಲ್ಲ ಬಗೆಯ ಬಿಂಕ, ಬಿಗುಮಾನವೂ ಹೋಗಬೇಕು. ಆಶ್ರಮವೇನೋ ನಿನ್ನ ಕೇಂದ್ರ ವಾಸಸ್ಥಾನವೇ; ಆದರೆ ನೀನು ಎಲ್ಲಿದ್ದರೆ ಅದೇ ನಿನ್ನ ವಾಸಸ್ಥಾನವಾಗ ಬೇಕು. ನಾವು ಸಂಪರ್ಕಹೊಂದಿದ ಜನಕ್ಕೆ ತೊಂದರೆಯಾಗದ ರೀತಿಯಲ್ಲಿ ನಮಗೆ ಬೇಕಾದ ವಸ್ತುಗಳನ್ನು ಅವರಿಂದ ಪಡೆದುಕೊಳ್ಳಬೇಕು. ನಾವು ಎಲ್ಲರೊಂದಿಗೂ ಸಮರಸರಾಗಬೇಕು. ಅರಿತೋ ಅರಿಯದೆಯೋ ನಮಗೆ ಇತರರಿಂದ ಏನೂ ಬರದೆ ಹೋದರೆ ನಾವು ಏನನ್ನೂ ಕೊಡಲು ಸಾಧ್ಯ ವಾಗುವುದಿಲ್ಲವೆಂದು ನನಗೆ ಕಂಡುಬಂದಿದೆ. ನಮ್ಮೆಲ್ಲರಲ್ಲಿಯೂ ಒಂದು ಬಗೆಯ ಬಿಂಕ ಇರಬೇಕೆಂಬುದು ನನ್ನ ಇಚ್ಛೆ. ಆ ಬಿಂಕ ಇಚ್ಛಾಪೂರ್ವಕ ವಾದ ತ್ಯಾಗದ ಫಲವಾಗಿ ಇರಬೇಕೇ ಹೊರತು ಏನೋ ಒಂದು ಬಗೆಯ ಸೂಕ್ಷ್ಮ ವರ್ತನೆಯ ಫಲವಾಗಿರಬಾರದು. ನಿನ್ನದು ಯಾವುದೋ ಬಗೆಯ ಸೂಕ್ಷ್ಮ ವರ್ತನೆಯ ಫಲ. ಇದು ಹೋಗಬೇಕು. ಇದನ್ನು ಎಂದೋ ನಿನ್ನ ಗಮನಕ್ಕೆ ತರಲು ಯೋಚಿಸಿದ್ದೆ. ಆದರೆ ಸ್ವಲ್ಪ ತಾಳಿ ನೋಡಬೇಕು ಎನಿಸಿತು ನನಗೆ. ಹೇಗೇ ಆಗಲಿ, ಅದನ್ನು ತಿಳಿಸಿಯೇ ಆಯಿತು ಈಗ.

ನಿನ್ನ ಪುಕ್ಕಲತನವನ್ನು ಬಿಡು. ನೀನು ನನ್ನನ್ನೇ ಆಶ್ರಯಿಸಿರಬಾರದು. ನನ್ನ ದೇಹದಿಂದ ಪ್ರತ್ಯೇಕವಾದ ಆತ್ಮವು ಸದಾ ನಿನ್ನೊಡನೆ ಇರುತ್ತದೆ. ಈ ದೇಹ, ಎಲ್ಲ ಪರಿಮಿತಿಗಳಿಗೆ ಗುರಿಯಾಗಿ ಅದರ ಅಶಕ್ತತೆಯಿಂದ ಬಂಧಿತವಾಗಿ ಆತ್ಮದಿಂದ ಪ್ರತ್ಯೇಕವಾದುದು. ದೇಹದ ಸಂಬಂಧ ಇಲ್ಲದ ಆತ್ಮ ಪರಿಪೂರ್ಣವಾದುದು. ಅದನ್ನೇ ನಾವೆಲ್ಲ ಅರಸುವುದು. ನಾವು ಅನಾಸಕ್ತಿಯನ್ನು ಅಭ್ಯಸಿಸಿದರೆ ಇದು ಅನುಭವವೇದ್ಯವಾದೀತು. ಇದನ್ನು ಸಾಧಿಸಲು ನೀನು ಈಗ ಪ್ರಯತ್ನಿಸಬೇಕು.

ನಾನು ನಿನ್ನಂತೆ ಇದ್ದಿದ್ದರೆ ಇದೇ ರೀತಿ ಬೆಳೆಯುತ್ತಿದ್ದೆ. ಆದರೆ ನೀನು ನಿನ್ನ ಮಾರ್ಗದಲ್ಲಿಯೇ ಬೆಳೆಯಬೇಕು. ಆದುದರಿಂದ ನಿನ್ನ ಹೃದಯಕ್ಕಾಗಲೀ, ಬುದ್ಧಿಗಾಗಲೀ ಸರಿಯೆನಿಸದ ಎಲ್ಲವನ್ನೂ ನೀನು ತ್ಯಜಿಸಬಹುದು. ಎಂಥ ಪರಿಸ್ಥಿತಿಯಲ್ಲಿಯೂ ನಿನ್ನ ವ್ಯಕ್ತಿತ್ವವನ್ನು ಕಾಪಾಡಿಕೊಳ್ಳಲೇಬೇಕು. ನೀನು ನನ್ನನ್ನು ಪ್ರತಿಭಟಿಸಬೇಕಾದಾಗ ಹಿಂಜರಿಯಬೇಡ, ಏಕೆಂದರೆ ನಾನು ನಿನ್ನನ್ನು ಎಷ್ಟೇ ಪ್ರೀತಿಸಿದರೂ ನಿನ್ನನ್ನು ತಪ್ಪಾಗಿ ತಿಳಿದುಕೊಳ್ಳಲು ಸಾಧ್ಯ. ನಾನು ಎಂದಿಗೂ ತಪ್ಪು ಮಾಡದವನೆಂದು ನೀನು ತಿಳಿದುಕೊಳ್ಳಬಾರದೆಂದು ನನ್ನ ಇಚ್ಛೆ.

ಪ್ರೀತಿ,

ನಿನ್ನ,

**ಬಾಪೂ**

ಶ್ರೀಮತಿ ಮೀರಾಬಾಯಿ
'ಭಗವದ್ಭಕ್ತಿ' ಆಶ್ರಮ
ರಾಮಪುರ (ರೇವಾರಿ)

ಚಿ. ಮೀರಾ,

ನಿನ್ನ ಪತ್ರ ಮತ್ತು ತಾರು ತಲಪಿದವು. ನೀನು ವ್ಯಾಕುಲಕ್ಕೊಳಗಾಗಬಾರದು. ಎಂದಾದರೊಂದು ದಿನ ಈ ಆಘಾತ* ಬರಲೇಬೇಕಾಗಿತ್ತು.

---

* ಮೇಲಿನ ಕಾಗದ ಬಂದ ಐದು ದಿನಗಳ ಮೇಲೆ ಬಾಪೂ ರಕ್ತದ ಒತ್ತಡ ವ್ಯಾಧಿಗೆ ಗುರಿಯಾದರೆಂಬ ವಾರ್ತೆ ತಿಳಿಯಿತು ಮೀರಾಗೆ. ಅದೇ ಈ ಆಘಾತ.

ದೇಹದ ರೂಪದಲ್ಲಿ ನನ್ನನ್ನು ನೀನು ಮರೆಯಬೇಕು. ಅದು (ದೇಹ) ಎಂದೆಂದಿಗೂ ಇರಲಾರದು. ನೀನು ಕೈಗೊಂಡ ಕೆಲಸವನ್ನು ಮಾಡಬೇಕು. ನಾನು ಇನ್ನು ಹೆಚ್ಚಿಗೆ ಬರೆಯಬಾರದು. ನನ್ನ ವೈದ್ಯರಿಗೂ ನನ್ನ ಪರಿವಾರದವರಿಗೂ ಇದು ಅಪ್ರಿಯವೆನಿಸುತ್ತದೆ. ನನಗೆ ಎಷ್ಟು ವಿರಾಮ ಬೇಕೆನಿಸುತ್ತದೋ ಅಷ್ಟನ್ನೂ ನಾನು ತೆಗೆದುಕೊಳ್ಳುತ್ತಿದೇನೆ. ಆದರೆ ನನ್ನ ಶರೀರವನ್ನು ಅತಿಯಾಗಿ ಲಾಲನೆ ಮಾಡಲಾರೆ. ನೀನು ವ್ಯಥೆಗೊಳಗಾಗುವುದಿಲ್ಲವೆಂದು ನನಗೆ ಮಾತನ್ನು ಕೊಡಬೇಕು. ನಿನ್ನ ಕಾರ್ಯದಲ್ಲಿ ನಿಮಗ್ನಳಾಗು.

ಪ್ರೀತಿ,

ನಿನ್ನ,

೧-೪-೧೯೨೭

ಬಾಪೂ

ಶ್ರೀಮತಿ ಮೀರಾಬಾಯಿ
' ಭಗವದ್ಭಕ್ತಿ ' ಆಶ್ರಮ
ರೇವಾರಿ (ಬಿ.ಬಿ.ಸಿ.ಐ. ರೈಲ್ವೆ)

ಚಿ. ಮೀರಾ,

ನಿನ್ನ ನಾಲ್ಕು ಕಾಗದಗಳೂ ತಲಪಿದವು. ಅವುಗಳಲ್ಲಿ ಮೂರು ನಿನ್ನೆ ತಲಪಿದವು.

೧೯ರಂದು ಬೆಳಗಾವಿಯನ್ನು ನಾವು ಬಿಡುವಾಗ ಕಳಿಸಿದ ತಾರು ನಿನಗೆ ತಲಪಿರಬೇಕು.

ನಿನ್ನೆ ನಿನ್ನಿಂದ ಬಂದ ಒಂದು ಪತ್ರ ನೀನು ನಂದೀಗೆ ಬರಬೇಕೆಂದು ತತ್‌ಕ್ಷಣ ತಾರನ್ನು ಕಳಿಸುವಂತೆ ಪ್ರೇರೇಪಣೆ ಮಾಡಿತು. ಆದರೆ ನನ್ನನ್ನು ನಾನೇ ಹಿಡಿತಕ್ಕೆ ತಂದುಕೊಂಡೆ. ಇನ್ನೆರಡು ಪತ್ರಗಳು ಅಷ್ಟೇನು ನಿರುತ್ಸಾಹಕರವಾಗಿರಲಿಲ್ಲ. ಏನೇ ಆಗಲಿ, ನಮ್ಮ ಅಗಲಿಕೆ ನಿನಗೆ ಸಹಿಸಲಾರದಂತೆ ಕಂಡುಬಂದರೆ ನನ್ನಿಂದ ಉತ್ತರಕ್ಕಾಗಲೀ ಸಲಹೆಗಾಗಲೀ ಕಾಯದೆ ನೀನು ಬಂದುಬಿಡು. ನಿನ್ನ ಸುತ್ತ ಇರುವ ಜನರ ಪ್ರೀತಿ ನೀನು ಅವರೊಡನೆ ಇರಲು ಸಾಕಷ್ಟು ಶಕ್ತಿಯನ್ನು ಕೊಡಬಹುದು.

ನೀನು ವಿವರಿಸಿರುವ ಅವರ ಪ್ರೇಮ ಬಹಳ ಹೃದಯಸ್ಪರ್ಶಿಯಾಗಿದೆ. ಇಂಥದರಲ್ಲಿಯೂ ನಿನಗೆ ಶಾಂತಿಯಿಲ್ಲವಾದರೆ ವ್ಯಸನವೇ ಸರಿ. ಆದರೆ ಯಾರ ಸ್ವಭಾವವನ್ನೂ ಇದ್ದಕ್ಕಿದ್ದಂತೆ ಬದಲಾಯಿಸಲು ಸಾಧ್ಯವಿಲ್ಲ. ಅಲ್ಲಿ ನೀನು ಇರಲು ಮನಸ್ಸು ಒಗ್ಗದಿದ್ದರೆ, ಅದನ್ನು ಗೆಳೆಯರಿಗೆಲ್ಲ ಸ್ಪಷ್ಟವಾಗಿ ತಿಳಿಸಿ, ಯಾವ ಸಂಶಯವನ್ನೂ ಇಟ್ಟುಕೊಳ್ಳದೆ ಕೂಡಲೇ ಬಂದುಬಿಡು. ಯಾವ ಕಾರಣಕ್ಕೇ ಆಗಲಿ ಅಲ್ಲಿ ಸ್ನೇಹ ಭಂಗವಾಗಬಾರದು. ನಿನಗೆ ಅಸಾಧ್ಯವೆನಿಸುವ ಸ್ಥಿತಿಗೆ ಬರುವಂತೆ ನೀನು ವರ್ತಿಸಬಾರದು.

ಇಲ್ಲಿಗೆ ಬಂದು ಆರು ದಿವಸಗಳಾದವು. ನನಗಿನ್ನೂ ವಾತಾವರಣ ಹೊಂದಿಕೊಂಡಿಲ್ಲ. ಅಂಬೋಲಿಯಲ್ಲಿ ಇದ್ದಷ್ಟು ಶಕ್ತಿ ಕೂಡ ನನ್ನಲ್ಲಿಲ್ಲ. ನಂದೀಯಲ್ಲಿ ಉತ್ತಮವಾದೀತೆಂದು ವೈದ್ಯರು ಅಭಿಪ್ರಾಯಪಡುತ್ತಾರೆ. ರಕ್ತದ ಒತ್ತಡ ಇರುವವರೆಗೆ ಅದು ಆದರ್ಶ ಸ್ಥಳವೆಂದು ಅವರು ಹೇಳುತ್ತಾರೆ. ಯಾವ ಆತಂಕಕ್ಕೂ ವ್ಯಥೆಗೂ ಕಾರಣವಿಲ್ಲ.

ನೀನು ಆಚರಿಸಬೇಕಾಗಿದ್ದ ಎರಡು ಉಪವಾಸಗಳನ್ನು ಮರೆತುದಕ್ಕಾಗಿ ಆತಂಕಪಟ್ಟು ಅನಂತರ ಉಪವಾಸ ಮಾಡಿದುದು* ಒಳ್ಳೆಯದೇ ಆಯಿತು. ದೈಹಿಕವಾಗಿ ನರಗಳ ದೌರ್ಬಲ್ಯ ಇದ್ದ ಕಾಲದಲ್ಲಿಯೂ ಉಪವಾಸ ಮಾಡಿದರೆ ಅದರಿಂದ ಒಳ್ಳೆಯದಾಗುವುದರಲ್ಲಿ ಅನುಮಾನವೇ ಇಲ್ಲ. ನನ್ನ ಆರೋಗ್ಯ ಕೆಡುವುದಕ್ಕೆ ಮುಂಚೆ ನಾನೂ ಉಪವಾಸ ಮಾಡಿದ್ದರೆ ಅದರಿಂದ ಖಂಡಿತವಾಗಿಯೂ ಒಳ್ಳೆಯದಾಗುತ್ತಿತ್ತು. ಇದು ಕಾರ್ಯ ಮಿಂಚಿದಮೇಲೆ ಬಂದ ವಿವೇಕ. ನನ್ನ ದಡ್ಡತನದಿಂದ ಇತರರು ಪಾಠ ಕಲಿಯಬಹುದು. ಇದನ್ನು ನನ್ನ ದಡ್ಡತನವೆಂದು ಕರೆಯಲು ಕಾರಣ ನಾನಿದ್ದಂಥ ಪರಿಸ್ಥಿತಿಯಲ್ಲಿ ಉಪವಾಸ ಮಾಡಿದ್ದರೆ ಒಳ್ಳೆಯದಾಗುತ್ತಿದ್ದಿತೆಂದು ತಿಳಿದೂ ಆ ರೀತಿ ನಾನು ಮಾಡದಿದ್ದುದು. ಸೈತಾನ ಯಾವಾಗಲೂ ನಮ್ಮ ಬೆನ್ನಟ್ಟಿರುತ್ತಾನೆ. ನಮ್ಮ ದೌರ್ಬಲ್ಯ ಸ್ವಲ್ಪ ಸಿಕ್ಕರೂ

---

* ರಾಷ್ಟ್ರೀಯ ವಾರದಲ್ಲಿ ಎಂದರೆ ಏಪ್ರಿಲ್ ೬–೧೩ರ ವರೆಗೆ — ಮೊದಲನೆಯ ಮತ್ತು ಕೊನೆಯ ದಿವಸಗಳು ಮಾಡಬೇಕಾದ ಉಪವಾಸ ಮರೆತದ್ದು.

ಸಾಕು ಅವನು ನಮ್ಮನ್ನು ಪೂರ್ಣವಾಗಿ ಆವರಿಸಿಬಿಡುತ್ತಾನೆ; ನಾನು ಶಕ್ತಿಹೀನವೆಂದು ಕಂಡುಬಂದ ಸಮಯದಲ್ಲಿ ನನ್ನನ್ನು ಬಲೆಗೆ ಹಾಕಿಕೊಂಡ. ನೀನು ಉಪವಾಸ ಮಾಡಿದ ಬಗೆಗೆ ನನಗೇನೂ ವ್ಯಥೆಯಿಲ್ಲ. ಆದರೆ ಅದನ್ನು ಯಾವಾಗ ಹೇಗೆ ಮಾಡಬೇಕೆಂಬುದನ್ನು ಮಾತ್ರ ಅರಿತುಕೊಳ್ಳಬೇಕು.

ನೀನು ಅದ್ಭುತ ಶಕ್ತಿಯನ್ನು ಗಳಿಸಿಕೊಳ್ಳಬೇಕು. ಅದು ನಮ್ಮ ಕೆಲಸಕ್ಕೆ ಅಗತ್ಯ.

ದೇವರು ನಿನ್ನನ್ನು ರಕ್ಷಿಸಲಿ.

ನಂದೀಬೆಟ್ಟ (ಮೈಸೂರು) ಪ್ರೀತಿ,
೨೫-೪-೧೯೨೭ ಬಾಪೂ

ಶ್ರೀಮತಿ ಮೀರಾಬಾಯಿ
'ಭಗವದ್ಭಕ್ತಿ' ಆಶ್ರಮ
ರಾಮಪುರ (ರೇವಾರಿ)

ಚಿ. ಮೀರಾ,

ನಿನ್ನ ಸಂತಸಭರಿತ ಪತ್ರ ತಲುಪಿತು. ನೀನು ಬರೆದಿರುವ ಪ್ರತಿಯೊಂದು ಶಬ್ದದ ಅರ್ಥವನ್ನೂ ನೀನು ಸಾಧಿಸಿಕೊಳ್ಳುವೆಯಾದರೆ ನಿನ್ನ ಎಲ್ಲ ತೊಂದರೆಗಳೂ ನನ್ನ ಆತಂಕವೂ ಮುಕ್ತಾಯಗೊಂಡಂತೆ. ನಮ್ಮ ನಿಜವಾದ ಬದುಕೆಲ್ಲ ನಮ್ಮ ಕರ್ಮದಲ್ಲಿಯೇ ಇರುತ್ತದೆ. ನಮ್ಮ ದೇಹ ನಶ್ವರವಾದುದು. ಅದನ್ನು ತಾತ್ಕಾಲಿಕ ಸಾಧನವೆಂದು ಉಪಯೋಗಿಸಿಕೊಳ್ಳದೆ ಅವುಗಳ ಮೋಹಕ್ಕೆ ಬಿದ್ದರೆ ನಾವೂ ನಾಶವಾದಂತೆಯೇ.

ನಾನು ಪರೀಕ್ಷಿಸಿದಷ್ಟೂ, ವ್ಯಾಸಂಗಮಾಡಿದಷ್ಟೂ ಅಗಲಿಕೆ ಮತ್ತು ಸಾವಿಗಾಗಿ ವ್ಯಥೆಪಡುವುದು ಅತ್ಯಂತ ದೊಡ್ಡ ಭ್ರಮೆಯೆಂದು ನನಗೆ ನಂಬಿಕೆ ಬರುತ್ತಿದೆ. ಈ ಭ್ರಮೆಯನ್ನು ಅರಿತುಕೊಳ್ಳುವುದೇ ನಿಜವಾದ ಮುಕ್ತಿ. ಆತ್ಮನಿಗೆ ಸಾವೂ ಇಲ್ಲ, ಅಗಲಿಕೆಯೂ ಇಲ್ಲ. ಆತ್ಮನಿಗಾಗಿ ನಾವು ಗೆಳೆಯರನ್ನು ಪ್ರೀತಿಸಿದರೂ ಆ ಆತ್ಮನಿಗೆ ತಾತ್ಕಾಲಿಕ ಹೊದಿಕೆಯಾಗಿರುವ ಈ ಅನಿತ್ಯದೇಹ ನಾಶವಾದುದಕ್ಕೆ ನಾವು ದುಃಖಿಸುತ್ತೇವೆ.

ಇದು ಒಂದು ದುರಂತವೇ ಸರಿ. ಅಣುವಿನಲ್ಲಿಯೇ ಬ್ರಹ್ಮಾಂಡವನ್ನು ಕಾಣುವುದೇ ನಿಜ ಗೆಳೆತನ. ಈ ಸತ್ಯವನ್ನು* ನೀನು ತಾತ್ಕಾಲಿಕವಾಗಿ ಗ್ರಹಿಸಿದಂತೆ ಕಾಣುತ್ತದೆ. ಅದು ನಿನ್ನಲ್ಲಿ ಸ್ಥಾಯಿಯಾಗಿ ನಿಲ್ಲಲಿ.

೨೪–೭–೧೯೨೭

ಪ್ರೀತಿ,
ಬಾಪೂ

ಶ್ರೀಮತಿ ಮೀರಾಬಾಯಿ, ರೇವಾರಿ

ಚಿ. ಮೀರಾ,

ನಿನ್ನ ಇತ್ತೀಚಿನ ಪತ್ರದಲ್ಲಿ ಬಹಳ ಹರ್ಷ ಕಂಡುಬರುತ್ತಿದೆ. ಇದೇ ಮನೋಭಾವ ಬಹಳ ಕಾಲ ನಿಲ್ಲಲೆಂದು ಆಶಿಸುತ್ತೇನೆ. ನಿನಗೆ ಇವತ್ತು ಹಿಂದಿಯಲ್ಲಿ ಬರೆದ ಒಂದು ಕಾರ್ಡನ್ನು ರವಾನಿಸಿದೆ; ಆದರೆ ಅದು ಬಹಳ ಹೊತ್ತಾದಮೇಲೆ. ಈಗ ಬರೆಯುತ್ತಿರುವುದು ಅಂಚೆ ತಲಪಿದ ಮೇಲೆ, ದಿನದ ಅಂಚೆ ರವಾನೆ ಆದಮೇಲೆ. ಅಂಚೆಯು ರವಾನೆ ಆದ ತರುವಾಯವೇ ಇಲ್ಲಿ ಅಂಚೆ ತಲಪುವುದು.

ನಾನು ಆಹಾರದಲ್ಲಿ ಸ್ವಲ್ಪ ಬದಲಾವಣೆ ಮಾಡಿಕೊಂಡಿದೇನೆ. ಅದು ಇಲ್ಲಿಗೆ ಹತ್ತಿರದಲ್ಲಿ ವಾಸಿಸುವ ಪ್ರಸಿದ್ಧ ವೈದ್ಯರೊಬ್ಬರಿಂದ ಅಂಗೀಕೃತ ವಾಗಿದೆ. ಈಗ ನಾನು ಹಸಿ ಹಾಲನ್ನು ಸೇವಿಸುತ್ತೇನೆ. ಆಗಾಗ ಕೆಲವಾರು ತೊಟ್ಟು ಬೇವಿನ ಎಲೆಯ ರಸವನ್ನು ಅದಕ್ಕೆ ಬೆರಸುತ್ತೇನೆ. ಚಪಾತಿ ಮತ್ತು ತರಕಾರಿಗಳನ್ನು ತಾತ್ಕಾಲಿಕವಾಗಿ ಬಿಟ್ಟುಬಿಟ್ಟದೇನೆ. ಆವಶ್ಯಕ ಎನಿಸಿದಾಗ ಕೊನೆಯ ಎರಡನ್ನೂ ಉಪಯೋಗಿಸಲಾರಂಭಿಸುತ್ತೇನೆ. ರಕ್ತದ ಒತ್ತಡ ಕಂಡುಬಂದ ಕಾಲದಿಂದ ಈವರೆಗೆ ಈಗ ಸ್ವಲ್ಪ ಇಳಿಮುಖ ಕಾಣುತ್ತಿದೆ. ಒಟ್ಟನಲ್ಲಿ ನನಗೆ ಸ್ವಲ್ಪ ಉತ್ತಮವಾಗುತ್ತಿದೆಯೆಂದು ಭಾಸವಾಗುತ್ತಿದೆ.

ಪ್ರೀತಿ,

೨೮–೪–೧೯೨೭

ಬಾಪೂ

---

* ಇದನ್ನು ನಾನು ಬೌದ್ಧಿಕವಾಗಿ ಗ್ರಹಿಸಿದ್ದೆ. ಆದರೆ ನನ್ನ ಹೃದಯವೂ ಅದನ್ನು ಗ್ರಹಿಸಲು ಇನ್ನೂ ಎಷ್ಟೋ ವರ್ಷಗಳು ಬೇಕಾಯಿತು.

೨೯ರ ಪ್ರಾತಃಕಾಲ....

ನಿನ್ನ ಪತ್ರಗಳ ಪೈಕಿ ಒಂದರಲ್ಲಿ ನೀನು ಎತ್ತಿದ ಪ್ರಶ್ನೆಗೆ ನಾನು ಉತ್ತರ ಕೊಡಲು ಮರೆತಿದೇನೆಂದೆನಿಸುತ್ತದೆ. ದಿನದ ನಿನ್ನ ಕೊನೆಯ ಊಟ ಸಂಜೆ ಏಳು ಗಂಟೆಗೆ ಮುಂಚೆಯೋ, ಅಥವಾ ಸಂಜೆಯ ಮಬ್ಬಿನಲ್ಲೋ ಯಾವ ಪ್ರಕಾರ ನಿನ್ನ ಪ್ರತಿಜ್ಞೆ ಇದೆಯೋ ಆ ಪ್ರಕಾರ ನಡೆಯಬೇಕೆಂಬುದು ನಿನ್ನ ನಿಸ್ಸಂಶಯವಾದ ವಿವರಣೆ. ನಿನ್ನ ವಿವರಣೆ ಸರಿಯೆ. ಪ್ರತಿಜ್ಞೆಯ ವಿಷಯದಲ್ಲಿ ಅನುಸರಿಸುವ ಕ್ರಮ ಹೀಗೆ: ನಿನಗೇ ವಿವರಿಸಲು ಅನುಮಾನ ಕಂಡುಬಂದರೆ, ನಿನಗೆ ವಿರುದ್ಧವಾಗಿಯೇ ವಿವರಣೆಯನ್ನು ಕೊಡು ಎಂದರೆ, ನೀನಾಗಿಯೇ ಹೆಚ್ಚು ನಿರ್ಬಂಧವನ್ನು* ಹಾಕಿಕೋ.

ಬಾಪೂ

ನನ್ನ ಆರೋಗ್ಯದ ವಿಷಯದಲ್ಲಿ ಆತಂಕವನ್ನು ವ್ಯಕ್ತಪಡಿಸಿರುವ ಶ್ರೀಮತಿ ಸ್ಲೇಡ್† ಅವರಿಗೆ ನನ್ನ ಅಭಿವಂದನೆಗಳನ್ನು ತಿಳಿಸು.

ಶ್ರೀಮತಿ ಮೀರಾಬಾಯಿ
'ಭಗವದ್ಭಕ್ತಿ' ಆಶ್ರಮ
ರಾಮಪುರ (ರೇವಾರಿ)

ಚಿ. ಮೀರಾ,

ಈಚೆಗೆ ನಾನು ಬರೆಯುತ್ತಿರುವ ಕಾಗದಗಳೆಲ್ಲ ನಿನಗೆ ತಲಪುತ್ತಿವೆ ಎಂದು ನಂಬಿದೇನೆ. ಬಹುಶಃ ದಿನ ಬಿಟ್ಟು ದಿನಕ್ಕೆ ಸರಾಸರಿ ಒಂದು ಪತ್ರ.

ನಿನ್ನ ಇನ್ನೂ ಒಂದು ಕಾಗದ ಬಂದಿತು. ನೀನು ನಿನ್ನ ಚಿತ್ತಸ್ವಾಸ್ಥ್ಯವನ್ನು ಪುನಃ ಪಡೆದುಕೊಳ್ಳಲು ಸ್ವಲ್ಪ ಕಾಲ ಬೇಕಾಗುತ್ತದೆಂದು ನನಗೆ

---

* ಅನೇಕ ವರ್ಷಗಳಿಂದ ಇದು ನನಗೆ ಮಾರ್ಗದರ್ಶಕ ಬೆಳಕಾಗಿದೆ; ಉಪವಾಸ ಮಾಡುವ ಕಾಲದಲ್ಲಿ ಅಷ್ಟೇ ಅಲ್ಲ, ಎಲ್ಲೆಲ್ಲಿ ಸಂಶಯ ಎದ್ದು ಕಾಣುವುದೋ ಅಂಥ ವಿಷಯಗಳಲ್ಲಿಯೂ ಇದೇ ಅನ್ವಯಿಸುತ್ತದೆ.

† ಮೀರಾಬೇನಳ ತಾಯಿ.

ಕಂಡುಬರುತ್ತದೆ. ಅದರಲ್ಲಿ ಏರಿಳಿತವಿದ್ದರೂ ನಾನು ಚಿಂತಿಸೆ. ನನ್ನ ಸ್ವಂತ ಅಭಿಪ್ರಾಯವಿಷ್ಟು : ನಾನು ನಿನಗೆ ನೇಮಿಸಿದ ಕೆಲಸ ಯಾವಾಗ ಮುಗಿದರೂ ಆ ಕೂಡಲೇ ನೀನು ನನ್ನ ಬಳಿಗೆ ಬರುವುದು ಪೂರ್ಣವಾಗಿ ಸಹಜ. ಒಬ್ಬ ಸಾಮಾನ್ಯ ವ್ಯಕ್ತಿ ತನಗೆ ತಾನೇ ವಿಧಿಸಿಕೊಂಡಿರುವ ಕಾರ್ಯಕ್ರಮವನ್ನು ತ್ಯಜಿಸಲಾರ. ಆದರೆ ನೀನು ತುಂಬ ಭಾವಪರವಶ ಳಾದರೆ ಇಲ್ಲವೇ ನಿನಗೊಂದು ಆತಂಕದ ಸಂದಿಗ್ಧತೆ ಕಂಡುಬಂದರೆ ನಿನ್ನ ಕೆಲಸ ಮುಗಿಯದಿದ್ದರೂ ಖಂಡಿತವಾಗಿ ಬಂದುಬಿಡಬಹುದು. ನಿನ್ನ ತರಬೇತಿ ಮುಗಿಯಲೆಂದು ನಾನು ಸ್ವಾಭಾವಿಕವಾಗಿಯೇ ಕಾತುರನಾಗಿ ದೇನೆ. ಅದು ನಿನ್ನ ಶಕ್ತಿಗೆ ಮೀರಿದುದೆಂಬ ಭಾವನೆ ನಿನಗೆ ಬರಬಾರದು ಎಂಬುದು ನನ್ನ ಇಚ್ಛೆ. ನಿನ್ನ ವ್ಯಾಸಂಗ ಅಥವಾ ಬೇರೆ ಯಾವ ಸಿದ್ಧತೆ ಗಿಂತಲೂ ನಿನ್ನ ಆರೋಗ್ಯವೇ ಹೆಚ್ಚು ಬೆಲೆ ನನಗೆ.

ನನ್ನ ಆರೋಗ್ಯಕ್ಕೋಸ್ಕರವಾಗಿಯೇ ನನ್ನ ಬಳಿಗೆ ನೀನು ಬರುವ ಯೋಚನೆ ಮಾಡಬಾರದು. ಏಕೆಂದರೆ, ಅದು ಚೆನ್ನಾಗಿದೆ. ನೀನೇ ಬಂದರೂ ನನ್ನನ್ನು ಇದಕ್ಕಿಂತ ಚೆನ್ನಾಗಿ ನೋಡಿಕೊಳ್ಳಲು ಸಾಧ್ಯವಾಗದು. ನಿನ್ನಿಂದ ಶುಶ್ರೂಷೆಯನ್ನು ಅಪೇಕ್ಷಿಸುವುದಾದರೆ ತಾರನ್ನು ಕಳಿಸುತ್ತೇನೆ. ಆದರೆ ಯಾರಿಂದಲೇ ಆಗಲಿ ನಾನು ಶುಶ್ರೂಷೆ ತೆಗೆದುಕೊಳ್ಳುವ ಅಭ್ಯಾಸದಲ್ಲಿರು ವುದರಿಂದಲೂ ನನ್ನ ಅವಶ್ಯಕತೆಗೆ ತಕ್ಕಂತೆ ಹೊಸಬರನ್ನು ತಯಾರು ಮಾಡುವುದರಿಂದಲೂ ಅಂಥ ಸಂದರ್ಭ ಎಂದಿಗೂ ಒದಗದು. ಇಲ್ಲಿ ನನ್ನ ಶುಶ್ರೂಷೆ ಮಾಡಲು ನನಗೆ ಆವಶ್ಯಕವಾದ ಮಂದಿಗಿಂತಲೂ ಇಲ್ಲಿ ಹೆಚ್ಚು ಮಂದಿ ಇದಾರೆ. ಆದ್ದರಿಂದ ನೀನು ವೈಯಕ್ತಿಕ ಸೇವೆಯನ್ನು ಮಾಡುವ ನಿರೀಕ್ಷಣೆಯಿಂದ ಇಲ್ಲಿಗೆ ಬಂದರೆ ನಿನಗೆ ಸೋಮಾರಿತನವೂ ಬೇಸರಿಕೆಯೂ ಕಂಡುಬಂದೀತು.

ಈಗ ನನ್ನ ಸಾನ್ನಿಧ್ಯದ ವಿಷಯ. ಅದು ಮೊದಲು ಮೊದಲು ಆವಶ್ಯಕವೆಂದು ನನ್ನ ಅಭಿಪ್ರಾಯ. ಕ್ರಮೇಣ ಕಾರ್ಯದ ಮೂಲಕವೇ ಬರುತ್ತದೆ. ದಿನವೂ ನನ್ನ ಕಾರ್ಯವನ್ನು ನಿನ್ನದೆಂದೇ ಭಾವಿಸಿಕೊಂಡು ನಡೆದರೆ ನನ್ನ ಸಾನ್ನಿಧ್ಯವನ್ನು ನೀನು ಹೊಂದಿದಂತೆಯೆ. ಇದರಿಂದ ನನ್ನ ಭೌತಿಕ ದೇಹದ ಸಾನ್ನಿಧ್ಯದ ಆವಶ್ಯಕತೆಯನ್ನು ಬಿಡಲು ಸಾಧ್ಯ ; ಆ ರೀತಿ

ಬಿಡಲೇಬೇಕು. ಆಗ ನಾನು ಬದುಕಿದ್ದರೂ ಕಾಲವಾದರೂ ನನ್ನ ಸಾನ್ನಿಧ್ಯ ಹೊಂದಿದಂತೆ ಆಗುತ್ತದೆ. ನೀನು ಈ ರೀತಿ ಆಗಬೇಕೆಂಬುದೇ ನನ್ನ ಆಸೆ. ನೀನು ನನಗೋಸ್ಕರವಾಗಿ ನನ್ನಲ್ಲಿಗೆ ಬಂದಿಲ್ಲ, ಯಾವ ಆದರ್ಶಗಳನ್ನು ನಾನು ಜೀವನದಲ್ಲಿ ಅನುಷ್ಠಾನಕ್ಕೆ ತಂದಿರುವೆನೋ ಅವುಗಳಿಗಾಗಿ ಬಂದಿದೀಯೆ. ನನ್ನ ಮುಂದಿರುವ ಆ ಆದರ್ಶಗಳನ್ನು ನಾನು ಎಷ್ಟು ಪಾಲಿಸುತ್ತಿರುವೆನೋ ಅದನ್ನು ನೀನು ಬಲ್ಲೆ. ಆ ಆದರ್ಶಗಳನ್ನು ಎಷ್ಟು ಸಮಗ್ರವಾಗಿ ಸಾಧಿಸಲು ನನಗೆ ಸಾಧ್ಯವಾಗಿದೆಯೋ ಅದಕ್ಕಿಂತ ಹೆಚ್ಚು ಸಮಗ್ರವಾಗಿ ಸಾಧಿಸಲು ನೀನೀಗ ಶ್ರಮಿಸಬೇಕು. ಇದನ್ನು ಮಾಡುವವರು ಸ್ತ್ರೀಯೇ ಆಗಿರಲಿ ಪುರುಷನೇ ಆಗಿರಲಿ, ಅವರು ನನ್ನ ಪ್ರಥಮ ಪ್ರತಿನಿಧಿಯೂ ಮತ್ತು ಉತ್ತರವಾದಿಯೂ ಆದಾರು. ನೀನೇ ಆ ಪ್ರಥಮ ಸ್ಥಾನ ಪಡೆದುಕೊಳ್ಳ ಬೇಕೆಂದು ನನ್ನ ಆಸೆ; ಏಕೆಂದರೆ ನೀನು ನನ್ನನ್ನು ದೂರದಿಂದ ಅರಿತು ಕೊಂಡು ಅದರಂತೆ ನಡೆಯಲು ಇಚ್ಛೆಪಟ್ಟಿದೀಯೆ. ನಾವು ಕರ್ಮದಲ್ಲಿ ತೊಡಗಿರುವಾಗ ಪರಸ್ಪರ ದೈಹಿಕವಾಗಿ ಜೊತೆಗೂಡಿದರೆ ಒಳ್ಳೆಯದು. ಅದು ದೈವೇಚ್ಛೆ. ಒಂದೇ ಸಮಾನ ಉದ್ದೇಶಕ್ಕಾಗಿ ದೇವರು ನಮ್ಮನ್ನು ಅಗಲಿಸಿದ್ದರೂ ಅದೂ ಒಳ್ಳೆಯದೇ.

ಇದೆಲ್ಲಾ ಪರಿಪೂರ್ಣತೆಯ ಬಗೆಗೆ ವಾದವಾಯಿತು. ಇದನ್ನು ಕೇಳಿ ಅರ್ಥಮಾಡಿಕೊಂಡಮೇಲೂ ನಿನ್ನಿಷ್ಟದಂತೆ ಮಾಡಲು ನೀನು ಸ್ವತಂತ್ರಳು. ನೀನು ಇದ್ದಲ್ಲೇ ಇರಲು ಸಾಧ್ಯವಿಲ್ಲವಾದರೆ ನೀನು ಬಂದೇ ಬರಬೇಕು; ಇದರಿಂದ ನನಗೆ ಏನೋ ಅಸಂತೋಷವಾದೀತೆಂದು ನೀನು ಭಾವಿಸಬಾರದು. ನಿನಗೆ ನೀನೇ ಘಾತಮಾಡಿಕೊಂಡು ನಿಶ್ಯಕ್ತಳೆನಿಸಿದರೆ ಆಗ ನನಗದು ಅಸಂತೋಷವೇ ಅನಿಸುತ್ತದೆ.

ಭಾನುವಾರ
೮–೫–೧೯೨೭

ಪ್ರೀತಿ,
ಬಾಪೂ

ಶ್ರೀಮತಿ ಮೀರಾಬಾಯಿ
'ಭಗವದ್ಭಕ್ತಿ' ಆಶ್ರಮ
ರಾಮಪುರ (ರೇವಾರಿ)



ಮೀರಾ ಜೊತೆಯಲ್ಲಿ ಬೆಳಗಿನ ಸಂಚಾರ—ಡಿಸೆಂಬರ್ ೬, ೧೯೩೧ (ರೊಮೇ ರೋಲಾರವರ ವಿಲ್ಲೆ ವಿನ್ಯೂ ತೋಟದಲ್ಲಿ)

(ಸುಮತೀ ಮೊರಾರ್ಜೀ ಸಂಗ್ರಹ)



ಮಕ್ಕಳೊಂದಿಗೆ ಬಾಪೂ—ಮದರಾಸ್, ಜನವರಿ ೨೪, ೧೯೪೬

(ಸುಮತೀ ಮೊರಾರ್ಜೀ ಸಂಗ್ರಹ)

ಚಿ. ಮೀರಾ,

ಇನ್ನೊಮ್ಮೆ ನಿನ್ನ ಎರಡು ಪತ್ರಗಳೂ ನನಗೆ ಒಂದೇ ದಿನ ತಲಪಿದವು. ನೀನು ಅಲ್ಲಿ ನೆಲೆಸಿದಂತೆ ಕಂಡುಬರುತ್ತದೆ. ಆದರೂ ನೆಲೆಸಿಲ್ಲವೆಂಬ ಭಾವ ನಿನ್ನ ಮನಸ್ಸಿಗೆ ಬಂದರೆ ಅದನ್ನು ನನಗೆ ತಿಳಿಸಲು ನೀನು ಸಂಕೋಚ ಪಡಬಾರದು; ಏಕೆಂದರೆ ನಾನು ಸಮಾಧಾನಚಿತ್ತನಾಗಿರುವೆನೆಂಬುದನ್ನು ನೀನು ಅನುಭವದಿಂದ ಅರಿತುಕೊಂಡಿದೀಯೆ. ನೀನು ಯಾವುದನ್ನು ಅರಿತಿಲ್ಲವೋ ಅದನ್ನು ಅರಿತಿರುವಂತೆ ತೋರಿಕೆ ಮಾಡಬಾರದೆಂಬುದು ನನ್ನ ತೀವ್ರ ಚಿಂತನೆ. ನೀನು ಯಾವ ರೀತಿ ಇದೀಯೋ ಆ ರೀತಿಯೇ ನಾನು ಗ್ರಹಿಸಬೇಕು. ಇದರಿಂದಲೇ ನಿನ್ನ ಬೆಳವಣಿಗೆಗೆ ಸಹಾಯವೆಸಗ ಬೇಕು. ಯಾವ ವಿಷಯದಲ್ಲಿಯೂ ನಾನು ನಿನಗೆ ಹೆದರಿಕೆ ಹುಟ್ಟಿಸದಿದ್ದರೆ ಮಾತ್ರ ಅದು ಸಾಧ್ಯವಾದೀತು. ಆದುದರಿಂದಲೇ ಒಮ್ಮೆ ನಾನು ನಿನಗೆ ತಂದೆಯಷ್ಟೇ ಅಲ್ಲ, ತಾಯಿಯೂ ಆಗಬೇಕೆಂದು ಹೇಳಿದುದು.

* * * *

ನಾನು ಆರೋಗ್ಯವಾಗಿದೇನೆ.

ಪ್ರೀತಿ,

೧೨–೫–೧೯೨೭

ಬಾಪೂ

ಚಿ. ಮೀರಾ,

ನಿನ್ನ ಪತ್ರ.

* * * *

ನಾನು ಕ್ರಮೇಣ ಗುಣಹೊಂದುತ್ತಿದೇನೆ. ಈ ದಿನ ಬೆಂಗಳೂರಿನ ವೈದ್ಯರು ಬಂದಿದ್ದರು. ರಕ್ತದ ಒತ್ತಡ ೧೫೦ ಮಾತ್ರ ಇದೆಯೆಂದೂ ಒಟ್ಟಿನ ಸ್ಥಿತಿ ಚೆನ್ನಾಗಿದೆಯೆಂದೂ ಅವರು ಹೇಳಿದರು. ಈಗ ನಾನು ಹೆಚ್ಚಿನ ಪ್ರಮಾಣದಲ್ಲಿ ಆಹಾರ ತೆಗೆದುಕೊಳ್ಳಬೇಕೆನ್ನುತ್ತಾರೆ. ಏನು ಸಾಧ್ಯವೋ ನೋಡುತ್ತೇನೆ. ಬ್ರೆಡ್ಡು ಮತ್ತು ತರಕಾರಿ ಹೆಚ್ಚು ಗಡುಸಾಗಿ ಕಂಡುಬಂದಿದೆ. ಆದುದರಿಂದ ಅವುಗಳನ್ನು ಬಿಟ್ಟಿದೇನೆ. ಈಗ ಇನ್ನೊಂದು

ಪ್ರಯತ್ನವನ್ನು ಮಾಡಬೇಕು. ನಾನು ಉತ್ತಮವಾಗುತ್ತಿರುವುದರಲ್ಲಿ ಅನುಮಾನವಿಲ್ಲ.

ನೀನು ನಿನ್ನ ಕೆಲಸದಲ್ಲಿ ಮುಂದುವರಿಯುತ್ತಿರುವುದು ಕಂಡು ಬಂದಿದೆ. ಅಲ್ಲಿ ಎಷ್ಟು ಮಂದಿ ಮಹಿಳೆಯರೂ ಎಷ್ಟು ಮಂದಿ ಹುಡುಗಿಯರೂ ಇದಾರೆ? ಎಷ್ಟು ಜನ ಪುರುಷರು, ಎಷ್ಟು ಜನ ಬಾಲಕರು? ನಿನಗೆ ಸಾಧ್ಯವಾದಾಗ ಆಶ್ರಮ ಮತ್ತು ಅದರ ನಿವಾಸಿಗಳ ಸ್ಥೂಲ ಪರಿಚಯ ಮಾಡಿಕೊಡು.

ಈಚೆಗೆ ಸಾಬರಮತಿ ಆಶ್ರಮದಲ್ಲಿ ಕಳ್ಳರ ಕಾಟ ಎಂದು ಕೇಳಿರುವೆಯೋ ಹೇಗೋ? ಒಂದು ಸಲ ನಮ್ಮ ಕಾವಲುಗಾರ ಅವರೊಡನೆ ಹೋರಾಡುತ್ತಾ ಬಹಳ ಪೆಟ್ಟು ತಿಂದ. ಅದು ನಮ್ಮ ಕರ್ತವ್ಯದೃಷ್ಟಿಯನ್ನು ಎಚ್ಚರಗೊಳಿಸಿತು. ಸಾರ್ವತ್ರಿಕ ಅಡಿಗೆಮನೆ ಎಷ್ಟು ಮುಖ್ಯವೋ ಈ ಕಾವಲಿನ ಕೆಲಸವೂ ಅಷ್ಟೇ ಮುಖ್ಯವೆಂದು ನಾನು ಭಾವಿಸಿದೆ. ಆದುದರಿಂದ ನಾವೇ ಕಾವಲುಗಾರರೂ, ಕಾವಲುಗಾರ್ತಿಯರೂ ಆಗಬೇಕೆಂದು ಸಲಹೆ ಮಾಡಿದೆ. ಕಳ್ಳರು ಆಶ್ರಮಕ್ಕೆ ಬಂದರೆ ಅವರನ್ನು ಹೊಡೆದು ಅಟ್ಟುವ ಬದಲು, ನಮಗೇ ಏಟು ಬೀಳುವ ಸಂದರ್ಭ ಬಂದರೂ ಧೈರ್ಯದಿಂದ ಎದುರಿಸಿ ಅವರನ್ನು ತಪ್ಪುಮಾರ್ಗದಿಂದ ಬಿಡಿಸಬೇಕೆಂದು ಸೂಚನೆ ಮಾಡಿದೆ. ಇದು ಆಚರಣೆಗೆ ಬಂದಿದೆ. ನಾವೀಗ ಮೂವತ್ತು ಮಂದಿ—ಹೆಂಗಸರೂ ಸೇರಿ—ಸ್ವಯಂಸೇವಕರಾಗಿದೇವೆ. ಇದು ಒಳ್ಳೆಯ ಆರಂಭ.

ಸಾರ್ವತ್ರಿಕ ಅಡಿಗೆಮನೆ ಉತ್ತಮವಾಗುತ್ತಿದೆ. ಶಂಕರನ್ ಒಳ್ಳೆ ನಾಯಕನೂ ಸೇವಕನೂ ಆಗಿದ್ದಾನೆ. ಇಪ್ಪತ್ತು ಮಂದಿ ಭೋಜನ ಮಾಡುವವರಿದ್ದಾರೆ. ನೀನು ಹಿಂದಿರುಗಿ ಬಂದಾಗ ಇವನ್ನೆಲ್ಲ ಕಂಡು ನಿನ್ನ ಹೃದಯ ಹಿಗ್ಗುತ್ತದೆ.

ಪ್ರೀತಿ,

ನಿನ್ನ,

ಬಾಪೂ

ನಂದೀಬೆಟ್ಟ
೧೬–೫–೧೯೨೭

ನಂದೀಬೆಟ್ಟ
೨೮–೫–೧೯೨೭

ಚಿ. ಮೀರಾ,

ನಿನ್ನ ಎರಡು ಪತ್ರಗಳೂ ತಾರೂ ತಲಪಿದವು. ಉತ್ತರ ಬರೆಯಲು ಎರಡು ದಿವಸಗಳ ವಿಲಂಬ ಮಾಡದಿರಬೇಕೆಂದು ಇದನ್ನು ಹೇಳಿ ಬರೆಸುತ್ತಿದೇನೆ. ಮೌನವನ್ನು ಆಚರಿಸುತ್ತಿರುವ ಕಾಲವನ್ನು ಮಾತ್ರ ಬಿಟ್ಟು ಮಿಕ್ಕ ಕಾಲದಲ್ಲಿ ನಾನೇ ಪತ್ರ ಬರೆಯಬೇಕೆಂಬ ನಿಯಮವನ್ನು ಸಾಧ್ಯವಾದಷ್ಟು ಮುರಿಯದಿರಲು ಅಪೇಕ್ಷಿಸುತ್ತೇನೆ. ನಿನ್ನ ಎರಡು ಪತ್ರಗಳೂ ಬೆಲೆಯುಳ್ಳವು. ಹಿಂದೆ ನಾನು ಅರಿತಿದ್ದುದಕ್ಕಿಂತಲೂ ಈಗ ಆಶ್ರಮ ಚೆನ್ನಾಗಿ ಅರಿವಾಗಿದೆ. ನಾನೇ ಅಲ್ಲಿಗೆ ಹೋಗಿ ನೋಡಿದಷ್ಟರಮಟ್ಟಿಗೆ ಇದೆ. ನಿನ್ನ ವಿವರಣೆ ಅಷ್ಟೊಂದು ವೈಶಿಷ್ಟ್ಯದಿಂದ ಕೂಡಿದೆ. ಅದು ವಾಲುಂಜೀಕರರ ಪತ್ರದ ಅಭಿಪ್ರಾಯವನ್ನು ಪೋಷಿಸುತ್ತದೆ.

* * * *

ಎಲ್ಲಕ್ಕಿಂತ ಪ್ರಥಮ ಹಿಂದೀ — ಇದು ನಮ್ಮ ಸೂತ್ರ — ನೀನು ಎಲ್ಲಿಯೇ ಇರು, ನೀನು ಮಾಡಬಹುದಾದ ಉಪಯುಕ್ತ ಕೆಲಸಗಳು ಅಸಂಖ್ಯಾತವಾಗಿವೆ. ಸಾಮಾನ್ಯವಾಗಿ ಎಲ್ಲವೂ ಸ್ವಲ್ಪ ಹೆಚ್ಚುಕಡಮೆ ಸರಿಯೆಂದು ಕಂಡುಬರುವ ಕೆಲಸಗಳಲ್ಲಿ ಅತ್ಯಂತ ಸರಿ ಯಾವುದೆಂದು ಕಂಡುಹಿಡಿಯುವುದರಲ್ಲಿಯೇ ನಿಜ ಧಾರ್ಮಿಕ ಪ್ರವೃತ್ತಿ ಇದೆ. ಭಗವದ್ಗೀತೆಯ ಒಂದು ಶ್ಲೋಕ ಹೀಗೆ ಹೇಳುತ್ತದೆ: 'ಸ್ವಧರ್ಮ ಎಷ್ಟೇ ನೀಚವಾಗಿದ್ದರೂ ಅದನ್ನು ಮಾಡುತ್ತ ಸಾಯುವುದು, ಶ್ರೇಷ್ಠವಾದ ಪರಧರ್ಮವನ್ನು ಮಾಡುವುದಕ್ಕಿಂತ ಮೇಲು.' ಆದುದರಿಂದ ಯಾವದೇ ಕಾರಣಕ್ಕೆ ನೀನು ಸಾಬರಮತಿಯನ್ನು ತ್ಯಜಿಸಿ ಅಥವಾ ಮರೆತಿದ್ದರೂ, ನೀನು ಸುಲಭವಾಗಿ ಮಾಡಿ ತೇರ್ಗಡೆಹೊಂದಬಹುದಾದಂಥ ಅನೇಕ ಕೆಲಸಗಳಿವೆಯೆಂಬ ವಿಷಯದಲ್ಲಿ ನನಗೆ ಸಂಶಯವೆನ್ನುವುದೇ ಇಲ್ಲ. ಯಾವುದೇ ಒಂದು ವಿಷಯವನ್ನು ನೀನು ಒತ್ತಾಯಪೂರ್ವಕವಾಗಿ ಬಯಸಿ, ಅದಕ್ಕೆ ನೀನು ಅನಪೇಕ್ಷಿತ ವ್ಯಕ್ತಿಯೆಂಬಂತೆ ಕಂಡುಬಂದರೆ ಅದನ್ನು ನೀನು ತ್ಯಜಿಸುವುದಕ್ಕೆ ಸಾಕಷ್ಟು ಕಾರಣವೇ ಸರಿ. ಆ ವಿಷಯ ನಿನಗೆ ಅತ್ಯಗತ್ಯ

ಎನಿಸಿದರೆ ನೀನು ಬೇರೆ ಯಾವ ಸೂಚನೆಗೂ ಗಮನ ಕೊಡಬೇಕಾಗಿಲ್ಲ. ಆದರೆ ಅದು ಮಾತ್ರ ಎಲ್ಲವನ್ನೂ ಪ್ರಭಾವಗೊಳಿಸುವ ಆಂತರಿಕ ಇಚ್ಛೆಯಾಗಿರಬೇಕು. ನಾನು ಬಲವಂತ ಮಾಡಬಾರದು, ಬಲವಂತ ಮಾಡುವುದೂ ಇಲ್ಲ. ಎಷ್ಟೇ ನಿಧಾನವಾಗಿ ನೀನು ಪ್ರಗತಿಹೊಂದಿದರೂ ನಾನು ಚಿಂತೆಪಡುವುದಿಲ್ಲ; ನಾನು ಪೂರ್ಣ ತೃಪ್ತನಾಗಿರುತ್ತೇನೆ. ನೀನು ಅಪೇಕ್ಷಿಸುವ ರೀತಿಯಲ್ಲಿ ಹಿಂದೀಯನ್ನು ಕಲಿ. ನಿನ್ನ ಮನಸ್ಸಿಗೆ ಶಾಂತಿ ಬರುವ ಸಲುವಾಗಿ ಹಿಂದೀಯ ಜೊತೆಗೆ ಬೇರೆ ಯಾವ ಕಾರ್ಯವನ್ನು ಮಾಡಿದರೂ ಮಾಡು. ಆದುದರಿಂದ ಸುಮ್ಮನೆ ನನಗೆ ಯಾವುದು ಇಷ್ಟ ಎಂಬುದನ್ನು ಕುರಿತು ಯೋಚಿಸಬೇಡ. ನಿನ್ನ ಆರೋಗ್ಯಕ್ಕೆ — ದೇಹ ಮತ್ತು ಮನಸ್ಸುಗಳ—ಧಕ್ಕೆ ಬರವ ರೀತಿಯಲ್ಲಿ ಯಾವುದನ್ನು ಸುಲಭವಾಗಿ ಮಾಡಿದರೂ ಸರಿಯೆ; ಇದನ್ನು ಮಾಡುವಾಗ ನನ್ನ ನೆರವು ಅಥವಾ ಬುದ್ಧಿವಾದವನ್ನು ಅಪೇಕ್ಷಿಸಿದರೆ ಅವನ್ನು ತತ್ಕ್ಷಣ ಹೊಂದಬಹುದು.

ಪ್ರೀತಿ,
ನಿನ್ನ,
**ಬಾಪೂ**

(ಮೀರಾ 'ಭಗವದ್ಭಕ್ತಿ' ಆಶ್ರಮವನ್ನು ಬಿಟ್ಟು, ವರ್ಧಾದ ವಿನೋಬಾ ಆಶ್ರಮಕ್ಕೆ ಹೋಗಿ ಅಲ್ಲಿ ಹಿಂದೀ ವ್ಯಾಸಂಗವನ್ನು ಮುಂದುವರಿಸುವ ಮುನ್ನ ಸ್ವಲ್ಪ ಕಾಲ ಸಾಬರಮತಿಯಲ್ಲಿ ಇದ್ದಾಗ ಬರೆದ ಪತ್ರಗಳಲ್ಲಿ ಕೆಲವು ಈ ಕೆಳಗಿನವು :)

ಈ ಕೊನೆಯ ಮಾತುಗಳನ್ನು ನೆನಪಿಸಲ್ಲಿಡು. ಎರಡು ತಿಂಗಳಲ್ಲಿ ಹಿಂದೀಯನ್ನು ಕಲಿತು ಮುಗಿಸುವ ಕಾರ್ಯದಲ್ಲಿ ನೀನು ನಿನ್ನ ಆರೋಗ್ಯವನ್ನು ಕೆಡಿಸಿಕೊಳ್ಳಬೇಕಾಗಿಲ್ಲ. ನೀನು ಅದನ್ನು ಮುಗಿಸುವೆಯೆಂದು ಆಶಿಸೋಣ. ಅದು ಸಾಧ್ಯವಿಲ್ಲವಾದರೆ ಸ್ವಲ್ಪವೂ ಚಿಂತೆಯಿಲ್ಲ. ವರ್ಧಾದಲ್ಲಿ ನೀನು ಪೂರ್ಣವಾಗಿ ಹಿಂದೀಯನ್ನೇ ಉಪಯೋಗಿಸಬೇಕೆನ್ನುವ ಸ್ಥಿತಿಗೆ ಬಂದ ಹೊರತು ಅದನ್ನೇ ಉಪಯೋಗಿಸುವೆನೆಂಬ ಪಣ ತೊಡಬೇಡ. ಅದನ್ನೇ ಎಲ್ಲವೂ ಅವಲಂಬಿಸಿಲ್ಲ. ನನಗೆ ಏನು ಅಪೇಕ್ಷೆ ಎಂಬುದನ್ನೇ

ನೀನು ಪರಿಶೀಲಿಸುತ್ತಿರಬೇಕಾಗಿಲ್ಲ. ಇಂಥ ವಿಷಯಗಳಲ್ಲಿ ನನ್ನ ಅಭಿಪ್ರಾಯವನ್ನಾಗಲೀ ನನ್ನ ಅಪೇಕ್ಷೆಗಳನ್ನಾಗಲೀ ಪರಿಗಣಿಸಬೇಕಾದ ಕಾರಣವಿಲ್ಲ. ಒಟ್ಟಿನಲ್ಲಿ, ಹಿಂದೀಯನ್ನು ಅತ್ಯಂತ ಶ್ರೇಷ್ಠ ರೀತಿಯಲ್ಲಿ ಕಲಿಯುವುದು ಹೇಗೆ ಎಂಬುದೇ ಪ್ರಶ್ನೆ. ನಿನಗೆ ಚೆನ್ನಾಗಿ ಹೊಂದಿಕೊಳ್ಳುವ ಮಾರ್ಗವೇ ಶ್ರೇಷ್ಠ, ಬೇರೆ ಯಾವುದೂ ಅಲ್ಲ.

ಪ್ರೀತಿ,

೪-೨-೧೯೨೭

ಬಾಪೂ

ಇದನ್ನು ಅಂಚೆಯವನಿಗೆ ಕೊಡುತ್ತಿದ್ದಂತೆಯೇ ನಿನ್ನ ಸುಂದರವಾದ ಅನಿರೀಕ್ಷಿತ ಪತ್ರ* ತಲಪಿತು. ಅದು ಅರ್ಥಪೂರ್ಣವಾಗಿದೆ. ತಪ್ಪುಗಳು ಬಹಳ ಕಡಮೆ. ಎಷ್ಟು ಸಲ ಬರೆಯಬೇಕೆನಿಸಿದರೂ ಬರೆ.

ಶ್ರೀಮತಿ ಮೀರಾಬಾಯಿ
'ಸತ್ಯಾಗ್ರಹ' ಆಶ್ರಮ, ಸಾಬರಮತಿ

ಚಿ. ಮೀರಾ,

ನಿನ್ನೆ ಒಂದು ಪತ್ರವನ್ನು ಬರೆದೆ. ಆದುದರಿಂದ ಇವೊತ್ತು ಹೆಚ್ಚು ಬರೆಯುವುದಿಲ್ಲ.

* * * *

ನೀನು ನಿನ್ನ ಆರೋಗ್ಯದ ಬಗೆಗೆ ಪ್ರಯೋಗ ನಡೆಸಬೇಡ. ನಿನಗೆ ಆವಶ್ಯಕವಾದುದನ್ನು ತಿನ್ನು. ಆಶ್ರಮದಲ್ಲಿದ್ದಾಗ ನೀನು ಉಪಯೋಗಿಸುತ್ತಿದ್ದಷ್ಟು ಹಣ್ಣನ್ನು ಮಾತ್ರ ಸೇವಿಸು. ಯಾರಾದರೂ ನಿನಗೆ ಹಣ್ಣನ್ನು ಕಳಿಸಿದರೆ ನಿನಗೆ ಅಗತ್ಯವಾದಷ್ಟನ್ನು ಇಟ್ಟುಕೊಂಡು ಉಳಿದುದನ್ನು ಅಡಿಗೆಮನೆಗೆ ಎಂದರೆ, ವಿನೋಬಾ ವಶಕ್ಕೆ ಕಳಿಸು. ನಿನಗೆ ಬೇಕಾದಷ್ಟೇ ಇತರರಿಗೂ ಬೇಕೆಂದು ಭಾವಿಸಬೇಡ. ಇತರರಿಗೆ ಬೇಕಾಗುವ ಜವಾರಿ† ನಿನಗೆ ಬೇಕಿಲ್ಲ. ಹಣ್ಣುಗಳು ಆಹಾರವಾಗುವುದರ ಜೊತೆಗೆ

---

* ಹಿಂದೀಯಲ್ಲಿ ಬರೆದುದು.

† ಒಂದು ಬಗೆಯ ಜೋಳ.

ರುಚಿಕರವೂ ಆಗಿರುವುದು ಬಹುಶಃ ದುರದೃಷ್ಟವೆನ್ನಬೇಕು. ರುಚಿಕರವಾದ ವಸ್ತುಗಳನ್ನೂ ಔಷಧವನ್ನು ಉಪಯೋಗಿಸುವಂತೆ ಉಪಯೋಗಿಸಬೇಕು. ಅವುಗಳ ಕ್ಲುಪ್ತ ಪ್ರಮಾಣವನ್ನು ಗೊತ್ತುಪಡಿಸಿಕೊಂಡು, ಇತರರು ಉಪಯೋಗಿಸುವರೋ ಇಲ್ಲವೋ ಎಂಬ ಬಗೆಗೆ ಚಿಂತಿಸದೆ ತಿನ್ನಬೇಕು. ಇದರಿಂದ ಉಂಟಾಗಬಹುದಾದ ಅಪಾಯವನ್ನು ವಿವರಿಸಬೇಕಾಗಿಲ್ಲ. ಅವು ಅಷ್ಟು ಸ್ಪಷ್ಟವಾಗಿವೆ. ಆವಶ್ಯಕತೆಯ ನೆಪದಲ್ಲಿ ಜನ ಕೆಟ್ಟದನ್ನೂ ಹೊಂದಿಸಿಕೊಳ್ಳಲು ಪ್ರಯತ್ನಿಸುತ್ತದೆ. ನಾವು ನಿರಂತರ ಎಚ್ಚರಿಕೆಯಿಂದಿದ್ದರೆ ಅಂಥ ಅಸಮಂಜಸ ಸ್ಥಿತಿ ಪ್ರಾಪ್ತವಾದೀತು ಎಂದು ಹೆದರಬೇಕಾಗಿಲ್ಲ. ನಮ್ಮ ಸುತ್ತಮುತ್ತ ಅಪಾಯಗಳು ಇದ್ದೇ ಇರುತ್ತವೆ. ಆದರೆ ನಾವು ನಮ್ಮ ಸ್ವಭಾವದಂತೆ ಆಚರಿಸಬೇಕು. ಪರಿಣಾಮ ಏನಾದೀತೆಂಬ ಚಿಂತೆ ಏಕೆ?

ಈ ಪತ್ರ ನಾನು ಅಪೇಕ್ಷಿಸಿದುದಕ್ಕಿಂತಲೂ ದೊಡ್ಡದೇ ಆಯಿತು.

ಪ್ರೀತಿ,

**ಬಾಪೂ**

ನಾನು ಚೆನ್ನಾಗಿ ಆರೋಗ್ಯವಾಗಿದೇನೆ.

೧೮-೭-೧೯೨೭

**ಶ್ರೀಮತಿ ಮೀರಾಬೇನ್**
**ಸತ್ಯಾಗ್ರಹ ಆಶ್ರಮ**

ಚಿ. ಮೀರಾ,

ನನಗೆ ವಿರಾಮ ಬೇಕೆಂಬುದರಲ್ಲಿ ಸಂಶಯವೇ ಇಲ್ಲ. ಆದರೆ ಯಾರು ಅದನ್ನು ನನಗೆ ಕೊಟ್ಟಾರು? ನಾವು ಅಪೇಕ್ಷಿಸಿದುದೆಲ್ಲ ನಮಗೆ ದೊರಕುತ್ತದೆಯೆ? ಹಾಗಾಗುವುದಾದರೆ ನಮ್ಮ ಭಗವಂತನ ನಿಷ್ಠೆಗೆ ಸ್ಥಾನವಾದರೂ ಏನುಂಟು? ಅವನ ಸಂಕಲ್ಪವಿಲ್ಲದೆ ಒಂದು ಹುಲ್ಲು ಗರಿಕೆಯೂ ಚಲಿಸದೆಂಬ ನಂಬಿಕೆ ಸಾಕು. ನಾವು ಅವನನ್ನು ನಂಬಿದರೆ ಅವನು ನಮ್ಮನ್ನು ರಕ್ಷಿಸುತ್ತಾನೆ. ಈ ನಂಬಿಕೆ, ಹಣ ತಂದುಕೊಡುವಂಥದೆಲ್ಲವನ್ನೂ ಹೊಂದುವ ತರುವಾಯ ಬರುವಂಥ ನಂಬಿಕೆಯಲ್ಲ. ಆದರೆ

ಭಗವಂತನಲ್ಲಿ ನಂಬಿಕೆ ಇರುವ ಜನ, ತಮ್ಮ ಸ್ವಭಾವಕ್ಕೆ ವಿರೋಧವಾಗಿ, ಮಾರ್ಗ ತಪ್ಪಿ ಸಾಮಾನ್ಯರಿಗೆ ಹೊಂದಲು ಸಾಧ್ಯವಿಲ್ಲದಂಥ ಪರಿಹಾರದ ಎಚ್ಚರಿಕೆಯನ್ನು ಹೊಂದಲು ಯತ್ನಿಸುವುದಿಲ್ಲ. ಆದುದರಿಂದ ಇದರ ಸೂತ್ರ ಹೀಗೆ: ಎಚ್ಚರಿಕೆ ಕಡಮೆ ಇದ್ದಷ್ಟೂ ಉತ್ತಮ; ನಮ್ಮಲ್ಲಿ ಅತ್ಯಂತ ಕೆಳವುಟ್ಟದವರೂ ಸಾಮಾನ್ಯ ಪ್ರಯತ್ನದಿಂದ ಹೊಂದಬಹು ದಾದುದಕ್ಕಿಂತ ಹೆಚ್ಚಿಗೆ ಇರಬಾರದು. ಈ ಸೂತ್ರದ ದೃಷ್ಟಿಯಿಂದ ನನ್ನ ಬಗೆಗೆ ನಾನು ತೆಗೆದುಕೊಳ್ಳುವ ಎಚ್ಚರಿಕೆ, ಮತ್ತು ನನಗೆ ಲಭಿಸುವಂಥದು ಎಲ್ಲ ಪ್ರಮಾಣಕ್ಕೂ ಮೀರಿದಂಥದು; ಭಗವಂತನಲ್ಲಿ ನನಗಿರುವ ನಿಷ್ಠೆಗೆ ಅಸಮಂಜಸವಾದುದು. ಆದುದರಿಂದ ಈ ದೃಷ್ಟಿಯಲ್ಲಿ ನಾನು ಮಾಡು ವಂಥವೆಲ್ಲ ಮಿತಿಮೀರಿದುವೆಂದು ನನಗೆ ಅನಿಸುತ್ತದೆ. ಕೆಲವು ಕಾಲ ನನ್ನ ಬಗೆಗೆ ಗಮನ ಕೊಡದಿದ್ದರೆ ಆದರಿಂದ ಬಹಳ ಪ್ರಯೋಜನ ವಾದೀತೆಂದು ನನಗೆ ಆಗಾಗ ಭಾಸವಾಗುತ್ತದೆ. ಈಗ ನಾನು ಉಣ್ಣೆಯ ಶಾಲನ್ನು ಹೊದ್ದುಕೊಂಡಿದೇನೆ.

೨೪-೧೦-೧೯೨೭ ಪ್ರೀತಿ,

ಶ್ರೀಮತಿ ಮೀರಾಬೇನ್
ಸಾಬರಮತಿ

ಬಾಪೂ

ಹೇಳಿ ಬರೆಸಿದುದು.

ಸಾಬರಮತಿ
೩-೪-೧೯೨೯

ಚಿ. ಮೀರಾ,

ನಿನ್ನ ಕಾಗದಗಳು ಬಂದಿವೆ. ಎಲ್ಲ ರೋಗಿಗಳೂ ನಿನ್ನ ಬಳಿಗೆ ನೆರವನ್ನು ಪಡೆಯಲು ಬರುವರೆಂದು ಕೇಳಿ ನನಗೆ ಸಂತೋಷ. ಏನು ಮಾಡಬೇಕೆಂಬುದು ನಿನಗೆ ಗೊತ್ತಿದೆ. ಔಷಧಿಗಳ ವಿಷಯವಾಗಿ ನಿನಗೆ ಸರಿಯಾದ ಮಾರ್ಗದರ್ಶನಮಾಡಲು ಈ ಪತ್ರ ಬರೆಯುತ್ತಿದೇನೆ. ಭಾರತದ ಹಳ್ಳಿಗಳಿಗೆ ಹರಳೆಣ್ಣೆ ಮತ್ತು ವಿದೇಶೀ ಅತಿಮಧುರ ಕೂಡ ಅಧಿಕ ವೆಚ್ಚದವೇ. ಇಂಗ್ಲೆಂಡಿನಲ್ಲೋ ಜರ್ಮನಿಯಲ್ಲೋ ಮಾಡಿದ ಅತಿಮಧುರ ವನ್ನು ಉಪಯೋಗಿಸುವುದಕ್ಕೆ ಪ್ರತಿಯಾಗಿ ದೇಶೀಯ ಮೂಲಿಕೆಗಳನ್ನು

ಉಪಯೋಗಿಸಬೇಕು. ನೀನು ಮಾತ್ರ ಅತಿಮಧುರವನ್ನೇ ಉಪಯೋಗಿಸಬೇಕು. ಅದು ಒಳ್ಳೆ ಪ್ರಭಾವಕಾರಿ; ಎಲ್ಲ ಹಳ್ಳಿಗಳಲ್ಲಿಯೂ ದೊರಕುತ್ತದೆ. ಅದು ಕಡ್ಡಿಯ ರೂಪದಲ್ಲಿರುತ್ತದೆ. ಅದರಲ್ಲಿರುವ ಅಂಟನ್ನು ಉಪಯೋಗಿಸಬೇಕು. ಒಂದು ತೊಲ ಪ್ರಮಾಣದಷ್ಟನ್ನು ಸ್ವಲ್ಪ ಬೆಚ್ಚಗಿರುವ ಹಾಲಿನಲ್ಲಿ ಸೇರಿಸಿ, ರಾತ್ರಿ ಮಲಗುವುದಕ್ಕೆ ಮುಂಚೆ ಅಥವಾ ಮುಂಜಾನೆ ೪ ಘಂಟೆಗೆ ಸೇವಿಸುವುದು ಉತ್ತಮ. ರೋಗಿಗಳಿಗೆ ಚೆನ್ನಾಗಿ ಪ್ರವೃತ್ತಿಯಾಗುತ್ತದೆ. ಇದು ಅಗ್ಗ. ಇದನ್ನು ನೀರಿನಲ್ಲಿ ಸೇರಿಸಿ ತೆಗೆದುಕೊಳ್ಳಬಹುದು. ಸೋನಾಮುಖಿ ಎಂಬ ಇನ್ನೊಂದು ಬಗೆಯ ಎಲೆಗಳು ಎಲ್ಲೆಡೆಯಲ್ಲಿಯೂ ದೊರಕುತ್ತವೆ. ಅತಿಮಧುರಕ್ಕಿಂತಲೂ ಅದು ಅಗ್ಗ. ಸೋನಾಮುಖಿಯನ್ನು ಪುಡಿಮಾಡಿ, ಭಸ್ಮದಂತೆಯೂ ಸೇವಿಸಬಹುದು. ತಕ್ಕಮಟ್ಟಿಗಾದರೂ ಪ್ರಾಮಾಣಿಕರೂ, ಸಭ್ಯರೂ ಆದ ವೈದ್ಯರನ್ನು ಹುಡುಕಿ ಅವರ ಸಹಾಯದಿಂದ ಸುಲಭ ಔಷಧಿಗಳನ್ನು ಪಡೆದುಕೊಳ್ಳಬೇಕು. ಒಂದು ವಸ್ತುವನ್ನಂತೂ ನೀನು ಸದಾ ಇಟ್ಟುಕೊಂಡಿರಬೇಕು. ಅದು ಮಲೇರಿಯಾಕ್ಕೆ ಕ್ವಿನೈನ್. ಇದನ್ನೆಲ್ಲ ಪ್ರಾಸಂಗಿಕವಾಗಿ ಹೇಳಿದೇನೆ. ನಿನಗೆ ಅನಗತ್ಯವಾದ ತೊಂದರೆಯನ್ನು ಕೊಡಲು ಬಯಸುವುದಿಲ್ಲ. ಈ ಮೂಲಿಕೆಗಳೂ, ಔಷಧಿಗಳೂ ಇವುಗಳನ್ನು ಕುರಿತು ತಿಳಿದುಕೊಳ್ಳುವುದಕ್ಕಾಗಿಯೇ ನಿನ್ನ ಗಮನವನ್ನು ಕೊಡಬೇಕಾದುದಿಲ್ಲ. ಆದುದರಿಂದ ನೀನೇ ವಿವೇಕವನ್ನು ಉಪಯೋಗಿಸಿ ಯಾವುದು ಸಾಧ್ಯವೋ ಸುಲಭವೋ ಆ ರೀತಿ ಮಾಡು.

ಪ್ರೀತಿ,

ಶ್ರೀಮತಿ ಮೀರಾಬೆನ್ ಬಾಪೂ

ಬಿಹಾರ್

(ಅಗಾಧ ಕೆಲಸ ಮಾಡಿದುದರ ಪರಿಣಾಮವಾಗಿ ಬಾಪೂ ಆರೋಗ್ಯ ಕೆಟ್ಟಿತು. ಇದು ತಿಳಿದ ಕೂಡಲೇ ಮೀರಾ ಶುಶ್ರೂಷೆಗೆ ಹೋದರು. ಬಾಪೂ ಇದನ್ನು ಒಪ್ಪದೆ ನಿಂದಿಸಿದರು. ಮೀರಾ ದುಃಖತಪ್ತಳಾದರು.)

ಚಿ. ಮೀರಾ,

ನಮ್ಮ ರೈಲು ಎರಡು ಘಂಟೆಗಳು ತಡವಾಗಿ ಬಂದುದರಿಂದ ಕಾರ್ಯಕ್ರಮವೆಲ್ಲ ತಲೆಕೆಳಗಾಯಿತು. ನಾನು ಮಧ್ಯಾಹ್ನದ ವಿಶ್ರಾಂತಿಯನ್ನು ಬಿಟ್ಟುದರಿಂದಲೂ, ಸ್ನಾನವನ್ನು ಮುಂದಿನ ಸರಿಯಾದ ನಿಲ್ದಾಣದಲ್ಲಿ ತೆಗೆದುಕೊಳ್ಳಲು ನಿಶ್ಚಯಿಸಿದುದರಿಂದಲೂ ಅದು ಸ್ವಲ್ಪ ಹೊಂದಿಕೊಂಡಿತು. ೯-೩೦ಕ್ಕೇ ನೂಲುವುದನ್ನು ಮುಗಿಸಿದೆ. ಈಗ ಸುಮಾರು ೧೦ ಘಂಟೆ ಆಗಿದೆ. ಆದರೆ ಇದನ್ನು ಮುಗಿಸಿದ ಹೊರತೂ ನಾನು ನಿದ್ದೆ ಮಾಡುವುದಿಲ್ಲ.

ಇಷ್ಟೆಲ್ಲ ಪ್ರಸ್ತಾವನೆಯ ಉದ್ದೇಶ ಇಡೀ ದಿನ ನಿನ್ನ ಯೋಚನೆಯಲ್ಲಿಯೇ ನಾನು ಇದ್ದೆ ಎಂಬುದನ್ನು ತೋರಿಸುವುದು. ಈಗ ನಾನು ನಿನ್ನಿಂದ ದೂರದಲ್ಲಿರುವುದರಿಂದ ನಿನ್ನನ್ನು ದುಃಖತಪ್ತಳನ್ನಾಗಿ ಮಾಡಿದ ಬಗೆಗೆ ನನ್ನ ದುಃಖವೂ ಹೆಚ್ಚಿದೆ. ಯಾವ ಪೀಡಕನೂ ತಾನು ಉಂಟುಮಾಡಿದ ದುಃಖಕ್ಕೆ ಪ್ರತಿಫಲ ಅನುಭವಿಸದೆ ಇಲ್ಲ. ಯಾವ ಪ್ರೇಮಿಯೂ ತಾನೂ ಹೆಚ್ಚು ನೋವನ್ನನುಭವಿಸದೆ ನೋವನ್ನುಂಟುಮಾಡಿಲ್ಲ. ನನ್ನ ಸ್ಥಿತಿಯೂ ಹೀಗೆಯೇ ಆಗಿದೆ. ನಾನು ಮಾಡಿದುದು ಅನಿವಾರ್ಯವಾಗಿತ್ತು. ಆದರೆ ನಾನು ಕ್ರೋಧಪರವಶನಾಗಿದ್ದರೆ ಚೆನ್ನಾಗಿತ್ತು. ನಾನು ಯಾರನ್ನು ಅತ್ಯಂತ ಪ್ರೀತಿಸುವೆನೋ ಅವರ ಬಗೆಗೆ ಇಂಥದೇ ನನ್ನ ಕ್ರೌರ್ಯ. ನಿನ್ನ ಅಗಾಧ ಪ್ರೀತಿಯನ್ನಲ್ಲದೆ ಬೇರೆ ಏನನ್ನೂ ಚಿಂತಿಸಲಾರೆ ನಾನು. ನಿನ್ನ ಮೋಹವೆಂದು ಯಾವುದನ್ನು ನಾನು ಭಾವಿಸಿರುವೆನೋ ಅದನ್ನು ದೇವರು ಇಲ್ಲದಂತೆ ಮಾಡಲಿ, ಇಲ್ಲವೆ ನನ್ನ ಅರಿವಿನ ಕಣ್ಣನ್ನು ತೆರೆಸಿ, ತಪ್ಪನ್ನು ಕಂಡುಕೊಳ್ಳುವಂತೆ ಮಾಡಲಿ.

ನೀನು ಕ್ಷೇಮವಾಗಿರಬೇಕು.

ಬಾಂದಾ
೨೦-೧೧-೧೯೨೯

ಪ್ರೀತಿ,
ಬಾಪೂ

ಶ್ರೀಮತಿ ಮೀರಾಬೆನ್
'ಸದಾಕತ್'* ಆಶ್ರಮ, ಪಾಟನಾ

---

* ಡಾ. ರಾಜೇಂದ್ರ ಪ್ರಸಾದರ ಆಶ್ರಮ.

(ಉಪ್ಪಿನ ಸತ್ಯಾಗ್ರಹ ಮಾಡಲು ದಾಂಡೀಯಾತ್ರೆ ಕೈಗೊಂಡರು ಬಾಪೂ. ಬಂಧನವೂ ಆಯಿತು. ಯರವಡಾ ಸೆರೆಮನೆಯಿಂದ ಅವರು ಬರೆದ ಮೊದಲನೆಯ ಪತ್ರ ಇದು :)

ಚಿ. ಮೀರಾ,

ಇಂದು ಮೌನದ ದಿನ. ಈ ಸೆರೆಮನೆಯಿಂದ ನಿನಗೇ ಮೊದಲನೆಯದಾಗಿ ಪತ್ರ ಬರೆಯುತ್ತಿದೇನೆ.

ನಾನು ಬಹಳ ಸಂತಸದಿಂದಿದೇನೆ; ಇದುವರೆಗೂ ಪಡೆಯಲಾಗದಿದ್ದ ವಿಶ್ರಾಂತಿಯನ್ನು ಅನುಭವಿಸುತ್ತಿದೇನೆ. ಇಲ್ಲಿ ರಾತ್ರಿಗಳು ತಣ್ಣಗಿರುತ್ತವೆ. ನಾನು ಬಯಲಿನಲ್ಲಿ ಮಲಗಲು ಅವಕಾಶ ದೊರೆತಿರುವುದರಿಂದ ಸೊಗಸಾಗಿ ನಿದ್ದೆಬರುತ್ತದೆ. ಆಹಾರದಲ್ಲಿ ಮಾಡಿಕೊಂಡಿರುವ ಬದಲಾವಣೆ ವಿಷಯವಾಗಿ ನನ್ನ ಸಾರ್ವತ್ರಿಕ ಪತ್ರದಿಂದ ನೀನು ತಿಳಿದುಕೊಳ್ಳಬಹುದು.

ಚರಕಾವನ್ನು ಚೆನ್ನಾಗಿ ಸುತ್ತಿ ಬಹಳ ಎಚ್ಚರಿಕೆಯಿಂದಲೂ ವಿವೇಚನೆಯಿಂದಲೂ ಕಳಿಸಿದುದು ಉಲ್ಲಾಸವಾಯಿತು. ಹತ್ತಿಯನ್ನು ಎಕ್ಕುವ ಬಿಲ್ಲು ಕಳೆದುಹೋಗಿದೆಯೆಂದು ಸೆರೆಮನೆಯ ಮೇಲ್ವಿಚಾರಕರು ಹೇಳುತ್ತಾರೆ. ನೀನು ಬಹಳ ಬತ್ತಿಯನ್ನು ಕಳಿಸಿರುವುದರಿಂದ ಅದಕ್ಕೇನೂ ಅವಸರವಿಲ್ಲ.

ತಕಲೀಗೆ ಆದಷ್ಟು ಹೆಚ್ಚು ಕಾಲ ಕೊಡುತ್ತಿದೇನೆ. ಆದರಿಂದ ನೂಲುವ ವೇಗವೇ ನನಗಿಲ್ಲದಂತೆ ಕಂಡುಬಂದಿದೆ. ಒಂದು ಘಂಟೆಗೆ ೩೦ ಸುತ್ತು ಆದರೆ ಹೆಚ್ಚು. ಮೊದಲನೆಯ ದಿವಸ ೭ ಘಂಟೆಗಳ ಕಾಲದಲ್ಲಿ ೧೬೦ ಸುತ್ತನ್ನು ತೆಗೆದೆ. ಅದು ಮುಗಿಯುವ ವೇಳೆಗೆ ಸಾಕಾಗಿಹೋಯಿತು. ಹೆಚ್ಚು ವೇಗದಿಂದ ತೆಗೆಯುವ ಜಾಣ್ಮೆಯನ್ನು ನಾನು ಕಲಿಯಬೇಕು.

ನಿಮ್ಮ ತಾಯಿಯಿಂದ ಆರೋಗ್ಯಕ್ಕೂ ಇತರ ವಿಷಯಕ್ಕೂ ಪತ್ರ ಬಂದಿವೆಯೆಂದು ನಂಬಿದೇನೆ.

ಸೆರೆಮನೆಯ ಅಧಿಕಾರಿಗಳೆಲ್ಲ ದಯೆಯಿಂದಲೂ ಎಚ್ಚರಿಕೆಯಿಂದಲೂ ಇದಾರೆ.

ಯರವಡಾ
೧೨-೫-೧೯೩೦

ಪ್ರೀತಿ,

**ಬಾಪೂ**

ಚಿ. ಮೀರಾ,

ಅಪರಿಷ್ಕೃತ

ಹಿಂದಿನ ಮೌನದಿನ ನಾನು ಬರೆದ ಪತ್ರ ನಿನಗೆ ತಲಪಿರಬೇಕು. ಅದು ಶುಕ್ರವಾರ ರವಾನೆಯಾಗಿ ಹೋಗಿರಬೇಕು. ಇದು ಮುಂಚಿತವಾಗಿ ಹೋದೀತು. ಇಂದು ಭಾನುವಾರ—ರಾತ್ರಿ ೮ ಘಂಟೆಯಾಗಿದೆ. ಭಾನುವಾರ ಮಧ್ಯಾಹ್ನ ೩ ಘಂಟೆಗೆ ಮೌನ ಆರಂಭಿಸುವುದು ನನ್ನ ನಿಯಮ.

ಇಲ್ಲಿನ ನನ್ನ ದಿನಚರಿ ಕುರಿತು ಸಾರ್ವತ್ರಿಕ ಪತ್ರದಿಂದ ನಿನಗೆ ತಿಳಿಯುತ್ತದೆ. ನಾನು ತೆಗೆದಿರುವ ನೂಲು ಎರಡರಷ್ಟು ಹೆಚ್ಚಿದೆ. ರಾಟೆಯಿಂದ ಸುಮಾರು ೪೦೦ ಸುತ್ತು, ತಕಲಿಯಿಂದ ೫೦ರಿಂದ ೭೦ ಸುತ್ತು. ಎಲ್ಲವನ್ನೂ ಸರಿಯಾಗಿ ತೇವಮಾಡಿ, ಚೆನ್ನಾಗಿ ಸುತ್ತಿಡಲಾಗಿದೆ. ರಾಟೆಯ ನೂಲು ೭೫ ಸುತ್ತುಗಳ ಐದು ಕಟ್ಟುಗಳಾದರೆ, ತಕಲೀಯ ನೂಲು ೧೬೦ ಸುತ್ತುಗಳ ಒಂದು ಕಟ್ಟು. ಈ ನೂಲಿಗೆ ಯಾವ ಶಕ್ತಿ ಇದೆಯೋ ನೋಡಬೇಕು. ಇದಕ್ಕೆಲ್ಲ ದಿನವೂ ಒಟ್ಟು ಆರು ಘಂಟೆ ಕಾಲ ತೆಗೆದುಕೊಳ್ಳುತ್ತದೆ. ಇದಕ್ಕಾಗಿ ನಾನು ಪೇಚಾಡುವುದಿಲ್ಲ. ಈ ಸಾರಿ ನಾನು ಹೆಚ್ಚಿಗೆ ಓದುತ್ತಿಲ್ಲ. ಕಳೆದ ಸಲ ಮಾಡಿದಂತೆ ಪುಸ್ತಕಗಳನ್ನು ಕೂಡಿಸಲು ಇಚ್ಛೆಯಿಲ್ಲ. ಸಾಧ್ಯವಾದರೆ ನೂಲುವುದನ್ನು ಚೆನ್ನಾಗಿ ಕಲಿಯಲು ಬಯಸುತ್ತೇನೆ. ಇಷ್ಟರಲ್ಲೇ ಹತ್ತಿಯನ್ನು ಎಕ್ಕಬೇಕು. ಇನ್ನೂ ಹತ್ತು ದಿವಸಗಳ ಬತ್ತಿ ನನ್ನಲ್ಲಿದೆ.

ರೆಜಿನಾಲ್ಡ್* ಹೇಗಿದಾರೆ? ಬೇಸಗೆ ಹೇಗೆನ್ನಿಸಿದೆ ಅವರಿಗೆ? ಅವರಿಗೆ ನನ್ನ ಪ್ರೀತಿ. ನಿನ್ನ ವಾರದ ಪತ್ರದಲ್ಲಿ ರಾಜಕೀಯಕ್ಕೆ ಸಂಬಂಧಿಸದ ಎಲ್ಲ ಸುದ್ದಿಗಳನ್ನೂ ತಿಳಿಸಬಹುದು.

ಪ್ರಾರ್ಥನಾ ಪುಸ್ತಕದಲ್ಲಿರುವ ಗೀತೆಗಳನ್ನೂ ಪ್ರಾರ್ಥನೆಗಳನ್ನೂ ನಾನು ಭಾಷಾಂತರಿಸುತ್ತಿರುವುದಾಗಿ ಕಳೆದ ಸಲ ನಿನಗೆ ಹೇಳಿದುದು ನೆನಪಿದೆ. ಪ್ರಾತಃಕಾಲದ ಪ್ರಾರ್ಥನೆಯ ಭಾಷಾಂತರ ಮುಗಿಯುತ್ತಿದೆ.

---

* ರೆಜಿನಾಲ್ಡ್ ರೇನಾಲ್ಡ್ಸ್. ಈತ ಇಂಗ್ಲೆಂಡಿನವರು. 'ಕ್ವೇಕರ್' ಕ್ರೈಸ್ತ ಪಂಥದವರು. ಮೀರಾಬೆನ್ ಅವರಂತೆ ಗಾಂಧೀಜೀಯಲ್ಲಿ ಗೌರವಭಾವ ಇಟ್ಟುಕೊಂಡಿದ್ದರು. ೧೯೩೦ರ ಮಾರ್ಚ್ ೨ರಂದು ಭಾರತದ ವೈಸ್‌ರಾಯರಿಗೆ ಗಾಂಧೀಜೀ ಬರೆದ ಚರಿತ್ರಾರ್ಹ ಪತ್ರವನ್ನು ಅವರಿಗೆ ತಲಪಿಸುವ ದೂತಕಾರ್ಯ ನಡೆಸಿದವರು.

ನಿನ್ನ ಆರೋಗ್ಯ ಬಹಳ ಚೆನ್ನಾಗಿದೆಯೆಂದು ನಂಬಿದೇನೆ. ಯಾವ ಕಾರಣಕ್ಕೂ ಮಿತಿಮೀರಿ ಕೆಲಸ ಮಾಡಬೇಡ.

ಪ್ರೀತಿ,

೧೮–೫–೧೯೩೦ ಬಾಪೂ

ಚಿ. ಮೀರಾ,

ಪುನಃ ಇಂದು ಭಾನುವಾರ. ಮೌನ. ಸಾಯಂಕಾಲದ ಪ್ರಾರ್ಥನೆಯ ತರುವಾಯ ಇದನ್ನು ಬರೆಯುತ್ತಿದೇನೆ.

ನೀನು ಬಂದಾಗ ಕಾಲ ನಮಗೆ ವಿರೋಧವಾಗಿ ಹೋಗುತ್ತಿದ್ದಂತೆ ಭಾಸವಾಯಿತು. ಆದುದರಿಂದ ನಾನು ಸುಮ್ಮನೆ ಮಾತನಾಡುತ್ತಾ, ಅನೇಕ ಪ್ರಶ್ನೆ ಕೇಳುತ್ತಾ ಇದ್ದೆ. ನೀನು ನೆಮ್ಮದಿಯಿಂದ ಇದ್ದಂತೆ ಕಂಡು ಬರಲಿಲ್ಲ. ನೀನು ಕೃಶವಾಗಿರಬೇಕು. ಇದು ಸರಿಯಲ್ಲ. ಯುಕ್ತವಾದ ಆಹಾರವನ್ನೂ ಯುಕ್ತವಾದ ವ್ಯಾಯಾಮವನ್ನೂ ತೆಗೆದುಕೋ. ನಿನಗೆ ಬೇಕಾಗುವಷ್ಟು ಹಣ್ಣನ್ನೂ ಸೇವಿಸಿ, ಆರೋಗ್ಯವಾಗಿರಬೇಕು.

ಪ್ರಾರ್ಥನಾಪುಸ್ತಕದಿಂದ ಪ್ರತಿದಿನ ಒಂದು ಶ್ಲೋಕವನ್ನು ಭಾಷಾಂತರಿಸುವುದು ಮುಂದುವರಿಯುತ್ತಿದೆ. ಇನ್ನೂ ಹೆಚ್ಚಾಗಿ ಮಾಡಲು ಬಯಸುತ್ತೇನೆ. ನೂಲುವುದು, ಎಕ್ಕುವುದು ಇದೇ ಬಹಳ ಕಾಲ ತೆಗೆದು ಕೊಂಡುಬಿಡುತ್ತದೆ. ಈಗ ನಾನು ಹೊಲಿಯುವ ಯಂತ್ರಕ್ಕೂ ಸ್ವಲ್ಪ ಕಾಲವನ್ನು ಕೊಡಬೇಕು. ನೀನು ಬಂದದ್ದು ನನಗೆ ಹರ್ಷವಾಯಿತು.

೨೫–೫–೧೯೩೦ ಪ್ರೀತಿ,

ಯರವಡಾ ವಿಹಾರಮಂದಿರ†

ಬಾಪೂ

ಚಿ. ಮೀರಾ,

ಸಕಾಲದಲ್ಲಿ ನಿನ್ನ ಪತ್ರ ತಲಪಿತು. ಈಗ ಎರಡು ಕಡೆಗೂ ಕಾಗದ ಪತ್ರ ಜಾಗ್ರತೆ ಹೋಗಿಬರಲು ಯಾವ ತೊಂದರೆಯೂ ಇದ್ದಂತೆ ಕಂಡು ಬರುವುದಿಲ್ಲ.

---

† ಸೆರೆಮನೆಗೆ ಈ ಹೆಸರನ್ನು ಬಾಪೂ ಕೊಟ್ಟಿದ್ದರು.

ಲಂಡನ್ನಿನಿಂದ ಒಳ್ಳೆ ವಾರ್ತೆ ಬಂದಿದೆ. ಅದು ಯಶಸ್ವೀ ಶಸ್ತ್ರ ಚಿಕಿತ್ಸೆ. ಶಸ್ತ್ರಚಿಕಿತ್ಸೆಗೆ ಸಂಬಂಧಿಸಿದಂತೆ ಹೊಸ ಸಂಶೋಧನೆಗಳನ್ನು ಎಲ್ಲ ರೀತಿಯಲ್ಲಿಯೂ ಮಾಡಿ ಪಾಶ್ಚಾತ್ಯ ದೇಶಗಳು ಯಾವಾಗಲೂ ನನ್ನ ಮೆಚ್ಚುಗೆಯನ್ನು ಪಡೆದಿವೆ.

ನಿನ್ನ ಆಹಾರದಲ್ಲಿ ನೀನು ಎಷ್ಟು ತುಪ್ಪವನ್ನು ಉಪಯೋಗಿಸುವೆ ಎಂಬುದನ್ನೂ ಕಿತ್ತಲೆಹಣ್ಣನ್ನು ಸೇವಿಸುವೆಯೋ ಇಲ್ಲವೋ ಎಂಬುದನ್ನೂ ತಿಳಿಸಿಲ್ಲ. ಈ ಎರಡನ್ನೂ ನೀನು ತ್ಯಜಿಸಬಾರದು, ಅಥವಾ ಕಡಿಮೆ ಮಾಡಬಾರದು.

ನೀನು ಹತ್ತಿಯನ್ನು ಇನ್ನೂ ಕಳಿಸದಿದ್ದರೆ ತತ್‌ಕ್ಷಣ ಕಳಿಸು. ಜುಲೈ ೧೫ನೇ ತಾರೀಖು ಕೊನೆಯ ದಿನವೆಂದು ನಿನಗೆ ತಿಳಿಸಿದೇನೆ.

ನಾನು ಆರೋಗ್ಯವಾಗಿದೇನೆ. ೩೭೫ ಸುತ್ತು ನೂಲನ್ನು ತೆಗೆಯಲು ಈ ದಿವಸಗಳಲ್ಲಿ ನನಗೆ ಆಯಾಸ ಕಂಡುಬರುತ್ತದೆ. ಕಾರಣವನ್ನು ತಿಳಿಯಲು ಯತ್ನಿಸುತ್ತಿದೇನೆ. ಇದರಿಂದ ತಕಲಿಯ ಅಭ್ಯಾಸವೂ ನಿಧಾನವಾಗಿದೆ.

ನನ್ನ ಪತ್ರಗಳಲ್ಲಿ ಕೆಲವು ಭಾಗಗಳೇ ಮಾಯವಾಗಿರುತ್ತದೆಂದು* ದೂರು. ಆದುದರಿಂದ ನೀನು ಸಾಮಾನ್ಯ ರೀತಿಯ ಭಾಗಗಳನ್ನು ಪ್ರಕಟಿಸಿದರೆ† ಸಾಕು. ಇದನ್ನು ಸೆರೆಮನೆಯ ಮೇಲ್ವಿಚಾರಕರೊಂದಿಗೆ ಚರ್ಚಿಸಿದೇನೆ. ನನ್ನ ಪತ್ರಗಳಲ್ಲಿ ಏನೂ ಇಲ್ಲವಾದರೆ ಜನಕ್ಕೆ ತೃಪ್ತಿ ಇರುವುದಿಲ್ಲ.

ಭೇಟಿಗಳ ಬಗೆಗೆ ಇನ್ನೂ ಏನೂ ತೀರ್ಮಾನವಾಗಿಲ್ಲ.

ನಾನು ಬರೆಯದಿದ್ದರೂ ಯಾರೆಲ್ಲ ಸದಾ ನನ್ನ ಜೊತೆಯಲ್ಲಿರುವರೋ ಅವರಿಗೆಲ್ಲ ಪ್ರೇಮ.

ಯರವಡಾ ಮಂದಿರ
೭-೭-೧೯೩೦

ಪ್ರೀತಿ,
**ಬಾಪೂ**

---

* ಪತ್ರಗಳು ಪರೀಕ್ಷೆಗೆ (Censor) ಗುರಿಯಾಗುತ್ತಿದ್ದವು.

† ಮೀರಾ ಬೊಂಬಾಯಿಯಿಂದ ಚಳವಳಿಯ ಸುದ್ದಿ ಪ್ರಕಟಸುತ್ತಿದ್ದರು.

ಚಿ. ಮೀರಾ,

ನಿನ್ನ ಪತ್ರ. ಮುಸಫರಪುರದಲ್ಲಿ ಪೂರ್ತಿ ನಾಲ್ಕು ದಿವಸಗಳ ವಿಶ್ರಾಂತಿಯನ್ನೂ ನೀನು ತೆಗೆದುಕೊಳ್ಳಲಿಲ್ಲ. ಮುಂದಿನ ಸಲ ನಾನು ನನ್ನ ಮಾತಿಗೆ ತಕ್ಕಂತೆ ನಡೆಯಬೇಕು.§ ಸೇವಾ ದೃಷ್ಟಿಯಿಂದಲೇ ವಿಶ್ರಾಂತಿಯನ್ನು ಹೊಂದುವುದಕ್ಕೆ ಆಗುವುದಿಲ್ಲವೇಕೆ? ಆ ನೆಪದಲ್ಲಿ ಅದು ಸುಲಭವಾಗಿ ದುರುಪಯೋಗವಾಗಬಲ್ಲದು. ಅನೇಕ ವೇಳೆ ಆ ರೀತಿ ಆಗಿದೆ. ಆದರೆ ಪ್ರಾಮಾಣಿಕ ಜನರು ಪ್ರಾಮಾಣಿಕ ರೀತಿಯಲ್ಲಿ ಸೇವಾ ಶಕ್ತಿಯನ್ನು ಹೆಚ್ಚಿಸಿಕೊಳ್ಳುವ ದೃಷ್ಟಿಯಿಂದ ವಿಶ್ರಾಂತಿಯನ್ನೇಕೆ ಪಡೆಯ ಬಾರದೆಂಬುದಕ್ಕೆ ಕಾರಣವಿಲ್ಲ. ಸೇವೆಯಲ್ಲಿ ತನ್ನನ್ನು ಸವೆಸುತ್ತಿರುವೆನು ಎಂದು ಹೇಳಿಕೊಳ್ಳುವ ವ್ಯಕ್ತಿ ಆತ್ಮವಂಚನೆ ಮಾಡಿಕೊಳ್ಳುತ್ತಿದ್ದಾನೆಂದು ನನ್ನ ಭಾವನೆ. ಅನವರತ ಅನಾಸಕ್ತಿಯಿಂದ ಮಾಡುವ ಸೇವೆಗಿಂತ ಇಂಥ ಸೇವೆಯನ್ನು ದೇವರು ಹೆಚ್ಚು ಪ್ರೀತಿಸುವನೆ? ದೇಹವೊಂದು ಯಂತ್ರ ಇದ್ದಂತೆ. ಪೂರ್ಣ ಸೇವೆಗೆ ಅದು ಸದಾ ಸಿದ್ಧವಾಗಿರಬೇಕು. ಸುರಕ್ಷಿತ ವಾದ ಜಾಗದಿಂದ ಮಾಡುವ ಈ ಉಪದೇಶ ಸಾಕು. ಸಾಕಷ್ಟು ವಿಶ್ರಾಂತಿ ಯನ್ನು ತೆಗೆದುಕೊಳ್ಳಲಿಲ್ಲವೆಂದು ನನಗೇನೂ ಅವಮಾನವಿಲ್ಲದಿರುವು ದೊಂದೇ ಸಮಾಧಾನ. ವಿಶ್ರಾಂತಿಯ ನಿಯಮಗಳನ್ನು ಅರಿಯದ ಇತರರು ಆ ರೀತಿ ಭಾವಿಸಿಯಾರು. 'ಸಕಾಲದಲ್ಲಿ ತೆಗೆದುಕೊಂಡ ವಿಶ್ರಾಂತಿ ಸಕಾಲದಲ್ಲಿ ಹಾಕಿದ ಹೊಲಿಗೆ' ಎಂಬ ನಾಣ್ಣುಡಿಯಂತೆ.

ನೂಲುವುದರಲ್ಲಿಯೂ ಎಕ್ಕುವುದರಲ್ಲಿಯೂ ಒಳ್ಳೆಯ ಪ್ರಾವೀಣ್ಯ ವನ್ನು ಸಾಧಿಸಬಯಸುತ್ತೇನೆ. ಘಂಟೆಗೆ ೧೭೦ ಸುತ್ತಿಗೆ ಮಾತ್ರ ಏಕೆ ನಿಲ್ಲಬೇಕೋ ನನಗೆ ಕಾರಣ ಕಂಡುಬರುವುದಿಲ್ಲ. ಈಗ ಅದು ದೇವರ ಕಾರ್ಯವೆಂದು ಭಾಸವಾಗುವುದರಿಂದ ಉತ್ತಮವಾದೀತೆಂಬ ಭರವಸೆ ನನಗಿದೆ. ಅವನ ಇಚ್ಛೆಯಿದ್ದರೆ, ಅವನು ಶಕ್ತಿಯನ್ನೂ ಸಾಮರ್ಥ್ಯ ವನ್ನೂ ನೀಡುತ್ತಾನೆ.

---

§ ವಿಶ್ರಾಂತಿಯ ವಿಷಯವಾಗಿ.

ನನ್ನ ತೂಕ ೧೦೩-೧೦೪ ಪೌಂಡು ; ಆಹಾರ ಇದ್ದಂತೆಯೆ.

ಪ್ರೀತಿ,

೨೮-೯-೧೯೩೦

ಬಾಪೂ

ಚಿ. ಮೀರಾ,

ನೀನು ಬೊಂಬಾಯಿಯಿಂದ ಬರೆದ ಪತ್ರ.

ನೀನು ಉತ್ತಮಗೊಳ್ಳುತ್ತಿದೀಯೆಂಬುದು ಹರ್ಷಜನಕ. ನೀನು ವಿವರಿಸಿರುವ ಸ್ಥಿತಿಗೆ ನಿನ್ನ ಮನಸ್ಸನ್ನು ಹರಿಬಿಡಬಾರದು. ಅನಾಸಕ್ತಿಯಿಂದ ಕೆಲಸ ಮಾಡಿದರೆ ನೀನು ಯಾವುದಕ್ಕೂ ಅಪಾಂತರವಿಲ್ಲದೆ, ಗಡಿಬಿಡಿಯಿಲ್ಲದೆ ಮುಂದುವರಿದೀಯೆ. ಕಾರ್ಯವನ್ನು ಹೃತ್ಪೂರ್ವಕವಾಗಿ ಕೈಗೊಳ್ಳಬೇಕು ; ಫಲಾಫಲಗಳು ದೈವೇಚ್ಛೆ. ಆಗ ಅಪಾಂತರವೂ ಇಲ್ಲ, ಚಿಂತೆಯೂ ಇಲ್ಲ. ನಿನಗೆ ಜನಕಮಹಾರಾಜನ ಕಥೆ ಗೊತ್ತಿರಬೇಕು. ಅವನು ಕರ್ತವ್ಯದ ಮೂರ್ತಿಯೇ ಆಗಿದ್ದನು. ಅವನ ರಾಜಧಾನಿಗೆ ಬೆಂಕಿ ಬಿದ್ದಿತು. ದೂತರು ಬಂದು ವಾರ್ತೆಯನ್ನು ತಿಳಿಸಿದರು. ಅವನ ಉತ್ತರ: "ರಾಜಧಾನಿ ಭದ್ರವಾಗಿರಲಿ, ಅಥವಾ ಬೆಂಕಿಯಿಂದ ಭಸ್ಮವಾಗಲಿ, ನನಗೇನು ಚಿಂತೆ!" ಅದನ್ನು ರಕ್ಷಿಸಲು ಅವನು ಸಾಧ್ಯವಾದುದನ್ನೆಲ್ಲ ಮಾಡಿದ್ದ. ಅವನೂ ಬೆಂಕಿ ಬಿದ್ದ ಸ್ಥಳಕ್ಕೆ ಹೋಗಿ ಸುಮ್ಮನೆ ಚಡಪಡಿಸಿದ್ದರೆ, ಕಾರ್ಯಕರ್ತರಿಗೆ ದಿಕ್ಕು ತೋರದಂತಾಗುತ್ತಿತ್ತು ; ಪರಿಸ್ಥಿತಿ ಇನ್ನೂ ಹದಗೆಡುತ್ತಿತ್ತು. ಅವನು ದೇವರ ಸಾಧನಮಾತ್ರವೆಂದು ಭಾವಿಸಿದ್ದನು. ಆದುದರಿಂದ ತನ್ನ ಕೈಯಿಂದ ಆಗುವುದನ್ನೆಲ್ಲ ಮಾಡಿ ನಿರಾಳನಾಗಿಯೂ ಶಾಂತನಾಗಿಯೂ ಇದ್ದನು. ನಾವೂ ಹೀಗೇ ಇರಬೇಕು. ನಮ್ಮ ಸಾಮರ್ಥ್ಯವನ್ನೆಲ್ಲ ಉಪಯೋಗಿಸಿದಮೇಲೆ ನಮ್ಮ ಕಾರ್ಯವು ಮುಂದುವರಿಯುತ್ತದೆ, ಅಥವಾ ಇಲ್ಲ ಎಂಬ ಚಿಂತೆಯಾದರೂ ಏಕೆ?

ಯರವಡಾ ಮಂದಿರ

ಪ್ರೀತಿ,

೧೯-೧೦-೧೯೩೦

ಬಾಪೂ

ಚಿ. ಮೀರಾ,

ನಿನ್ನ ಪತ್ರ. ಗೀತಾಧ್ಯಾಯಗಳಿಗೆ ನಾನು ಟಿಪ್ಪಣಿ ಬರೆಯುತ್ತಿರುವ ಕೆಲಸ ಚೆನ್ನಾಗಿದೆ. ನಮ್ಮಿಬ್ಬರ ಸಂಘಟಿತ ಕಾರ್ಯವನ್ನು ನಾನು ಎದುರು ನೋಡುತ್ತಿದೇನೆ. ಆ ಅಧ್ಯಾಯಗಳಲ್ಲಿ ನನ್ನನ್ನು ಅಭಿವ್ಯಕ್ತಗೊಳಿಸಿಕೊಳ್ಳ ಬೇಕೆಂದು ಅಪೇಕ್ಷಿಸುತ್ತೇನೆ. ಇದರಿಂದ ನಿನಗೆ ಹೆಚ್ಚಿನ ಕೆಲಸ; ನಿನ್ನ ಬಹಳ ಕಾಲವನ್ನೂ ತೆಗೆದುಕೊಳ್ಳುತ್ತದೆ. ಹೇಗಾದರೂ, ಕೆಲಸ ನಿನಗೆ ಪ್ರಿಯವಾದುದರಿಂದ ಅದರ ಆಯಾಸ ನಿನಗೆ ಗೋಚರವಾಗಲಾರದು.

ಆಂಡ್ರೂಸರಿಂದ* ಒಂದು ಪತ್ರ ಬಂದಿದೆ. ಅದನ್ನು ನಾನು ನಿನಗೆ ಕಳಿಸಬೇಕಾಗಿದೆ. ನನಗೆ ನೇರವಾಗಿ ಬರೆಯುವುದನ್ನು ಅವರು ತಡೆಯ ಲಾರದೆಹೋದರು. ನಾನೂ ಕೊನೆಗೆ ಕೆಲವು ಪಂಕ್ತಿಗಳನ್ನು ಅವರಿಗೆ ಬರೆದಿದೇನೆ.

* * * *

ಚರಕಾ, ತಕಲೀ ಮತ್ತು ಬಿಲ್ಲು ಇವೆಲ್ಲ ನನಗೆ ತುಂಬ ಆಕರ್ಷಕ ವಾಗಿವೆ. ಅವುಗಳೆಂದರೆ ನನಗೆ ಬೇಸರಿಕೆಯೇ ಇಲ್ಲ. ದಿನವೂ ಈ ಕೆಲಸಗಳಿಗೆ ನಾನು ಹೆಚ್ಚು ಕಾಲ ಕೊಡಲು ಅಪೇಕ್ಷಿಸುತ್ತೇನೆ. ಈ ಮೂರರಲ್ಲಿಯೂ ಹೆಚ್ಚು ಉತ್ಪತ್ತಿ ಮಾಡಬೇಕೆಂಬುದು ನನ್ನ ಉದ್ದೇಶ. ಆದರೆ ನಾನು ಕ್ರಮರಹಿತ, ದಡ್ಡ ಮತ್ತು ಬಹಳ ನಿಧಾನ. ಅಂತೂ ನನ್ನ ವಯಸ್ಸೇ ಹೆಚ್ಚು ಉತ್ಪತ್ತಿಮಾಡಲು ನನಗೆ ಅಡಚಣೆ ತಂದಿದೆ ಎನಿಸುತ್ತದೆ. ಅಲ್ಲದೆ ನನಗೆ ತಕ್ಕ ಕೌಶಲವೂ ಇಲ್ಲ. ಈ ಪರಿಸ್ಥಿತಿಯಲ್ಲಿ, ನನ್ನ ಈ ಪುಟ್ಟ ಕಾಣಿಕೆಯನ್ನೇ ದೇವರು ನನ್ನ ಪರಮ ಸಾಧ್ಯವೆಂದು ಅಂಗೀಕರಿಸುವನೆಂಬ ನಂಬಿಕೆಯಿಂದ ಕೂಡಿದೇನೆ.

ಚಳಿಗಾಲದಲ್ಲಿ ನೀನು ತಣ್ಣೀರು ಸ್ನಾನವನ್ನು ಮಾಡುವುದಾದರೆ, ಅದಕ್ಕಿಂತ ಹೆಚ್ಚು ಲವಲವಿಕೆ ಕೊಡುವುದು ಇನ್ನೊಂದಿಲ್ಲ. ಪ್ರಕೃತಿಗೆ ವಿರುದ್ಧವಾಗಿ ಹೋರಾಡಬೇಡ. ಸ್ನಾನ ಮಾಡಿದ ಕೂಡಲೇ ಪ್ರತಿಕ್ರಿಯೆ ಯಾಗಿ ಶಾಖ ಉತ್ಪತ್ತಿಯಾಗದಿದ್ದರೆ ಬಿಸಿ ನೀರು ಸ್ನಾನವನ್ನೇ ಪುನಃ

---

* ಸಿ. ಎಫ್. ಆಂಡ್ರೂಸ್.

ಮಾಡು. ಪ್ರತಿಕ್ರಿಯೆ ಎಂದರೆ, ಬಿಸಿ ಕೈಗಳನ್ನು ರಭಸದಿಂದ ಉಜ್ಜುವುದು. ೧೯೧೪ರಲ್ಲಿ ಲಂಡನ್ನಿನಲ್ಲಿದ್ದಾಗ ಹೃದ್ರೋಗ ಬಂದುದರಿಂದ ವ್ಯಸನಪಡುತ್ತಾ ತಣ್ಣೀರು ಸ್ನಾನವನ್ನು ಬಿಡಬೇಕಾಯಿತು. ನಿನ್ನ ಆಹಾರ ಬಹಳ ಚೆನ್ನಾಗಿದೆ. ಇನ್ನು ಸ್ವಲ್ಪ ಹೆಚ್ಚಾಗಿ ತುಪ್ಪ ಆವಶ್ಯಕವೇನೋ. ನೀನು ಶಕ್ತಿ, ಶಾಖ ಮತ್ತು ತೂಕಗಳನ್ನು ಕಾಪಾಡಿಕೊಳ್ಳುವುದು ಸ್ವಲ್ಪ ಹೆಚ್ಚಾಗಿ ಆವಶ್ಯಕ ವೆಂದು ಅನುಭವದಿಂದ ತಿಳಿದುಬಂದಿದೆ.

ಯರವಡಾ ಮಂದಿರ
೧೩–೧೧–೧೯೩೦

ಪ್ರೀತಿ,
ಬಾಪೂ

ಚಿ. ಮೀರಾ,

೨೯–೧೧–೩೦. ಪ್ರಾತಃಕಾಲದ ಪ್ರಾರ್ಥನೆ ಮುಗಿದಿದೆ. ಸಾಕಷ್ಟು ಚಳಿ. ಪ್ರಾರ್ಥನೆ ಮುಗಿದ ತರುವಾಯ ೫–೩೦ರ ಕಹಳೆಯಾಗುವ† ವರೆಗೂ ಸ್ವಲ್ಪ ಬರೆವಣಿಗೆಯನ್ನು ಮಾಡುತ್ತೇನೆ.

ನಿನ್ನ ಪತ್ರವನ್ನು ಬರೆದಾಗ ನೀನು ಉತ್ತಮಗೊಂಡಿದೀಯೆಂದು ಕೇಳಿ ಹರ್ಷವಾಯಿತು. ಆರೋಗ್ಯದ ವಿಷಯದಲ್ಲಿ ನಾವು ಆಗಾಗ ತಪ್ಪು ಮಾಡಿ ಪಾಠ ಕಲಿಯುವಂತೆ ಇತರ ಎಲ್ಲ ವಿಷಯಗಳಲ್ಲಿಯೂ ತಪ್ಪು ಮಾಡಿಯೇ ನಿಜವಾದ ಪಾಠ ಕಲಿತೇವು. ಇದು ನನ್ನ ತಪ್ಪೊಪ್ಪಿಗೆಗೆ ಪ್ರಸ್ತಾವನೆಯೇ ಹೊರತು ನಿನಗೆ ಎಚ್ಚರಿಕೆ ಕೊಡುವುದಕ್ಕಲ್ಲ. ಕಳೆದ ಗುರುವಾರ ನನಗೆ ಇದ್ದಕ್ಕಿದ್ದಂತೆ ಉಗ್ರ ಉದರಶೂಲೆ ಕಂಡುಬಂದಿತು. ನಾನು ಅದನ್ನು ತಪ್ಪಿಸಿಕೊಳ್ಳಬಹುದಾಗಿತ್ತು. ಆದರೆ ದಡ್ಡತನದಿಂದ ಆ ರೀತಿ ಮಾಡಲಿಲ್ಲ. ನಿನಗೆ ಗೊತ್ತಿರುವಂತೆ ನಾನು ಈ ದಿನಗಳಲ್ಲಿ ಮೊಸರನ್ನೇ ಆಹಾರವಾಗಿ ತೆಗೆದುಕೊಳ್ಳುತ್ತಿದೇನೆ. ಅದು ಚೆನ್ನಾಗಿ ಹೊಂದಿಕೊಂಡರೂ ಪ್ರವೃತ್ತಿಯನ್ನು 'ಎನಿಮಾ' ಮೂಲಕವೇ ನಡೆಸ ಬೇಕಾಗಿತ್ತು. ಅಲ್ಲದೆ ನೀನು ಕಂಡಂತೆ, ನನ್ನ ತೂಕ ಹೆಚ್ಚುತ್ತಿತ್ತು.

---

† ಜೈಲಿನ ನಿಯಮದ ಪ್ರಕಾರದ ಕಹಳೆ.

ಇತರ ವಿಧಗಳಲ್ಲಿ ನಾನು ಸರಿಯಾಗಿದ್ದೆ. ಆದುದರಿಂದ ನಾನು ಮೊಸರನ್ನು ಮುಂದುವರಿಸಿದೆ; ಆದರಲ್ಲಿಯೂ ಗಟ್ಟಿಮೊಸರು. ಇದರಿಂದ 'ಎನಿಮಾ' ತೆಗೆದುಕೊಂಡರೂ ಮಲಬದ್ಧತೆ ಇನ್ನೂ ಹೆಚ್ಚಾಯಿತು. ಅದು ಒಂದು ಸಾಕಷ್ಟು ಸೂಚನೆಯಾಗಿತ್ತು—ಕೊನೆ ಪಕ್ಷ ಮೊಸರನ್ನಾದರೂ ನಿಲ್ಲಿಸಲು ಅಥವಾ ಒಂದು ದಿನ ಎಲ್ಲ ಆಹಾರವನ್ನೂ ನಿಲ್ಲಿಸಲು. ನಾನು ನಿಲ್ಲಿಸಲಿಲ್ಲ. ಆದುದರಿಂದ ದಿನವೆಲ್ಲ ಹೆಣಗಬೇಕಾಯಿತು. ನಾನು ತಿಂದುದನ್ನು ಬಲವಂತದಿಂದ ಹೊರಹೊರಡಿಸಬೇಕಾಯಿತು. ಇದಾದ ಕೆಲವೇ ಘಂಟೆಗಳಲ್ಲಿ ನೋವೆಲ್ಲ ನಿಂತಿತು. ಮಾರನೇ ದಿನ ಒಣದ್ರಾಕ್ಷಿ ಮತ್ತು ನೀರು ಈ ಎರಡನ್ನು ಬಿಟ್ಟು ಬೇರೆ ಏನನ್ನೂ ಸೇವಿಸಲಿಲ್ಲ. ಮೂರು ಪೌಂಡುಗಳ ತೂಕವನ್ನು ಕಳೆದುಕೊಂಡಿದ್ದರೂ ನಾನು ಆರೋಗ್ಯವಾಗಿದ್ದೆ. ನನ್ನ ವಿಷಯದಲ್ಲಿ ಯಾವಾಗಲೂ ಹೀಗೆಯೇ. ನನ್ನ ತೂಕ ೯೫ ಪೌಂಡುಗಳನ್ನು ಮೀರಿದರೆ ಅದು ನಿಜವಾಗಿಯೂ ಸ್ಥಾಯಿಯಲ್ಲ; ಬಹುಶಃ ಅದು ವಿಷವಸ್ತುವಿನ ಪರಿಣಾಮವಿರಬೇಕು. ಸಾಧ್ಯವಾದರೆ, ಮಲಬದ್ಧತೆಯಿಂದ ಪಾರಾಗಲು ನಾನು ನಿರ್ಧರಮಾಡಿದೆ. ಮೊಸರು ಸೇವಿಸುವುದನ್ನು ಬಿಟ್ಟೆ. (ಈಗ ಕಹಳೆ ಕೇಳುತ್ತಿದೆ. ತಾತ್ಕಾಲಿಕವಾಗಿ ಬರೆಯುವುದನ್ನು ನಿಲ್ಲಿಸಿದೇನೆ. ರಾತ್ರಿ ೮ಕ್ಕೆ ಮುಂದುವರಿಸುತ್ತೇನೆ.) ಈಗ ನಾನು ಸೊಪ್ಪು, ಚಪ್ಪರಬದನೆ ಹಣ್ಣು ಇವುಗಳನ್ನು ಬೇಯಿಸಿ ಉಪಯೋಗಿಸುತ್ತೇನೆ. ಖರ್ಜೂರ ಮತ್ತು ಒಣದ್ರಾಕ್ಷಿಯನ್ನು ಸೇವಿಸುತ್ತೇನೆ. ಕಾಲಪ್ರವೃತ್ತಿ ಸಹಜವಾಗಿದೆ. ಶಕ್ತಿ ಸ್ಥಾಯಿಯಾಗಿದೆ. ತೂಕ ಕಡಿಮೆಯಾಗಿಲ್ಲ. ನಿನ್ನೆ ಮತ್ತು ಈ ದಿನ ೧೨ ಬಾದಾಮಿಯನ್ನು ತೆಗೆದುಕೊಂಡೆ. ಈ ಬದಲಾವಣೆಗೆ ಯಾರೂ ಗಾಬರಿಯಾಗಬೇಕಾಗಿಲ್ಲ. ನಾನು ನಿಶ್ಯಕ್ತಿ ಹೊಂದಿದರೆ ಅಥವಾ ಒಂದೇ ಸಮನಾಗಿ ತೂಕವನ್ನು ಕಳೆದುಕೊಂಡರೆ ತತ್‌ಕ್ಷಣ ಹಾಲನ್ನು ಸೇವಿಸಲು ಆರಂಭಿಸುತ್ತೇನೆ. ಇದರಿಂದ ಉತ್ತಮ ಹೊಂದುತ್ತೇನೆ. ಇದಕ್ಕೆ ಪ್ರತಿಯಾಗಿ, ಈ ಬದಲಾವಣೆಯೇ ಹೊಂದಿಕೊಂಡರೆ ಅದೂ ಸಂತೋಷವೇ. ಆದುದರಿಂದ ಈ ಬದಲಾವಣೆಗೆ ನೀವೆಲ್ಲ ಸಂತೋಷಪಡಬೇಕು. ಇದರಿಂದ ಉತ್ತಮವಾದರೂ ಸರಿ, ಇಲ್ಲವಾದರೂ ಸರಿ. ನಾನು ಯಾವ ಅಪಾಯವನ್ನೂ ಸ್ವಾಗತಿಸುವುದಿಲ್ಲ.

ಕಾಕಾ* ಹೊರಟುಹೋದರು. ಹೋಗುವಾಗ ಕಣ್ಣೀರನ್ನು ಇಟ್ಟರು. ನಾವಿಬ್ಬರೂ ಅಷ್ಟು ಹೊಂದಿಕೊಂಡಿದ್ದೆವು. ಅವರು ಹೊರಟುಹೋದ ಎರಡು ಘಂಟೆಗಳೊಳಗೆ ಪ್ಯಾರೇಲಾಲ್ ಕಳಿಸಲ್ಪಟ್ಟರು. ಪ್ಯಾರೇಲಾಲ್ ನನ್ನನ್ನು ನೋಡಿಕೊಳ್ಳುತ್ತಾನೆ. ಅವನಿಗೆ ನಿನ್ನ ರಾಟೆಯನ್ನು ಕೊಟ್ಟೆ. ಅವನು ೮೩ ಸುತ್ತುಗಳನ್ನು ತೆಗೆದನು. ನಾನು ಕೂಡಿಸಿದ್ದ ರೀತಿಯಲ್ಲಿಯೇ ಅದು ನಡೆಯಿತು. ಇದನ್ನು ನಾನು ಬರೆಯುತ್ತಿರುವಾಗ ಯಾವ ಕಲ್ಪನೆಯನ್ನೂ ಹೇಳುತ್ತಿಲ್ಲ. ಏನೇ ಆದರೂ ನಾನು ರಾಟೆ ಮತ್ತು ಅದರ ಸಾಧ್ಯತೆಗಳನ್ನು ಮಾತ್ರ ಕುರಿತು ಚಿಂತಿಸಬಲ್ಲೆ. ಗಾಂಡೀವವೂ† ಬಹಳ ಸುಧಾರಣೆಯಾಗುತ್ತಿದೆ. ಈ ಸುಧಾರಿಸಿದ ರಾಟೆಯನ್ನು ನಾನು ನಾಳೆಯ ದಿವಸ ಪ್ರಯೋಗಮಾಡುವ ಭರವಸೆ ಇದೆ. ಅದು ಚಲಿಸುವ ಚಕ್ರವನ್ನೂ ಮತ್ತು ಬಿಗಿಗೋಸ್ಕರ ಸ್ಪ್ರಿಂಗನ್ನೂ ಹೊಂದಿರುತ್ತದೆ; ಚೆನ್ನಾಗಿ ನಡೆದರೆ ಉತ್ಪತ್ತಿಯೂ ಹೆಚ್ಚಾಗಬೇಕು. ನಾನು ಕ್ರಮವಾಗಿ ತಕಲಿಯ ಮೇಲೆ ಹತೋಟಿಯನ್ನು ಹೊಂದುತ್ತಿದೇನೆ. ನಿನ್ನ ತಕಲಿಯ ಮೇಲೆ ನನ್ನ ವೇಗ ಘಂಟೆಗೆ ೮೭ ಸುತ್ತುಗಳಷ್ಟು ಆಯಿತು. ಆದರೆ ನಾನು ಮೊದಲು ಉಕ್ಕಿನ ತಕಲಿ ಮೇಲೆ ಪ್ರಯತ್ನಿಸಬೇಕೆಂದು ವಿನೋಬಾ ಹೇಳುತ್ತಾನೆ; ಎರಡು ತಕಲಿಗಳನ್ನು ಕಳಿಸಿಯೂ ಇದ್ದಾನೆ. ನಾನು ಅದನ್ನು ಉಪಯೋಗಿಸಲು ಯತ್ನಿಸುತ್ತಿದೇನೆ. ನಾನು ನಿರೀಕ್ಷೆಮಾಡಿದ ಫಲಿತಾಂಶವಿನ್ನೂ ದೊರಕಿಲ್ಲ. ಆದರೆ ನಾನು ದಿನವೂ ನಂಬಿಕೆಯನ್ನು ಗಳಿಸಿಕೊಳ್ಳುತ್ತಿದೇನೆ. ಜಾಗ್ರತೆ ತಕಲಿಯ ಮೇಲೆ ಘಂಟೆಗೆ ೧೦೦ ಸುತ್ತುಗಳನ್ನು ತೆಗೆಯುವ ಶಕ್ತಿ ಬಂದೀತೆಂದು ಭರವಸೆ ಇದೆ.

ಪ್ರೀತಿ,

**ಬಾಪೂ**

ಪುನಶ್ಚ: ಬಿಹಾರ್ ರಾಟೆಯ ಮೇಲೆ ಪ್ಯಾರೇಲಾಲ್ ಚೆನ್ನಾಗಿ ಆರಂಭಮಾಡಿದನು. ಆದರೆ ಅದು ವಿಫಲವಾಯಿತು. ನಾನು ಇನ್ನೊಂದು

---

* ಕಾಕಾಸಾಹೇಬ್ ಕಾಲೇಲಕರ್.

† ಇದೊಂದು ಬಗೆಯ ಚರಕಾ.

ಗಾಂಡೀವವನ್ನು ಕೂಡಿಸಿದೆ. ಅದು ಯಾವ ತೊಂದರೆಯೂ ಇಲ್ಲದೆ ಚೆನ್ನಾಗಿ ಕೆಲಸಮಾಡಿತು. ಸೆರೆಮನೆಯ ಮೇಲ್ವಿಚಾರಕರ ಸೌಜನ್ಯದಿಂದ ಗಾಂಡೀವಕ್ಕೆ ಆವಶ್ಯಕವಾದ ಸುಧಾರಣೆಗಳನ್ನು ಮಾಡಿಸಿದೇನೆ. ಅದು ಚೆನ್ನಾಗಿ ಕೆಲಸ ಮಾಡುವ ಭರವಸೆ ಇದೆ. ಅದನ್ನು ಈಗತಾನೆ ಪ್ರಯೋಗ ಮಾಡಿದೇನೆ. ಆಹಾರದ ಪ್ರಯೋಗ ಮುಂದುವರಿಯುತ್ತಿದೆ.

ರಾತ್ರಿ ೮–೪೫
೧–೧೨–೧೯೩೦

ಬಾಪೂ

ಚಿ. ಮೀರಾ,

ನಿನ್ನ ಪತ್ರ ಸಕಾಲದಲ್ಲಿ ತಲಪಿತು. ನಿನ್ನಿಂದ ಯಾವ ಹೆಚ್ಚಿನ ಸುದ್ದಿಯೂ ಇಲ್ಲದಿರುವುದರಿಂದ ನೀನು ಪೂರ್ಣವಾಗಿ ಗುಣಮುಖಳಾಗಿದೀಯೆಂದು ಅರ್ಥಮಾಡಿಕೊಳ್ಳುತ್ತೇನೆ. ಪ್ರತಿಯೊಂದು ಸಲ ನೀನು ಕಾಯಿಲೆ ಬಿದ್ದಾಗಲೂ ಬಹಳ ಜಾಗ್ರತೆ ಗುಣಹೊಂದುತ್ತೀಯೆ. ಏಕೆಂದರೆ ಚಿಕಿತ್ಸೆ ಸ್ವಾಭಾವಿಕವಾದುದು. ಆದರೆ ಶರೀರಕ್ಕೆ ಪೂರ್ಣ ವಿಶ್ರಾಂತಿಯೂ ಮತ್ತು ಮನಸ್ಸಿನ ಭಾರವೂ ಇಳಿಯದೆಹೋದರೆ ಪ್ರತಿರೋಗವೂ ನಿಶ್ಶಕ್ತಿಯನ್ನುಂಟುಮಾಡುತ್ತದೆ. ಮನಸ್ಸಿನ ಮೇಲೆ ಹತೋಟಿಯನ್ನು ಇಟ್ಟುಕೊಳ್ಳುವುದು ಎಲ್ಲಕ್ಕಿಂತ ಬಹಳ ಕಠಿಣವಾದುದು. ಇದಕ್ಕೆ ಗೀತಾ ಅನುಷ್ಠಾನ ಶ್ರೇಷ್ಠ ಪರಿಹಾರ. ಮನಸ್ಸು ಪ್ರತಿಯೊಂದು ಸಲವೂ ತಪ್ಪಿದಾಗ ಅದು ಗೀತೆಯ ಅನುಷ್ಠಾನದ ವಿಫಲತೆಯನ್ನು ತೋರಿಸುತ್ತದೆ. ಒಳ್ಳೆಯ ವಾರ್ತೆಯಾಗಲೀ ಕೆಟ್ಟ ವಾರ್ತೆಯಾಗಲೀ ಬಾತಿನ ಬೆನ್ನಿನ ಮೇಲೆ ನೀರು ಹಾದುಹೋಗುವಂತೆ ಹೋಗಲಿ. ಅಂಥ ಯಾವುದನ್ನಾದರೂ ಕೇಳಿದಾಗ ಅದು ಆಗತ್ಯವೇ ಇಲ್ಲವೇ ಎಂಬುದನ್ನು ಪರೀಕ್ಷಿಸುವುದೇ ನಮ್ಮ ಕರ್ತವ್ಯ. ಅನಂತರ ಫಲಾಫಲಗಳನ್ನು ಕುರಿತು ಚಿಂತಿಸದೆ ಅನಾಸಕ್ತಿಯಿಂದ ನಾವು ಪ್ರಕೃತಿಯ ಸಾಧನವೋ ಎಂಬಂತೆ ಭಾವಿಸಿಕೊಂಡು ಕ್ರಿಯೆಮಾಡಬೇಕು. ಒಂದು ಕಾರ್ಯವಾಗಬೇಕಾದರೆ ಒಂದಕ್ಕಿಂತ ಹೆಚ್ಚು ಸಾಧನಗಳು ಬೇಕಾಗುತ್ತದೆಂಬುದನ್ನು ನಾವು ನೆನಪಿಗೆ ತಂದುಕೊಂಡರೆ ಈ ಅನಾಸಕ್ತಿ ತರ್ಕಬದ್ಧ ಆವಶ್ಯಕತೆಯಾಗಿ ಕಂಡುಬರುತ್ತದೆ. ‘ನಾನು

ಮಾಡಿದೆ' ಎಂದು ಹೇಳಿಕೊಳ್ಳಲು ಯಾರಿಗೆ ಧೈರ್ಯವಿದೆ? ಇದೆಲ್ಲ ನಿನಗೆ ಅರಿವಿದೆಯೆಂದು ನನಗೆ ಗೊತ್ತು. ಆದರೂ ಈ ಸತ್ಯವನ್ನು ನಿನಗೆ ಮನದಟ್ಟು ಮಾಡಿಕೊಡಲು ಯತ್ನಿಸಿದೇನೆ, ಅದು ನಿನ್ನ ಬುದ್ಧಿಯಿಂದ ಭಾವವನ್ನೂ ಪ್ರವೇಶಿಸಲೆಂದು. ಅದು ಬುದ್ಧಿಯಲ್ಲೇ ನಿಂತಿರುವವರೆಗೆ ಒಂದು ಹೆಣಭಾರ. ಬುದ್ಧಿ ಗ್ರಹಿಸಿದ ಯಾವ ಸತ್ಯವೇ ಆಗಲಿ, ಅದು ಕೂಡಲೇ ಹೃದಯವನ್ನು, ಎಂದರೆ, ಭಾವವನ್ನು ಹೊಗಬೇಕು. ಆ ರೀತಿ ಆಗದಿದ್ದರೆ ಅದೊಂದು ಗರ್ಭಸ್ರಾವದಂತಾಗುತ್ತದೆ. ಅನಂತರ ಬುದ್ಧಿಯಲ್ಲೇ ನಿಂತಿದ್ದು ಅಷ್ಟು ವಿಷವಸ್ತುವಾಗಿ ಪರಿಣಮಿಸುತ್ತದೆ. ಬುದ್ಧಿಯನ್ನು ವಿಷಮಯ ಮಾಡುವುದು ಶರೀರವನ್ನೆಲ್ಲ ವಿಷಮಯ ಮಾಡಬಲ್ಲದು. ಹೀಗೆ ಬುದ್ಧಿ ಎಂಬುದು ಕೇವಲ ಯಾವ ಒಂದು ವಾಹಕ ಸ್ಥಾನವಾಗಬೇಕೋ ಅದರ ಆವಶ್ಯಕತೆ ಕಂಡುಬರುತ್ತದೆ. ಯಾವುದೇ ವಿಷಯ ಅಲ್ಲಿಗೆ ತಲಪಲಿ ಅದು ತತ್‌ಕ್ಷಣ ಕ್ರಿಯೆಗಾಗಿ ಹೃದಯಕ್ಕೆ ಒಯ್ಯಲ್ಪಡುತ್ತದೆ, ಅಥವಾ ಅಲ್ಲಿಯೇ ತಿರಸ್ಕರಿಸಲ್ಪಟ್ಟು ಮುಂದಕ್ಕೆ ಒಯ್ಯಲ್ಪಡಲು ಯೋಗ್ಯವಲ್ಲವಾಗುತ್ತದೆ. ಬುದ್ಧಿ ಈ ಕಾರ್ಯವನ್ನು ಸರಿಯಾಗಿ ಮಾಡದಿದ್ದರೆ ಅದೇ ಕಾಯದಿಂದ ಉಂಟಾಗುವ ಎಲ್ಲ ಕೆಡಕುಗಳಿಗೂ ಕಾರಣವಾಗುತ್ತದಲ್ಲದೆ ಮಾನಸಿಕ ನಿಶ್ಯಕ್ತಿಗೂ ಕಾರಣವಾಗುತ್ತದೆ. ಬುದ್ಧಿ ತನ್ನ ಕಾರ್ಯವನ್ನು ಸುಮ್ಮನೆ ಮಾಡಿದರೂ ಅದರಿಂದ ಎಂದಿಗೂ ನಿಶ್ಯಕ್ತಿಗೆ ಕಾರಣವಿಲ್ಲ. ಆದುದರಿಂದ ನಾವು ರೋಗಪೀಡಿತರಾದರೆ ಅದಕ್ಕೆ ಆಹಾರದೋಷವೊಂದೇ ಕಾರಣವಲ್ಲ, ಬುದ್ಧಿಯೂ ಸರಿಯಾಗಿ ಕೆಲಸ ಮಾಡಿಲ್ಲವೆನ್ನಬೇಕು. ಗೀತೆಯ ಕರ್ತೃ ಇದನ್ನು ಸ್ಪಷ್ಟವಾಗಿ ಕಂಡುಕೊಂಡಿದ್ದ. ಜಗತ್ತಿನ ಎಲ್ಲ ವ್ಯಾಧಿಗಳಿಗೂ ಶ್ರೇಷ್ಠ ಪರಿಹಾರವನ್ನು ಸ್ಪಷ್ಟವಾದ ಭಾಷೆಯಲ್ಲಿ ಅರುಹಿದ. ಆದುದರಿಂದ ಯಾವುದೇ ವಿಷಯ ನಿನ್ನ ಮನಸ್ಸನ್ನಾವರಿಸಿದರೂ ನೀನು ಗೀತೆಯ ಈ ರಹಸ್ಯವನ್ನು ಕುರಿತು ಚಿಂತಿಸಿ, ಮಾನಸಿಕ ಹೊರೆಯನ್ನು ನೀಗಿಕೊಳ್ಳಬೇಕು.

ಪ್ರೀತಿ,

ಬಾಪೂ

ಚಿ. ಮೀರಾ, ಸಂಜೆ ೪–೩೦

ನೀನು ನನ್ನ ಆರೋಗ್ಯದ ಬಗೆಗೆ ವೃಥಾ ಆತಂಕಗೊಂಡಿರುವುದು ನಿನ್ನ ಪತ್ರದಿಂದ ಗೊತ್ತಾಗುತ್ತದೆ.

ಗುರುವಾರ ತೂಕ ನೋಡಿದಾಗ ೧–೩ ಪೌಂಡು ಹೆಚ್ಚಿದ್ದುದು ಕಂಡು ಬಂದಿತು. ಏಳು ದಿವಸಗಳಿಗೆ ಇದು ಬಹಳ ಹೆಚ್ಚು. ನನಗೆ ಯಾವ ನಿಶ್ಶಕ್ತಿಯೂ ಕಂಡುಬಂದಿಲ್ಲ. ಸಾಮಾನ್ಯವಾಗಿ ನನ್ನ ನಿಯಮದಂತೆ, ನಿಂತುಕೊಂಡೇ ತಕಲಿಯಿಂದ ಎರಡು ಘಂಟೆಗಳ ಕಾಲ ನೂಲುತ್ತೇನೆ. ಇದರಿಂದ ಏನೂ ಹೆಚ್ಚಿಗೆ ನಿಶ್ಶಕ್ತಿ ಕಂಡುಬರುವುದಿಲ್ಲ. ಈಗತಾನೆ ತಕಲಿಯಿಂದ ನೂಲುವುದನ್ನು ಮುಗಿಸಿ ಬರೆಯಲು ಕುಳಿತುಕೊಂಡಿದೇನೆ. ಹಿಂದಿನ ತಪ್ಪುಗಳನ್ನೆಲ್ಲ ಸರಿಪಡಿಸಿಕೊಳ್ಳುತ್ತಿದೇನೆ. ಚೆನ್ನಾಗಿ ಬೇಯಿಸಿದ ಆಹಾರ ತೆಗೆದುಕೊಳ್ಳುತ್ತಿದೇನೆ, ಎಂದರೆ, ಚಪಾತಿ ಮತ್ತು ತರಕಾರಿ ಇತ್ಯಾದಿ. ಚಪಾತಿಯಂತೂ ಎರಡು ಸಲ ಬೆಂದಿರುತ್ತದೆ. ಹಿಂದಿನ ಸಲ ನಾನು ಸೇವಿಸುತ್ತಿದ್ದುದೆಲ್ಲ ಹಸಿ ಆಹಾರವೇ ಆಗಿತ್ತು–ಧಾನ್ಯ, ಬೇಳೆ, ಸಹ. ಈ ಹಸಿ ಆಹಾರವನ್ನು ತೆಗೆದುಕೊಳ್ಳುವುದಕ್ಕೆ ಮುಂಚೆ ನಾನು ಯಾವ ಆಹಾರವನ್ನು ತೆಗೆದುಕೊಳ್ಳುತ್ತಿದ್ದನೋ ಅದನ್ನೆಲ್ಲ ಈಗ ತೆಗೆದುಕೊಳ್ಳುತ್ತಿದೇನೆ. ಒಂದೇ ವ್ಯತ್ಯಾಸವೆಂದರೆ ಗೋದಿಗೆ ಬದಲಾಗಿ ಬಾಜ್ರಿ ಅಥವಾ ಜೋಳವನ್ನು ಸೇವಿಸುತ್ತೇನೆ. ಇದರಿಂದ ಬಹುಶಃ ಉತ್ತಮವಾಗಬಹುದು. ಬಿಸಿನೀರು, ನಿಂಬೇ ರಸ ಮತ್ತು ಉಪ್ಪನ್ನು ಒಂದು ಸಲ ಮಾತ್ರ ತೆಗೆದುಕೊಳ್ಳುತ್ತೇನೆ. ಈಗ ಮೇಲೆ ಮೇಲೆ ಕಂಡುಬರುವ ಉತ್ತಮ ಸ್ಥಿತಿ ಹಾಗಿರಲಿ, ಕಾಲಪ್ರವೃತ್ತಿಯಲ್ಲಿ ಏನಾದರೂ ವ್ಯತ್ಯಾಸವಾದಲ್ಲಿ, ನಿಶ್ಶಕ್ತಿ ಒಂದೇ ಸಮನಾಗಿದ್ದಲ್ಲಿ, ಅಥವಾ ತೂಕ ಕಡಿಮೆಯಾದಲ್ಲಿ, ಅಥವಾ ಈ ಮೂರರಲ್ಲಿ ಯಾವುದೇ ಒಂದು ಅಂಶ ಕಂಡುಬಂದರೂ ಪುನಃ ಹಾಲನ್ನು ಉಪಯೋಗಿಸುತ್ತೇನೆ.* ಆದರೆ ಈಗ ನನ್ನ ಆರೋಗ್ಯ ಚೆನ್ನಾಗಿ ಕಂಡು ಬಂದಿರುವುದರಿಂದ ಹಾಲನ್ನು ತ್ಯಜಿಸಿ, ಬಾಜ್ರಿ ಅಥವಾ ಜವಾರಿ ಚಪಾತಿ

---

* ಇದರಿಂದ ಗಾಂಧೀಜೀ ಹಾಲನ್ನು ಸೇವಿಸುವುದನ್ನು ತ್ಯಜಿಸಿರಬೇಕೆಂದು ಗೊತ್ತಾಗುತ್ತದೆ.

ಗಳನ್ನು ಉಪಯೋಗಿಸುವುದರಿಂದ ಬಂದಿರುವ ಆನಂದವನ್ನು ನಾನು ಕಳೆದುಕೊಳ್ಳಲಾರೆ. ಇನ್ನೂ ವಿಶೇಷವೆಂದರೆ ಚಪಾತಿಗಳು ನನಗೆ ರುಚಿಕರವಾಗಿ ಕಂಡುಬಂದಿವೆ. ಈ ವಿವರಗಳಿಂದ ನಿನಗೂ ಗೆಳೆಯರಿಗೂ ನನ್ನ ಆರೋಗ್ಯದ ಬಗೆಗೆ ತೃಪ್ತಿ ಕಂಡುಬಂದು ನೀವು ಭವಿಷ್ಯದ ವಿಷಯವಾಗಿ ಆತಂಕವಿಲ್ಲದೆ ಇರುವಿರೆಂದು ಭಾವಿಸುತ್ತೇನೆ.

ನಿನ್ನ ಮಟ್ಟಿಗೆ ಹೇಳಬೇಕಾದರೆ, ದಿನವೂ ಸೇವಿಸಬೇಕಾದ ಆಹಾರಾಂಶಗಳ ಬಗೆಗೆ ಎಚ್ಚರಿಕೆ ಆವಶ್ಯಕವಾದರೂ, ನಿನ್ನ ತೊಂದರೆಯೆಲ್ಲ ಮನಸ್ಸಿನಿಂದಲೇ ಜನಿಸಿದುದು ಎಂದು ನನ್ನ ಅಭಿಪ್ರಾಯ. ಮನಸ್ಸಿನ ಮೇಲೆ ಹಾಕಿದ ಒತ್ತಡ ತತ್‌ಕ್ಷಣ ನಿನ್ನ ಶರೀರದ ಮೇಲೂ ಕಂಡುಬರುತ್ತದೆ. ಈ ಆತಂಕಮನೋವೃತ್ತಿಯನ್ನು ನೀನು ಬಿಟ್ಟುಬಿಡಬೇಕು. ಅಲ್ಪ ವಿಷಯಗಳ ಬಗೆಗೂ ಎಚ್ಚರಿಕೆಯಿಂದಿರು. ಬಯಲಲ್ಲಿ ಕಾಣುವ ಲಿಲ್ಲೀ ಹೂಗಳನ್ನು ನೋಡು, ಅವು ದುಡಿಯುವುದಿಲ್ಲ, ಅವು ನೂಲುವುದಿಲ್ಲ; ಆದರೂ, ಸಾಲೋಮನ್ನನ ವೈಭವವನ್ನು ಮೀರಿದ ವೈಭವ ಅವುಗಳದು. ಇದನ್ನು ನಾನು ಸರಿಯಾಗಿ ಉದಹರಿಸಿದೆನೋ ಹೇಗೋ ಕಾಣೆ. ಹೇಗಿದ್ದರೂ ಲಿಲ್ಲೀ ಹೂಗಳು ದುಡಿಯುವುದೂ ಇಲ್ಲ, ನೂಲುವುದೂ ಇಲ್ಲ, ಎಂಬಂತೆ ಕಾಣುತ್ತವೆ. ಅವು ಎರಡನ್ನೂ ಮಾಡುತ್ತವೆ, ಅತ್ಯಂತ ಸಹಜವಾಗಿ. ಇದನ್ನು ನಾವು ಗಮನಿಸುವುದಿಲ್ಲ. ಅವು ದುಡಿಯದಿದ್ದರೆ ಲಯವಾಗುತ್ತವೆ, ಬಾಡಿಹೋಗುತ್ತವೆ. ಆದರೆ ಅವುಗಳಿಗೆ ನಮಗಿರುವಂಥ ಅಹಂಭಾವವಾಗಲಿ, ಆಸಕ್ತಿಯಾಗಲಿ, ಇಷ್ಟಾನಿಷ್ಟವಾಗಲಿ ಇಲ್ಲ. ನಾವೂ ಅವುಗಳಂತೆ ಅನಾಸಕ್ತಿಯಿಂದ ದುಡಿದರೆ, ನಮ್ಮ ದುಡಿಮೆಯ ಭಾರ ನಮಗೆ ಗೋಚರವಾಗುವುದಿಲ್ಲ. ಅದು ನಮ್ಮ ಶರೀರಕ್ಕೆ ಪ್ರತಿಕೂಲವಾಗಿ ಪರಿಣಮಿಸುವುದಿಲ್ಲ. ಈಗ ೭–೩೦ರ ಸಮಯ. ಇಂಥ ಸೌಭಾಗ್ಯಸ್ಥಿತಿಯನ್ನು ಪಡೆಯಲು ನಾನು ಮತ್ತು ನಾವೆಲ್ಲರೂ ಜ್ಞಾನಪೂರ್ವಕವಾಗಿ ಯತ್ನಿಸಬೇಕು. ಇಲ್ಲವಾದರೆ, ನಮ್ಮೆಲ್ಲರ ಗೀತಾಧ್ಯಯನ ಎನ್ನುವುದು ಕೇವಲ ವ್ಯರ್ಥ.

ಪ್ರೈಮಸ್ ಸ್ಟೌವನ್ನು ಉಪಯೋಗಿಸುವಾಗ ನಿನ್ನನ್ನು ಸುಟ್ಟುಕೊಳ್ಳದಂತೆ ಎಚ್ಚರವಾಗಿರು. ಇದನ್ನು ಉಪಯೋಗಿಸುವಾಗ ಗುಜರಾತೀ ಹೆಂಗಸರು ಹೇಗೆ ಸುಟ್ಟುಕೊಳ್ಳುವರೆಂಬುದನ್ನು ನೀನು ಕೇಳಿರಬೇಕು.

ಅವರ ಸೀರೆ ಹಗುರವಾಗಿರುತ್ತದೆ. ಸ್ಟೌವನ್ನು ಹಚ್ಚುವ ಸಮಯದಲ್ಲಿ ಅದೂ ಹತ್ತಿಕೊಳ್ಳುವ ಸಂಭವವುಂಟು. ಅದು ನೆಲದ ಮೇಲೆ ಇರುತ್ತದೆ. ಅವರು ಉರಿಯುತ್ತಿರುವ ಜ್ವಾಲೆಯ ಮೇಲೆ ಬಗ್ಗಬೇಕು. ಆಗ ಸುಲಭವಾಗಿ ಹತ್ತಿಕೊಂಡುಬಿಡುತ್ತದೆ. ಆದುದರಿಂದ ಅದನ್ನು ಎತ್ತರವಾದ ಲೋಹದ ಮಣೆಯ ಮೇಲೆ ಇಡುವುದು ಜಾಣತನ. ಆಗಲೂ ನಿನ್ನ ಮೊದಲೇ ಚಿಕ್ಕದಾಗಿರುವ ಕೊಠಡಿಯಲ್ಲಿಟ್ಟಿರುವ ಜಾಗ ಅಷ್ಟೇ ಕಡಿಮೆ. ಏನಾದರೂ ಆಗಲಿ, ನನ್ನ ಎಚ್ಚರಿಕೆಯನ್ನಂತೂ ಕೊಟ್ಟಿದೇನೆ. ಇದರಿಂದ ನಿನಗೆ ಯಾವ ಮುನ್ನೆಚ್ಚರಿಕೆ ಸರಿ ಎಂದು ಕಾಣುತ್ತದೋ ಅದನ್ನು ತೆಗೆದುಕೊ.

ಗೀತೆಯ ನನ್ನ ಅನುವಾದಕ್ಕೆ ಮುನ್ನುಡಿಯ ಮೊದಲನೆಯ ಭಾಗವನ್ನು ಈಗತಾನೆ ಮುಗಿಸಿದೇನೆ. ಪ್ರತಿದಿನವೂ ಕೊನೆಯ ಪಕ್ಷ ಒಂದು ವಾಕ್ಯವೃಂದದಂತೆ ಬರೆಯಲು ಸಾಧ್ಯವಾದೀತೆಂದು ನಂಬಿದೇನೆ. ಇದು ಯಶಸ್ವಿಯಾದರೆ ಮುನ್ನುಡಿ ಬಹುದೀರ್ಘಕಾಲ ಹಿಡಿಯಲಾರದು.

ನೀನು ಸುರೇಂದ್ರನನ್ನು* ನೋಡಿಕೊಳ್ಳುತ್ತಿರುವುದು ನನಗೆ ಹರ್ಷ. ಅವನು ತನ್ನ ಶರೀರದ ಕಡೆ ಸ್ವಲ್ಪವೂ ಲಕ್ಷ್ಯವೀಯದಿರುವುದು ಮಹಾ ಪಾಪಕರ. ಸಂತ ಫ್ರಾನ್ಸಿಸ್ ಈ ದೇಹವನ್ನು 'ಸೋದರ ಗಾರ್ದಭ' ಎಂದು ಕರೆದರೂ ಅವನ್ನು ಎಚ್ಚರಿಕೆಯಿಂದ ನೋಡಿಕೊಳ್ಳುತ್ತಿದ್ದನು. ಗಾರ್ದಭ ಅತ್ಯಂತ ಉಪಯುಕ್ತವೂ ತಾಳ್ಮೆಯುತವೂ ಆದ ಪ್ರಾಣಿ. ಈ ಸೋದರ ಗಾರ್ದಭ ಚೆನ್ನಾಗಿ ಭಾವಿಸಿದರೆ, ಅತಿಲಾಲನೆಗೆ ಗುರಿಯಾಗದೆ ಇದ್ದರೆ, ನಿರ್ಲಕ್ಷ್ಯಭಾವದಿಂದ ಕಾಣದೆ ಇದ್ದರೆ, ಎಷ್ಟೋ ಉಪಯುಕ್ತವಾದೀತು.

ಈಗ 'ಪ್ರಾತಃ ಸ್ಮರಾಮಿ'ಯ ಮೊದಲನೆ ಶ್ಲೋಕದ ಭಾಷಾಂತರ. 'ಹೃದಯದಲ್ಲಿ ಸಂಸ್ಫುರಿಸುವ ಆತ್ಮತತ್ತ್ವವೂ ಸಚ್ಚಿತ್ಸುಖಸ್ವರೂಪವೂ ಪರಮಹಂಸರಿಗೆ ತುರೀಯಾವಸ್ಥೆಯಲ್ಲಿ ಗೋಚರಿಸುವಂಥದೂ ಆದ

* ಒಬ್ಬ ಸತ್ಯಾಗ್ರಹಿ.

ವಸ್ತುವನ್ನು ನಾನು ಪ್ರತಿದಿನವೂ ಪ್ರಾತಃಕಾಲದಲ್ಲಿ ಸ್ಮರಣೆ ಮಾಡುತ್ತೇನೆ. ನಾನು ಸ್ವಪ್ನ, ಜಾಗರ, ಸುಷುಪ್ತಿ ಈ ಮೂರು ಸ್ಥಿತಿಗಳಲ್ಲಿಯೂ ನಿತ್ಯರಾಗಿರುವ ಆ ನಿಷ್ಕಲಂಕ ಬ್ರಹ್ಮವಸ್ತುವಲ್ಲವೆ ಈ ಪಂಚಭೂತಾತ್ಮಕವಾದ (ಭೂಮಿ, ನೀರು, ಆಕಾಶ, ಬೆಳಕು ಮತ್ತು ವಾಯು) ದೇಹವಲ್ಲ.

ಮೊದಲನೆಯ ಶ್ಲೋಕವೇ ತಿದ್ದುಪಾಟಿಗೆ ಗುರಿಯಾಗಬೇಕಾಯಿತಲ್ಲಾ ಎಂದು ವ್ಯಥೆ. ನಾನು ವಿಚಾರಮಾಡಿದಷ್ಟೂ ಅದರ ಅರ್ಥ ಸ್ಪಷ್ಟವಾಗುತ್ತದೆ. ಆದುದರಿಂದ ಭಾಷಾಂತರ ಎಷ್ಟು ಸಲ ತಿದ್ದುಪಾಟಾದರೂ ನಾನು ವ್ಯಥೆಪಡುವುದಿಲ್ಲ. ಹಿಂದೆ ಈ ಶ್ಲೋಕವನ್ನು ಪಠಿಸುವಾಗ ಅದರಲ್ಲಿರುವ ಭಾವ ಅಹಂಭಾವದ್ದೆಂದು ನಾನು ತಲ್ಲಣಗೊಳ್ಳುತ್ತಿದ್ದೆ. ಆದರೆ ಅದರ ಅರ್ಥ ಸ್ಪಷ್ಟವಾದರೆ ದಿನವೂ ಪ್ರಾತಃಕಾಲ ಪಠಿಸಲು ಅದೇ ಅತ್ಯಂತ ಶ್ರೇಷ್ಠವಾದ ಭಾವನೆಯೆಂದು ನನಗೆ ಗೋಚರಿಸಿತು. ನಾವು ಜಾಗರ, ಸ್ವಪ್ನ, ಸುಷುಪ್ತಿ ಇವುಗಳಿಗೆ ಗುರಿಯಾಗಿರುವ ನಾಶವಂತ ದೇಹವಲ್ಲ; ಅದಕ್ಕೆ ಆಧಾರವಾಗಿರುವ, ಕೋಟಿಕೋಟಿ ದೇಹಗಳಲ್ಲಿ ಸಾಕ್ಷೀರೂಪವಾಗಿ ಅಂತರ್ಯಾಮಿಯಾಗುವ, ಆತ್ಮತತ್ತ್ವ ಎಂಬ ಘೋಷಣೆ ಅದು. ಶ್ಲೋಕದ ಮೊದಲಿನ ಭಾಗವು ಆ ಆತ್ಮತತ್ತ್ವದ ಅಸ್ತಿತ್ವವನ್ನು ನಮಗೆ ನೆನಪು ಮಾಡಿಕೊಟ್ಟರೆ ಅದರ ಎರಡನೆಯ ಭಾಗವು ನಾವೇ ಆ ಆತ್ಮತತ್ತ್ವವೆಂಬುದನ್ನು ಮನವಟ್ಟುಮಾಡಿಕೊಡುತ್ತದೆ. ಬ್ರಹ್ಮವಸ್ತುವಿನ ವಿವರಣೆಯೂ ಯುಕ್ತವಾದುದಾಗಿದೆ. ಅದು ಒಂದೇ ಸತ್ಯವಸ್ತು, ಉಳಿದುವೆಲ್ಲ ಅಸತ್ಯ; ಅದು ಚಿತ್, ಎಂದರೆ ಜ್ಞಾನಮಯ; ಅದು ಆನಂದಮಯ; ' ಸಚ್ಚಿತ್ಸುಖಂ '. ಇನ್ನುಳಿದ ಭಾಗ ಸುಲಭವಾಗಿ ಅರ್ಥವಾಗುತ್ತದೆ. ಈ ಭಾಷಾಂತರವನ್ನು ಲಾಲ್ಜೀಭಾಯಿ* ಆಗಲೇ ಮಾಡಿರುವ ಭಾಷಾಂತರದೊಂದಿಗೆ ಹೋಲಿಸಿನೋಡು. ಏನಾದರೂ ಪ್ರಧಾನ ವ್ಯತ್ಯಾಸ ಕಂಡುಬಂದರೆ ಅವರ ಭಾಷಾಂತರವನ್ನೇ ಇಟ್ಟುಕೊಳ್ಳೋಣ. ಪಾಂಡಿತ್ಯದಲ್ಲಿ ನಾನು ಅವರ ಮೇಲ್ಮೆಯನ್ನು ಅಂಗೀಕರಿಸುತ್ತೇನೆ. ದೇವರ ಇಚ್ಛೆಯಿದ್ದರೆ, ಪ್ರತಿವಾರವೂ ಈ ಬಗೆಯ ಕೊಡುಗೆ

* ವಾಲ್ಜೀ ಗೋವಿಂದಜೀ ದೇಸಾಯಿ.

ಯನ್ನು ನೀನು ನನ್ನಿಂದ ನಿರೀಕ್ಷಿಸಬಹುದು. ಇದೋ, ಕಹಳೆ ಬಾರಿಸುತ್ತಿದೆ; ೯ ಘಂಟೆಯ ಸೂಚನೆಯನ್ನು ನನಗೆ ತರುತ್ತಿದೆ.

ಯರವಡಾ ಮಂದಿರ ಪ್ರೀತಿ,
೨-೧೨-೧೯೩೦ **ಬಾಪೂ**

ಚಿ. ಮೀರಾ,

ಇನ್ನೂ ಆಶ್ರಮದ ಅಂಚೆ ಬಾರದಿದ್ದರೂ ನನ್ನ ಕಾಲದ ಮೇಲಿನ ಒತ್ತಡವನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಈಗಲೇ ಪತ್ರಲೇಖನ ಆರಂಭಿಸಿದೇನೆ. ಇದು ನಾಲ್ಕನೆಯ ಶ್ಲೋಕದ ಭಾಷಾಂತರ: 'ಓ ಭೂದೇವಿ, ಸಾಗರವೇ ನಿನ್ನ ಉಡುಪು, ಪರ್ವತಗಳೇ ನಿನ್ನ ಸ್ತನಮಂಡಲ, ನೀನು ವಿಷ್ಣುವಿನ ಪತ್ನಿ, ನಿನಗೆ ನಮಸ್ಕರಿಸುತ್ತೇನೆ. ನನ್ನ ಪಾದಸ್ಪರ್ಶವನ್ನು ಕ್ಷಮಿಸು.'

ಭೂಮಿಗೆ ನಮಸ್ಕರಿಸುವುದರಿಂದ ನಾವು ಭೂಮಿಯಂತೆಯೇ ನಮ್ರತೆಯಿಂದ ಇರಬೇಕೆಂಬ ಪಾಠ ಕಲಿಯುತ್ತೇವೆ. ಅದನ್ನು ತುಳಿಯುವವರನ್ನೂ ಅದು ರಕ್ಷಿಸುತ್ತದೆ. ಆದುದರಿಂದಲೇ ಭೂತಾಯಿ ನಿಜವಾಗಿ ವಿಷ್ಣುವಿನ ಪತ್ನಿ. ಈ ಭಾವ ಸತ್ಯಕ್ಕೆ ವಿರೋಧವೆಂದು ನನಗೆ ಅನ್ನಿಸುವುದಿಲ್ಲ. ಅದಕ್ಕೆ ಪ್ರತಿಯಾಗಿ ಅತ್ಯಂತ ಸುಂದರವಾದುದು; ಅದು ದೇವರು ಸರ್ವಾಂತರ್ಯಾಮಿ ಎಂಬುದರೊಂದಿಗೆ ಪೂರ್ಣವಾಗಿ ಹೊಂದಿಕೊಳ್ಳುತ್ತದೆ. ಭಗವಂತನ ದೃಷ್ಟಿಯಿಂದ ಜೀವರಹಿತವಾದುದು ಯಾವುದೂ ಇಲ್ಲ. ನಾವು ಪೃಥ್ವಿಯಿಂದ ಬಂದವರಾದುದರಿಂದ ಪಾರ್ಥಿವರು. ಪೃಥ್ವಿ ಇಲ್ಲದೆ ಹೋದರೆ ನಾವೂ ಇರಲಾರೆವು. ಪೃಥ್ವಿಯ ಮೂಲಕವಾಗಿ ನನಗೆ ಭಗವಂತನ ಸಾನ್ನಿಧ್ಯ ಸಮೀಪವಾಗುತ್ತದೆ. ಭೂಮಿಗೆ ನಮಸ್ಕರಿಸುವುದರಿಂದ ಭಗವಂತನಿಗೆ ನಾನು ಸಲ್ಲಿಸಬೇಕಾದ ಕೃತಜ್ಞತೆಯು ನೆನಪು ಬರುತ್ತದೆ. ಭೂತಾಯಿಗೆ ನಾನು ಯೋಗ್ಯ ಮಗನೆಂದು ಕಂಡುಬಂದರೆ ಅದರಿಂದ ಹರ್ಷಿಸುತ್ತೇನಲ್ಲದೆ ಮತ್ತೆ ಧೂಳಿನಂತೆ ಭಾವಿಸಿಕೊಂಡು ಮಾನವರಲ್ಲಿ ಅತ್ಯಂತ ಹೀನರೆನಿಸಿದವರೊಂದಿಗೆ ನನ್ನ ಸಂಬಂಧ ಬೆಳೆಸಿ

ಕೊಳ್ಳುವ ಆನಂದಹೊಂದುವುದರ ಜೊತೆಗೆ ಸೃಷ್ಟಿಯ ಅತ್ಯಂತ ಕ್ಷುದ್ರ ತಮವಾದುದರೊಂದಿಗೂ ನನ್ನ ಸಂಬಂಧವನ್ನು ಬೆಳೆಸಲೆಳಸುತ್ತೇನೆ. ಏಕೆಂದರೆ ಅವೂ ನಾನೂ ಒಂದೇ ಗತಿಯನ್ನು ಹೊಂದತಕ್ಕವರಾಗಿದೇವೆ —ಎಂದಿದ್ದರೂ ಮಣ್ಣುಪಾಲಾಗುವುದೇ ಅದು. ಭೂಮಿಗೆ ಸಂಬಂಧವಿಲ್ಲ ದವರು ಪರಿಗಣಿಸಲ್ಪಟ್ಟಿರುವಂತೆ ನಾನೂ ಅವಿನಾಶಿಯೆಂದು ಭಾವಿಸಿ ಕೊಳ್ಳುತ್ತೇನೆ. ಅತ್ಯಂತ ಹೀನ ಜೀವವೂ ಅಥವಾ ಸೃಷ್ಟಿಯ ವಸ್ತುವೂ ನನ್ನ ಆತ್ಮದಂತೆ ಅವಿನಾಶಿಯೇ.

ಈಗ ನನಗೆ ಬಂದಿರುವ ಅತಿಸಾರ ನಿಜವಾಗಿಯೂ ಒಳ್ಳೆಯದನ್ನೇ ಮಾಡಿದೆ. ನನಗೆ ಯಾವ ಬಗೆಯ ನೋವೂ ಇಲ್ಲ. ನನ್ನ ಕೆಲಸಗಳಿಗೆ ಅಡ್ಡಿಬಂದಿಲ್ಲ. ಆದರೂ ಅದು ನನಗೆ ಅನೇಕ ಪಾಠಗಳನ್ನು ಕಲಿಸಿದೆ. ನಾನು ಒಳ್ಳೆ ಆಸೆಯಿಂದ ಆಹಾರ ಸೇವಿಸುವಂತಾಗಿದೆ. ಬಾಜ್ರಿ ಮತ್ತು ಜವಾರಿ ನನಗೆ ಹೊಸ ಆಹಾರವಸ್ತುಗಳು. ಅವುಗಳನ್ನು ನಾನು ಮಿತವಾಗಿ ಉಪಯೋಗಿಸಬೇಕಾಗಿತ್ತು. ಕೆಲವು ವೇಳೆ ತ್ಯಜಿಸಬೇಕಾಗಿತ್ತು. ದಿನಕ್ಕೆ ಒಂದು ಭಕರಿಯೂ ನನಗೆ ಹೆಚ್ಚೆನಿಸುತ್ತದೆ. ಆದರೆ ನಾನು ಆ ರೀತಿ ಮಾಡಲಿಲ್ಲ. ನಾನು ಕಳೆದುಕೊಂಡಿದ್ದ ತೂಕವನ್ನು ಜಾಗ್ರತೆ ಕೂಡಿಸಿ ಕೊಳ್ಳುವೆನೆಂದು ಭಾವಿಸಿದೆ. ನನ್ನ ಮಿತಿಗೆ ತಕ್ಕಂತೆ ನಾನು ಎಷ್ಟನ್ನೇ ತಿನ್ನಲಿ ಪೂರ್ಣ ತೃಪ್ತಿಯಾಯಿತು ಎಂಬುದೇ ಇಲ್ಲ. ಬೆಳಗ್ಗೆ ಏಳುವಾಗಲೇ ಬರೀ ಹೊಟ್ಟೆ. ಆದುದರಿಂದ ನಾನು ಯಾವಾಗಲೂ ತಪ್ಪು ಮಾಡಿಯೇ ಕಲಿಯುತ್ತೇನೆ. ಆಗ ನನಗೆ ಎಲ್ಲವೂ ವಾಸ್ತವವಾಗಿ ರುಚಿಕರವಾಗಿರು ತ್ತದೆ. ನನ್ನ ಜೊತೆಯ ಬಂದಿಗಳೊಡನೆ ಸಮಾನತೆಯನ್ನು ಅನುಭವಿಸುವ ದೃಷ್ಟಿಯಿಂದ ಬಾಜ್ರಿ ಮತ್ತು ಜವಾರೀ ಸೇವಿಸಲು ಆರಂಭಿಸಿದೆ. ಇದರ ಭಕರಿಗಳು ನನಗೆ ನಿಜವಾಗಿಯೂ ರುಚಿಕರವಾಗಿದ್ದುವು. ಇಂಥ ಸಂದರ್ಭ ಗಳಲ್ಲಿ ಮಿತವಾಗಿ ತಿನ್ನುವುದು ಪ್ರಯಾಸವೇ ಸರಿ. ಆಗಾಗ ಉಪವಾಸ ಮಾಡುವುದು, ಕೊನೆಯ ಪಕ್ಷ ಒಂದು ತಿಂಗಳಿಗೊಮ್ಮೆಯಾದರೂ ಉಪವಾಸ ಮಾಡುವುದು ಕಡಿಮೆ ತೂಕವಿರುವವರಿಗೂ ಒಳ್ಳೆಯದೆ. ಆದರೆ ಈ ಮಿತಿಮೀರಿದ ಪರಿಸ್ಥಿತಿಯನ್ನು ನಾನು ಹತೋಟಿಗೆ ತಂದು ಕೊಂಡಿದೇನೆಂದು ಹೇಳಿಕೊಳ್ಳಬಹುದೋ ಹೇಗೋ. ನನ್ನ ಪ್ರಯೋಗ

ವನ್ನು ನಿಲ್ಲಿಸುತ್ತಿಲ್ಲ, ಆವಶ್ಯಕವೆನಿಸಿದರೆ ಕಾಲಕಾಲಕ್ಕೆ ಬದಲಾಯಿಸುತ್ತಿದೇನೆ. ನಿನಗೆ ಗೊತ್ತಿರುವಂತೆ ನಿನ್ನೆಯ ದಿನ ಮೊಸರನ್ನು ಸೇವಿಸಿದೆ. ಎಲ್ಲ ಸರಿಯಾಗಿ ಕಂಡುಬಂದುದರಿಂದ ೧೧ ಘಂಟೆಗೆ ಎರಡು ಸಲ ಬೇಯಿಸಿ ಚೆನ್ನಾಗಿ ಚೂರ್ಣಿಸಿದ ಬಾದಾಮಿಯನ್ನೂ ನೆನೆಸಿದ ದ್ರಾಕ್ಷಿಯನ್ನೂ ತೆಗೆದುಕೊಂಡೆ. ಇದು ಇಂದಿನ ಪರಿಸ್ಥಿತಿ. ಇದು ಆರು ದಿವಸಗಳ ತರುವಾಯ ಅಂಚೆಗೆ ಹಾಕಲ್ಪಡುತ್ತದೆ. ಈ ಪತ್ರದ ಮೂಲಕವೋ ಅಥವಾ ಸಾಮಾನ್ಯ ಪತ್ರದ ಮೂಲಕವೋ ಹೆಚ್ಚಿನ ವಿವರಗಳು ನಿನಗೆ ಗೊತ್ತಾಗುತ್ತವೆ. ಈ ವಿವರಗಳನ್ನೆಲ್ಲ ಕೊಡುವ ಉದ್ದೇಶ, ನೀನೂ ಇತರರೂ ಆತಂಕವಿಲ್ಲದೆ ಇರುವುದಕ್ಕೋಸ್ಕರ. ನನ್ನ ಆರೋಗ್ಯ ಸ್ವಲ್ಪ ಕೆಟ್ಟಿದೆಯೆಂದು ನಿಮಗೆ ತಿಳಿದುಬಂದರೂ ನೀವು ಅದಕ್ಕಿಂತ ಹೆಚ್ಚಾಗಿ ತವಕಪಡುತ್ತೀರಿ. ಆಹಾರ ಪ್ರಯೋಗವನ್ನು ಪೂರ್ಣವಾಗಿ ನಾನು ಬಿಡುವುದಾದರೆ ಅದರಿಂದ ನನಗೆ ಬಹಳ ಕೆಡಕಾಗುತ್ತದೆ. ಆದುದರಿಂದ ಅದು ನನ್ನ ಅನ್ವೇಷಣೆಯ ಒಂದು ಭಾಗ. ಆದರೆ ಕೆಡಕು ಪ್ರಯೋಗದಲ್ಲಿಲ್ಲ, ಅದು ನನ್ನಲ್ಲೇ ಇದೆ. ನನ್ನ ಆಹಾರವನ್ನು ಔಷಧದ ರೀತಿಯಲ್ಲಿ ಶುದ್ಧವಾಗಿಯೂ ಸರಳವಾಗಿಯೂ ತೆಗೆದುಕೊಳ್ಳುವ ಕಲೆಯನ್ನು ನಾನಿನ್ನೂ ಕಲಿತಿಲ್ಲ. ಇದಕ್ಕೆ ನಾಲಗೆಯ ಮೇಲೆ ಪೂರ್ಣ ಸಂಯಮ ಆವಶ್ಯಕ. ನನಗೂ ಅದಕ್ಕೂ ಇನ್ನೂ ಎಷ್ಟೋ ದೂರ. ಅಭ್ಯಾಸ ಮಾಡಿದರೆ ಹಾಲನ್ನು ಬಿಡುವುದು ಸುಲಭ ಎಂದು ನನ್ನ ನಂಬಿಕೆ. ಅದು ಆರೋಗ್ಯವಂತ ಮಾನವನ ಆಹಾರವಲ್ಲ ಎಂಬುದರ ಬಗೆಗೆ ನನಗೆ ಲೇಶಮಾತ್ರವೂ ಸಂಶಯವಿಲ್ಲ. ಅದಿಲ್ಲದೆ ಆರು ವರ್ಷಗಳು ಆರೋಗ್ಯದಿಂದ ಇದೇನೆ. ನನ್ನ ತಪ್ಪಿನಿಂದಲೇ ನನ್ನ ಆರೋಗ್ಯ ಕೆಟ್ಟಿತ್ತು. ಆ ತಪ್ಪನ್ನು ಸರಿಪಡಿಸುವುದಕ್ಕೆ ನನ್ನ ಪ್ರಾಣವನ್ನೇ ಬಿಡುವುದರ ಬದಲು, ಪುನಃಪುನಃ ಹಾಲನ್ನು ಸೇವಿಸಿದೇನೆ; ಅದನ್ನು ಬಿಡಲು ಸಾಧ್ಯವಾದೀತೆಂಬ ನಂಬಿಕೆಯಿಂದ ಈ ಹೋರಾಟ ಮುಂದುವರಿಯಲೇಬೇಕು. ಪ್ರತಿಯೊಂದು ಸಲ ಸೋಲನ್ನು ಅನುಭವಿಸಿದಾಗಲೂ ನನ್ನ ಅಹಂಭಾವ ಹೋಗುತ್ತದೆ; ನಾನು ಶುದ್ಧನಾಗುತ್ತೇನೆ; ಹೊಸ ದೃಷ್ಟಿಯನ್ನು ಹೊಂದುತ್ತೇನೆ. ಸೋಲಿನಿಂದ ಹೋರಾಟಕ್ಕೆ ಹೆಚ್ಚು ಪ್ರೇರೇಪಣೆ ಬರುತ್ತದೆ. ಅದನ್ನು ಮುಂದುವರಿಸುವುದರಿಂದ ನನಗೆ

ಶಾಂತಿ ಬರುತ್ತದೆ. ಸಿವಿಲ್ ಸರ್ಜನ್ ಕೆ. ಸ್ಟೀಲ್ ಹದಿನೈದು ದಿನಕ್ಕೊಮ್ಮೆ ನನ್ನನ್ನು ಭೇಟಿಮಾಡುತ್ತಾರೆ; ಮೇಜರ್ ಮಾರ್ಟಿನ್ ನಿನ್ನೆ ಬಂದಿದ್ದರು. ಅವರು ನನ್ನನ್ನು ಕಂಡ ಕೂಡಲೇ ನನ್ನ ಆರೋಗ್ಯ ಎಂದಿಗಿಂತ ಚೆನ್ನಾಗಿದೆ ಎಂದು ನುಡಿದರು. ಇದು ಮೂರು ದಿವಸಗಳ ಉಪವಾಸದ ತರುವಾಯ ಇದ್ದ ಸ್ಥಿತಿ. ಅವರು ನುಡಿದುದು ನಿಜ. ಇಂಥ ಉತ್ಕಟ ಪರಿಸ್ಥಿತಿಯಲ್ಲೂ ನನಗೆ ಕೆಡುಕಾಗಿದೆಯೆಂದು ಕಂಡುಬಂದಿಲ್ಲ. ಏನೇ ಆಗಲಿ, ಅತ್ಯಂತ ಸೂಕ್ಷ್ಮ ವಿಚಾರಕ್ಕೂ ಎಚ್ಚರದಿಂದಿರು.

೧೨-೧-೧೯೩೧

೭ರಂದು ನಿಲ್ಲಿಸಿದ ಪತ್ರವನ್ನು ಈಗ ಮುಂದುವರಿಸುತ್ತಿದೇನೆ. ನನ್ನ ಆರೋಗ್ಯ ಬಹಳ ಚೆನ್ನಾಗಿ ಇದ್ದಂತಿದೆ. ಕಾಲಪ್ರವೃತ್ತಿ ಎಂದಿನಂತೆ ಪುನಃ ಕ್ರಮಬದ್ಧವಾಗಿದೆ. ನನ್ನ ಬೆಳಗಿನ ಆಹಾರ ನೀರಿನಲ್ಲಿ ಕರಗಿಸಿದ ಬಾದಾಮಿ ಚೂರ್ಣ ಮತ್ತು ಖರ್ಜೂರ; ಮಧ್ಯಾಹ್ನದ ವೇಳೆ, ಮೊಸರು ಮತ್ತು ಖರ್ಜೂರ; ಸಾಯಂಕಾಲದ ವೇಳೆ ಪುನಃ ನೀರಿನಲ್ಲಿ ಕರಗಿಸಿದ ಬಾದಾಮಿ ಚೂರ್ಣ, ಬಿಸಿನೀರು, ನಿಂಬೆರಸ ಮತ್ತು ಲವಣ—೭-೩೦ಕ್ಕೆ; ತಣ್ಣೀರು, ನಿಂಬೆರಸ ಮತ್ತು ಲವಣ—೧-೩೦ಕ್ಕೆ........ಇದರಿಂದ ಬರೆಯು ಬೇಕಾದುದು ಏನೂ ಇಲ್ಲ. ಇದನ್ನೆಲ್ಲ ಪ್ರಕಟಿಸಬೇಡವೆಂದು ನಿನ್ನನ್ನು ಪುನಃ ಎಚ್ಚರಿಸುತ್ತೇನೆ. ಏಕೆಂದರೆ ಸಾರ್ವಜನಿಕರು ಇದನ್ನೆಲ್ಲ ಪ್ರಮಾದ ಮಾಡಿ, ಕಳವಳ ಜನಿಸುವಂತೆ ಮಾಡುವರಲ್ಲದೆ ಸರಕಾರದ ಮೇಲೂ ಇಲ್ಲದ ಸಲ್ಲದ ಆಕ್ಷೇಪಣೆಗೆ ಕಾರಣವಾಗುತ್ತದೆ. ಯಾವ ಸಂದರ್ಭದಲ್ಲಿಯೂ ಯಾವ ಕಾರಣಕ್ಕೂ ಸರಕಾರದ ಮೇಲೆ ಯಾವ ಆಕ್ಷೇಪವೂ ಸಲ್ಲದು.

ನಿನ್ನ ಪತ್ರವೂ ಪೋಸ್ಟ್ ಕಾರ್ಡೂ ತಲಪಿದವು. ರೋಲಾರವರು ಅಪಾಯದಿಂದ ಪಾರಾದುದಕ್ಕೆ ದೇವರನ್ನು ಪ್ರಾರ್ಥಿಸೋಣ. ಅವರು ಇನ್ನೂ ಬಹಳ ದೀರ್ಘಕಾಲ ಬದುಕಿರಬೇಕು. ನಮಗೆ ಗೊತ್ತಿರುವಂತೆ ಅವರ ಕಾರ್ಯವಿನ್ನೂ ಮುಗಿದಿಲ್ಲ. ಅವರಿಗೆ ನನ್ನ ಪ್ರೇಮಭರಿತ ಗೌರವ ವನ್ನು ತಿಳಿಸುವುದಲ್ಲದೆ ಇನ್ನೂ ನಾಲ್ಕು ಕಾಲ ಬದುಕಿರಬೇಕೆಂದು ತಿಳಿಸು.

   

'ಗುಟ್ಟು' ಎನ್ನುವುದರ ಬಗೆಗೆ ನನ್ನ ಅಭಿಪ್ರಾಯಗಳಲ್ಲಿ ಸ್ವಲ್ಪ ಗೊಂದಲ ಕಂಡುಬರುತ್ತದೆ. ಹಸುವನ್ನು ಹುಡುಕುತ್ತಿರುವ ಕಟುಕನೊಬ್ಬ ಅದು ಎಲ್ಲಿ ಹೋಯಿತೆಂದು ನಿನ್ನನ್ನು ಪ್ರಶ್ನಿಸಿದರೆ ನೀನು ಅವನಿಗೆ ಉತ್ತರ ನೀಡಬೇಕಾದ ಅಗತ್ಯವಿಲ್ಲ. ನಾನು ಅವನಿಗೆ ತಪ್ಪು ಮಾರ್ಗವನ್ನೂ ತೋರಿಸಬೇಕಾಗಿಲ್ಲ, ಅಥವಾ ಹಸುವಿರುವೆಡೆಗೆ ಒಯ್ಯಲೂ ಬೇಕಾಗಿಲ್ಲ. ಅಷ್ಟೇ ಅಲ್ಲ, ನಾನೇ ಹಸುವನ್ನು ಬಚ್ಚಿಡಬಹುದು. ಆ ರೀತಿ ಮಾಡುವುದು ನನ್ನ ಕರ್ತವ್ಯ. ಈ ದೃಷ್ಟಾಂತದಿಂದ ಸಂದರ್ಭಕ್ಕನುಗುಣವಾಗಿ ಅವರವರ ಮಾರ್ಗವನ್ನು ನಿಶ್ಚಯಿಸಿಕೊಳ್ಳಬೇಕು.

ಪ್ರೇಮ,

೧೨-೨-೧೯೩೧ **ಬಾಪೂ**

ತೋತಾರಾಂಜೀಯ ತೋಟಗಾರಿಕೆಯ ಪ್ರೇಮವನ್ನು ನೀನು ಒಳ್ಳೆ ಮೋಹಕವಾಗಿ ವರ್ಣಿಸಿದೀಯೆ. ಕೆಲವರಾದರೂ ಯುವಕರು ಆತನಿಂದ ಈ ಕಲೆಯನ್ನು ಕಲಿಯುವರೆಂದು ನಾನು ಆಶಿಸುತ್ತೇನೆ. ನಾರಾಯಣದಾಸ ರೊಂದಿಗೆ ಈ ವಿಚಾರವನ್ನು ಚರ್ಚಿಸು.

ಚಿ. ಮೀರಾ, ೧೪-೨-೧೯೩೧

ಬೆಳಗಿನ ಪ್ರಾರ್ಥನೆ ಮುಗಿದ ಕೂಡಲೇ ನಿನಗೆ ಬರೆಯುತ್ತಿರುವ ಪತ್ರದಿಂದ ಆಶ್ರಮದ ಪತ್ರಗಳನ್ನು ಆರಂಭಿಸುತ್ತೇನೆ. ಇದು ಐದನೇ ಶ್ಲೋಕದ ಭಾಷಾಂತರ: 'ಮಲ್ಲಿಗೆ, ಚಂದ್ರ, ಮಂಜಿನ ಹಾರ ಇವುಗಳಂತೆ ಬೆಳ್ಳಗಿರುವ, ಶುಭ್ರವಸ್ತ್ರ ಧರಿಸಿರುವ, ಸುಂದರವಾದ ಬಿದಿರುದಂಡದಿಂದ ಮಾಡಿದ ವೀಣೆಯನ್ನು ಕೈಯಲ್ಲಿ ಧರಿಸಿರುವ, ಶ್ವೇತಪದ್ಮದ ಮೇಲೆ ಕುಳಿತಿರುವ, ಬ್ರಹ್ಮ, ವಿಷ್ಣು, ಶಿವ ಮೊದಲಾದ ದೇವತೆಗಳಿಂದ ಸದಾ ಪೂಜಿತಳಾಗಿರುವ, ಅವಿದ್ಯೆಯನ್ನು ಪೂರ್ಣವಾಗಿ ಹೋಗಲಾಡಿಸುವ ಜ್ಞಾನ ದೇವತೆಯಾದ ಸರಸ್ವತಿಯೇ, ನನ್ನನ್ನು ರಕ್ಷಿಸು.'

ಈ ಶ್ಲೋಕದ ಅಭಿಪ್ರಾಯ ಬಹಳ ಸುಂದರವಾಗಿದೆ. ಕಲಿಯುವುದೆಂದರೆ ಜ್ಞಾನಸಂಪಾದನೆ. ಮೂರು ಬಗೆಯ ಧವಳತೆ—ಮಂಜು,

ಚಂದ್ರ, ಪುಷ್ಪ ಮತ್ತು ಧವಳವಸ್ತ್ರ ಹಾಗೂ ಧವಳಪೀಠ — ಇವು ಜ್ಞಾನಾರ್ಜನೆಗೆ ಅತ್ಯಂತ ಪರಿಶುದ್ಧತೆ ಅಗತ್ಯವೆಂಬುದನ್ನು ತೋರಿಸುತ್ತವೆ. ಈ ಶ್ಲೋಕಗಳಲ್ಲಿರುವ ಗೂಢಾರ್ಥವನ್ನು ಅರಿಯಲು ಯತ್ನಿಸಿದರೆ ಎಲ್ಲವೂ ಒಂದೊಂದು ಗುಣದ ಅಭಿವ್ಯಕ್ತತೆಯೆಂದೂ ಕೇವಲ ನಿರ್ಜೀವಕೋಶದ ಶಬ್ದಗಳಂತಿರದೆ ಎಲ್ಲವೂ ಜೀವಂತವೆಂದೂ ಗೋಚರವಾಗುತ್ತದೆ. ಈ ಕಾಲ್ಪನಿಕ ದೇವತೆಗಳು ನಮ್ಮ ಪಂಚೇಂದ್ರಿಯಗಳಿಗೆ ಗೋಚರವಾಗುವ ಸತ್ಯವೆಂದು ಭಾವಿಸಲ್ಪಟ್ಟಿರುವ ವಸ್ತುಗಳಿಗಿಂತ ಹೆಚ್ಚು ಸತ್ಯವಾದುವು. ಉದಾಹರಣೆಗೆ, ಈ ಶ್ಲೋಕವನ್ನು ನಾನು ಪಠಿಸುವಾಗ ಯಾವುದೋ ಕಾಲ್ಪನಿಕ ಚಿತ್ರವನ್ನು ಕುರಿತು ಪಠಿಸುವೆನೆಂಬ ಭಾವನೆಯೇ ನನಗೆ ಬರುವುದಿಲ್ಲ. ಈ ಪಠನೆ ಒಂದು ಅನಿರ್ವಚನೀಯ ಕ್ರಿಯೆ. ಈ ಕ್ರಿಯೆಯನ್ನು ಬೌದ್ಧಿಕವಾಗಿ ವಿಚಾರಮಾಡಿದಾಗ ಈ ದೇವತೆ ಕೇವಲ ಕಾಲ್ಪನಿಕ ಎಂದು ನನಗೆ ಗೊತ್ತಾದರೂ ಅದು ಪ್ರಾರ್ಥನೆಯ ಸಮಯದಲ್ಲಿ ಮಾಡುವ ಪಠನೆ ನಿರರ್ಥಕವೆನಿಸುವುದಿಲ್ಲ. ಇವೆಲ್ಲ ನಿನಗೆ ಅರ್ಥವಾಗದಿದ್ದರೆ ಯಾವ ಸಂಶಯವನ್ನೂ ಇಟ್ಟುಕೊಳ್ಳದೆ ನನ್ನನ್ನು ಕೇಳು. ನೀನು ಪುನಃ ಪ್ರವಾಸ ಮಾಡಬೇಕಾಗಿದೆ. ನಾನು ಇಷ್ಟನ್ನು ಮಾತ್ರ ಹೇಳಬಲ್ಲೆ: 'ಅತಿಯಾಗಿ ಮಾಡಬೇಡ. ನಿನ್ನ ಶಕ್ತಿಗೆ ಮೀರಿ ದುಡಿಯಬೇಡ.'

ಸುರೇಂದ್ರನ* ವಿಷಯವಾಗಿ ತಾರನ್ನು ಕಳಿಸಿದೆ. ಅವನು ಉಪವಾಸ ನಿಲ್ಲಿಸಿರಬೇಕು. ನಾನು ಸುರಕ್ಷಿತವಾಗಿದೇನೆ. ಇನ್ನೂ ತರಕಾರಿಯನ್ನಾಗಲಿ ಬ್ರೆಡ್ಡನ್ನಾಗಲಿ ಸೇವಿಸುತ್ತಿಲ್ಲ. ಬಾದಾಮಿ, ಖರ್ಜೂರ, ಸ್ವಲ್ಪ ಹಾಲು ಅಥವಾ ಮೊಸರು, ನಿಂಬೆ — ಇವು ನನ್ನನ್ನು ಚೆನ್ನಾಗಿ ಆರೋಗ್ಯವಾಗಿ ಇಟ್ಟಿರುವಂತೆ ಕಾಣುತ್ತದೆ. ಸುಮಾರು ಎರಡು ಘಂಟೆಗಳ ಕಾಲ ನಿಂತು ತಕಲಿಯಿಂದ ನೂಲನ್ನು ತೆಗೆಯುವುದು ನನಗೆ ಮಹಾಸಾಹಸವೇನಲ್ಲ; ಬೆನ್ನಿಗೆ ಯಾವ ಆಧಾರವೂ ಇಲ್ಲದೆ ಸುಮಾರು ಎರಡು ಘಂಟೆಗಳವರೆಗೆ ಕುಳಿತು ರಾಟೆಯನ್ನೂ ನಾನು ತಿರುಗಿಸುತ್ತೇನೆ. ಇದರ ಜೊತೆಯಲ್ಲಿ

---

* ಸೆರೆಮನೆಯಲ್ಲಿ ಉಪವಾಸ ಮಾಡುತ್ತಿದ್ದ ಒಬ್ಬ ಸತ್ಯಾಗ್ರಹಿ.

ಸುಮಾರು ನಾಲ್ವತ್ತೈದು ನಿಮಿಷ ಎಕ್ಕುವ ಮತ್ತು ಹಂಜಿ ಮಾಡುವ ಕೆಲಸ ಮಾಡುತ್ತೇನೆ.

ನಿನ್ನ,

**ಬಾಪೂ**

ಚಿ. ಮೀರಾ,

ಮತ್ತೊಮ್ಮೆ ಬುಧವಾರ, ಬೆಳಗಿನ ಪ್ರಾರ್ಥನೆ ಮುಗಿದಿದೆ. ಕಳೆದ ವಾರದಂಥ ಅದೃಷ್ಟವಿದ್ದರೆ ಇಂದೂ ಅಂಚೆ ಎಂಟು ಘಂಟೆಗೆ ಬಂದೀತು. ವಾರದ ಪತ್ರವನ್ನು ಆರಂಭಿಸುವುದಕ್ಕೆ ಮುಂಚೆ ಶ್ಲೋಕಗಳನ್ನು (ಈ ಸಲ ಎರಡು ಶ್ಲೋಕಗಳು) ಕುರಿತು ಬರೆಯುವುದು ನನಗೆ ಹರ್ಷ. ಇವು ಆರು ಮತ್ತು ಏಳನೆಯ ಶ್ಲೋಕಗಳು; ಅವುಗಳ ಟಿಪ್ಪಣಿಯನ್ನೂ ಕೊಟ್ಟಿದೇನೆ.

‘ ವಕ್ರತುಂಡ ಮಹಾಕಾಯ ಸೂರ್ಯಕೋಟಿಸಮಪ್ರಭ ।
ನಿರ್ವಿಘ್ನಂ ಕುರು ಮೇ ದೇವ ಶುಭಕಾರ್ಯೇಷು ಸರ್ವದಾ ॥ ’

ಟಿಪ್ಪಣಿ—ಇದು ‘ ಓಂ ’ ಎಂಬ ಅನಿರ್ವಚನೀಯ ಅಕ್ಷರದಿಂದ ಸಂಬೋಧಿತನಾದ ಭಗವಂತನಿಗೆ ಅನ್ವಯಿಸುತ್ತದೆ; ಅವನು ವಕ್ರತುಂಡ, ಮಹಾಕಾಯ ಎಂಬುವನ್ನು ಗಮನಿಸು. ಉಪನಿಷತ್ತುಗಳು ಈ ಅನಿರ್ವಚನೀಯ ವಸ್ತುವನ್ನು ಕುರಿತು ಅಮೋಘವಾಗಿ ಹಾಡಿವೆ.

‘ ಗುರುರ್ಬ್ರಹ್ಮಾ ಗುರುರ್ವಿಷ್ಣುಃ ಗುರುರ್ದೇವೋ ಮಹೇಶ್ವರಃ ।
ಗುರುಸ್ಸಾಕ್ಷಾತ್ ಪರಬ್ರಹ್ಮಾ ತಸ್ಮೈ ಶ್ರೀಗುರವೇ ನಮಃ ॥ ’

ಟಿಪ್ಪಣಿ— ಇದು ಅಧ್ಯಾತ್ಮಗುರುವಿಗೆ ಅನ್ವಯಿಸುತ್ತದೆ. ಇದು ಕೇವಲ ಯಾಂತ್ರಿಕ ಅಥವಾ ಕೃತಕ ಸಂಬಂಧವಲ್ಲ. ವಾಸ್ತವಿಕವಾಗಿ ನೋಡಿದರೆ ಗುರು ಈ ಯಾವುದೂ ಅಲ್ಲ. ಆದರೆ ಶಿಷ್ಯನಿಗೆ ಎಲ್ಲವೂ ಆಗಿವಾನೆ; ಗುರುವಿನಲ್ಲಿ ಅವನಿಗೆ ಪೂರ್ಣ ತೃಪ್ತಿ ದೊರಕುತ್ತದೆ; ಜೀವಂತ ಭಗವಂತನಲ್ಲಿ ಜೀವಂತ ನಂಬಿಕೆಯನ್ನು ಹುಟ್ಟಿಸಿದ ಗುರುವಿನಲ್ಲಿ ಅವನು ಪೂರ್ಣತೆಯನ್ನು ಆರೋಪಮಾಡುತ್ತಾನೆ. ಇಂಥ ಗುರು ಈ ಕಾಲದಲ್ಲಂತೂ ಅಪರೂಪವೇ. ಆದುದರಿಂದ ದೇವರನ್ನೇ ಗುರುವೆಂದೋ ಅಥವಾ ಶ್ರದ್ಧೆಯ ಬೆಳಕನ್ನು ನಿರೀಕ್ಷಿಸುವುದೋ ಶ್ರೇಷ್ಠವೆನಿಸುತ್ತದೆ.

ಈ ಟಿಪ್ಪಣಿಗಿಂತ ಇನ್ನೇನೂ ಹೆಚ್ಚಿಗೆ ವ್ಯಾಖ್ಯಾನ ಆವಶ್ಯಕವಿಲ್ಲ ಎಂದೆನಿಸುತ್ತದೆ.

* * * *

೨೫-೧-೧೯೩೧

ನೀನು ಸಿಂಧ್‌ನಿಂದ ಬರೆದ ಕಾಗದ ತಲಪಿದೆ. ಎರಡನೆಯ ಅಧ್ಯಾಯದ* ಭಾಷಾಂತರ ಸೊಗಸಾಗಿದೆ. ನಾನು ಎರಡು ತಿದ್ದುಪಾಟು ಗಳನ್ನು ಸೂಚಿಸಬಯಸುತ್ತೇನೆ. ಒಂದನೆಯ ಪುಟದಲ್ಲಿ 'ಅಭಿಪ್ರಾಯ' (Notion) ಎಂಬುದಕ್ಕೆ ಬದಲಾಗಿ 'ದೌರ್ಬಲ್ಯ' (Weakness) ಎಂಬು ದಾಗಿಯೂ ಏಳನೆಯ ಪುಟದಲ್ಲಿ 'ವೇದಾನುಯಾಯಿಗಳು' (Followers of Vedas) ಎಂಬುದಕ್ಕೆ ಬದಲಾಗಿ 'ವೇದವಾದರತರು' ಎಂಬುದಾ ಗಿಯೂ ಎನ್ನುತ್ತೇನೆ. ಎರಡನೆಯ ತಿದ್ದುಪಾಟು ಮೊದಲನೆಯದಕ್ಕಿಂತ ಮೂಲಭೂತವಾದುದು. ಗೀತೆಯ ಅನುಯಾಯಿಗಳೆಲ್ಲ ವೇದಾನುಯಾಯಿ ಗಳೇ. ಆದರೆ ಅವರು ಸತ್ತ್ವಕ್ಕನುಗುಣವಾಗಿ ನಡೆಯುತ್ತಾರೆ. ವೇದ ವಾದರತರು ಕೇವಲ ಶಬ್ದಪ್ರಿಯರು. ನೀನು ಕಳಿಸಿದ ಟಿಪ್ಪಣಿಯನ್ನು ನಿನಗೆ ಹಿಂದಕ್ಕೆ ಕಳಿಸಬೇಕೋ ಹೇಗೋ ಕಾಣೆ. ನಾನು ನಿನ್ನ ಪತ್ರವನ್ನು ಪುನಃ ಓದದಿದ್ದರೂ, ನಿನ್ನಿಂದ ಉತ್ತರ ಬರುವವರೆಗೂ ಟಿಪ್ಪಣಿಯನ್ನು ರಕ್ಷಿಸಿಡುತ್ತೇನೆ. ಇವು ತತ್‌ಕ್ಷಣ ಪ್ರಕಟನೆಗೆ ಅಗತ್ಯವಿಲ್ಲ; ನಾನು ಸೂಚಿಸಿರುವ ಮೂಲಭೂತ ತಿದ್ದುಪಾಟಿಗನುಗುಣವಾಗಿ ಅದನ್ನು ಎಂದಿ ದ್ದರೂ ಪ್ರಕಟನೆ ಮಾಡಲು ಯೋಗ್ಯವಾಗಿದೆ. ಪುನರ್ಜನ್ಮದ ವಿಷಯದಲ್ಲಿ ನೀನು ಹೇಳಿರುವುದು ಸಾಧುವಾಗಿದೆ. ಪೂರ್ವಜನ್ಮದ ವಿಷಯ ನಮಗೆ ವಿಸ್ಮೃತಿ ಇರುವುದು ಪ್ರಕೃತಿಯ ಕರುಣೆ. ನಮ್ಮ ಹಿಂದಿನ ಅಸಂಖ್ಯ ಹಿಂದಿನ ಜನ್ಮಗಳ ವಿಷಯ ತಿಳಿದುಕೊಂಡು ಆಗುವ ಉಪಯೋಗವಾದರೂ ಏನು? ಅದರ ಸ್ಮೃತಿಗಳ ಅಗಾಧ ಹೊಣೆಯನ್ನು ಹೊತ್ತು ಸಾಗಿಸುವ ಬಾಳು ಅದೆಂಥ ಸಹಿಸಲಾರದ ಹೊರೆಯಾದೀತು? ವಿವೇಕಿಯಾದವನು ಉದ್ದೇಶಪೂರ್ವಕವಾಗಿಯೇ ಅನೇಕ ವಿಷಯಗಳನ್ನು ಮರೆಯುತ್ತಾನೆ.

* ಗೀತೆಯ ಎರಡನೆಯ ಅಧ್ಯಾಯ.

ವಕೀಲನೊಬ್ಬ ಮೊಕದ್ದಮೆ ಮುಗಿದ ಕೂಡಲೆ ಅದರ ವಿವರಗಳನ್ನು ಮರೆಯುವಂತೆ. 'ಸಾವೊಂದು ನಿದ್ರೆ ಮತ್ತು ವಿಸ್ಮರಣೆ' ಎಂಬುದು ನಿಜ. ನನ್ನ ಆರೋಗ್ಯ ಚೆನ್ನಾಗಿದೆ. ನನ್ನ ಶಕ್ತಿ ನನಗೇ ಆಗಾಗ ಅಚ್ಚರಿಯನ್ನುಂಟುಮಾಡುತ್ತದೆ. ನಾನು ಆಶ್ರಮದಲ್ಲಿದ್ದಾಗ ಒಂದೇ ಸಮನೆ ಎರಡು ಘಂಟೆಗಳ ಕಾಲ ನಿಂತು ತಕಲಿಯಿಂದ ನೂಲುತ್ತಿದ್ದಂತೆ ಈಗಲೂ ಸಾಧ್ಯವಿಲ್ಲವೇ ಎಂದು ಯೋಚಿಸುತ್ತೇನೆ. ಗುರುವಾರ ನನ್ನ ತೂಕ ನೋಡಿದರು. ೯೮ ಪೌಂಡು ಇದೇನೆ; ಒಂದು ವಾರದಲ್ಲಿ ೨½ ಪೌಂಡು ಹೆಚ್ಚಿದೆ. ಇದೊಂದು ಮಹತ್ತರ ಸಾಧನೆಯೇ. ಕಳೆದ ಐದು ದಿವಸಗಳಿಂದ ತರಕಾರಿ, ಬ್ರೆಡ್, ಬಾದಾಮಿ, ಖರ್ಜೂರ ಮತ್ತು ಹುಳಿನಿಂಬೆ ಇವನ್ನು ತೆಗೆದುಕೊಳ್ಳುತ್ತಿದೇನೆ. ಖರ್ಜೂರವನ್ನು ಪ್ರಧಾನವಾಗಿ ಬೆಳಗಿನ ವೇಳೆ ತೆಗೆದುಕೊಳ್ಳುತ್ತೇನೆ. ಬ್ರೆಡ್ಡು ಚೆನ್ನಾಗಿ ಸುಟ್ಟಿರುತ್ತದೆ. ಹಾಲು ಅಥವಾ ಮೊಸರಿನ ಅಗತ್ಯವೇ ಕಂಡುಬಂದಿಲ್ಲ, ಒಂದುವೇಳೆ ಕಂಡುಬಂದರೆ ಯಾವುದನ್ನಾದರೂ ತೆಗೆದುಕೊಂಡೇನು. ಹೀಗೆ, ನನ್ನ ವಿಷಯದಲ್ಲಿ ಯಾವ ಬಗೆಯ ಆತಂಕಕ್ಕೂ ಕಾರಣವೇ ಇಲ್ಲ. ಯಾವಾಗಲಾದರೂ ನನಗೆ ಸ್ವಲ್ಪ ಹಾಲು ಅಥವಾ ಮೊಸರು ಬೇಕಾದೀತು. ಆಗ ಅದನ್ನು ಔಷಧದಂತೆ ಉಪಯೋಗಿಸಿಯೇನು.

ಪ್ರೀತಿ,

**ಬಾಪೂ**

ಚಿ. ಮೀರಾ,

ಗುರುವಾರ, ಪ್ರಾರ್ಥನಾಪೂರ್ವ ಸಮಯ. ನಿನ್ನ ವಾರದ ಪತ್ರ ನನಗೆ ಬುಧವಾರ ಮಧ್ಯಾಹ್ನ ತಲಪುತ್ತದೆ. ಅದಕ್ಕೆ ಗುರುವಾರ ಬೆಳಗ್ಗೆ ಉತ್ತರ ಬರೆಯುತ್ತೇನೆ, ಪ್ರಾರ್ಥನೆ ಮುಗಿದಮೇಲೋ ಅಥವಾ ಈಗಿನಂತೆ ಅದಕ್ಕೆ ಪೂರ್ವಭಾವಿಯಾಗಿಯೋ. ಆದುದರಿಂದ ನನ್ನ ಪತ್ರ ನಿನಗೆ ಸಾಮಾನ್ಯವಾಗಿ ತಲಪುವುದಕ್ಕಿಂತ ಹೊತ್ತುಮೀರಿ ತಲಪಿದರೆ ಅಥವಾ ತಲಪದೇ ಇದ್ದರೆ ಅದಕ್ಕೆ ವಿಲಂಬ ನನ್ನ ಕಡೆಯಿಂದ ಅಲ್ಲವೆಂಬುದು ನಿನಗೆ ಅರಿವಾದೀತು. ಆದರೆ ಎಂಥ ಅತ್ಯಂತ ಶ್ರೇಷ್ಠವೆನಿಸುವ ಜಗತ್ತಿನಲ್ಲೂ

ಆಕಸ್ಮಿಕಗಳು ಸಂಭವಿಸುತ್ತವೆ. ಆದರೆ ದೇವರ ಶಬ್ದಕೋಶದಲ್ಲಿ ಆಕಸ್ಮಿಕ ಎನ್ನುವುದಕ್ಕೆ ಸ್ಥಾನವೇ ಇಲ್ಲ. ಆಕಸ್ಮಿಕಗಳೆಂದರೆ ನಮ್ಮ ಹತೋಟಿಗೆ ಮೀರಿದ ಪ್ರಸಂಗಗಳು. ಅನೇಕ ವೇಳೆ ಅವು ಸಂಭವಿಸಿದಮೇಲೂ ಅವುಗಳಿಗೆ ಕಾರಣವನ್ನು ನಾವು ಗೊತ್ತುಹಿಡಿಯಲಾರೆವು.

ನಿನಗೇ ಗೋಚರವಾಗುವಂತೆ ನಾನು ಪುನಃ ಬಲಗೈಯಿಂದ* ಬರೆಯುತ್ತಿದೇನೆ. ಆದರೆ ಹೆಚ್ಚಿಗೆ ಬರೆಯುವುದಿಲ್ಲ. ದಿನವೂ ಎರಡು ಘಂಟೆಗಳಿಗೆ ಹೆಚ್ಚಾಗಿ ಬರೆಯುವುದಿಲ್ಲ, ಸ್ವಲ್ಪ ಗುಜರಾತೀಯಲ್ಲಿ ಬರೆಯುತ್ತೇನೆ; ನಿನಗೆ ಇಂಗ್ಲೀಷಿನಲ್ಲಿ ವಾರಪತ್ರ. ಅದರಿಂದ ಕೈಗೆ ಏನೂ ಅಪಾಯವಾಗಲಾರದು. ಸದ್ಯಕ್ಕೆ ಯಾರೂ ಅದನ್ನು ಕಾರಣವೆಂದು ಸೂಚಿಸಿಲ್ಲ. ರಾಟೆಯ ಮೇಲೆ ತಪ್ಪನ್ನು ಹಾಕಿದ್ದಾಯಿತು. ಆದರೆ ಅದೂ ನಿಷ್ಫಲ ಸಿದ್ಧಾಂತವೇ. ಕಳೆದ ಮಂಗಳವಾರದಿಂದ ಮಿತವಾಗಿ ನೂಲುವುದನ್ನು ಪುನಃ ಆರಂಭಿಸಿದೇನೆ. ಆದರೆ ನಾನು ಹಟಮಾಡುವುದಿಲ್ಲ. ನೋವು ಹೆಚ್ಚಾದರೆ ಬಿಟ್ಟುಬಿಡುತ್ತೇನೆ. ತೂಕ ೨ ಪೌಂಡು ಕಡಿಮೆಯಾಗಿದೆ. ಇದು ಸಣ್ಣ ಬದಲಾವಣೆ. ಯಾವ ಆತಂಕಕ್ಕೂ ಕಾರಣವಲ್ಲ.

ಈಗ ನಿನ್ನ ವಿಚಾರ. ನಿನ್ನ ತಲೆಸುತ್ತುವಿಕೆಗೆ ಏನೇ ಕಾರಣವಿರಲಿ, ವೈದ್ಯರಲ್ಲಿ ವಿಚಾರಮಾಡು. ಅದಕ್ಕೆ ಚರಂಡಿಯ ವಾಸನೆ ಕಾರಣವಾಗಿದ್ದರೆ, ನೀನು ಬೇರೆ ಸ್ಥಳಕ್ಕೆ ವರ್ಗಾಯಿಸಲ್ಪಡಬೇಕು.† ನೀನು ಅಭ್ಯಂತರವಿಲ್ಲ ಎಂದರೆ ನಾನೇ ಸರಕಾರಕ್ಕೆ ಬರೆಯುತ್ತೇನೆ. ನಿನಗೆ ಬಹಳ ಚುರುಕಾದ ಮೂಗಿದೆ. ಅದುದರಿಂದ ಇತರರಿಗಿಂತ ಜಾಗ್ರತೆ ದುರ್ವಾಸನೆಗೆ ನಿನ್ನ ಪ್ರತಿಕ್ರಿಯೆ. ನಿನ್ನ ವರ್ಗಾವಣೆಗೆ ಪತ್ರ ಬರೆಯಲೆ? ನಿನ್ನ ವಾರದ ಪತ್ರವಲ್ಲದೆ ಇದಕ್ಕೆ ಉತ್ತರವೀಯಲು ನಿನಗೆ ಅನುಮತಿ ದೊರೆಕೀತು

* * * *

---

* ಆಗಾಗ ಗಾಂಧೀಜೀ ಎಡಗೈಯಿಂದಲೂ ಬರೆಯುತ್ತಿದ್ದುದುಂಟು.

† ಬೇರೆ ಸೆರೆಮನೆಗೆ.

'ಉಪವಾಸವಿಲ್ಲದೆ ಪ್ರಾರ್ಥನೆಯಿಲ್ಲ' ಎಂಬ ಮಾತು ಸಾಧುವಾದುದು. ಇಲ್ಲಿ ಉಪವಾಸಕ್ಕೆ ಅರ್ಥ ಬಹಳ ವಿಶಾಲ. ಉಪವಾಸ, ಶಾರೀರಕವಾಗಿಯಲ್ಲದೆ ಎಲ್ಲ ಇಂದ್ರಿಯಗಳಿಗೂ ಅನ್ವಯಿಸಬೇಕು. ಗೀತೆಯ 'ಯುಕ್ತಾಹಾರ' ಎನ್ನುವುದೂ ಒಂದು ಬಗೆಯ ಶಾರೀರಕ ಉಪವಾಸವೇ; ಇದು ನಿತ್ಯೋಪವಾಸ. ಯಾವ ಸೇವೆಮಾಡಲೋಸುಗ ಈ ದೇಹ ನಿರ್ಮಿತವಾಗಿದೆಯೋ ಅದನ್ನು ಮಾಡಲು ಶಕ್ತಿ ಇರುವುದಕ್ಕೆ ಎಷ್ಟು ಬೇಕೋ ಅಷ್ಟನ್ನು ಮಾತ್ರ ತೆಗೆದುಕೊಳ್ಳುವುದೇ ಯುಕ್ತಾಹಾರ. ಇನ್ನೊಂದು ವಿಧದಲ್ಲಿ ಇದನ್ನು ನಿರೂಪಿಸಬಹುದು. ನಿಯತ ಅಳತೆಯಲ್ಲಿ ಔಷಧಿಯನ್ನು ಸೇವಿಸುವಂತೆ ಆಹಾರವನ್ನು ಶರೀರದ ಕ್ಷೇಮಕ್ಕೋಸ್ಕರ ಕ್ಲುಪ್ತ ಕಾಲದಲ್ಲಿ ಅಗತ್ಯವಾದಂತೆ ತೆಗೆದುಕೊಳ್ಳಬೇಕೇ ವಿನಾ ರುಚಿ-ಮೋಹದಿಂದ ಕೂಡದು. ಆದ್ದರಿಂದ 'ಗಡದ್ದಾಗಿ' ತಿನ್ನುವುದು ದೇವರ ಎದುರು, ಮನುಷ್ಯನೆದುರು ಅಪರಾಧ. ಮನುಷ್ಯರೆದುರು ಏಕೆಂದರೆ, ಅತಿಯೂಟ ನೆರೆಯವರಿಗೆ ಭಾಗವಿಲ್ಲದಂತೆ ಮಾಡುತ್ತದೆ. ಔಷಧಿಯ ಕ್ಲುಪ್ತ ಅಳತೆಯಲ್ಲಿ ಎಲ್ಲರ ಆವಶ್ಯಕತೆಗೆ ಸಾಕಷ್ಟು ಆಹಾರವನ್ನು ಒದಗಿಸುತ್ತದೆ, ದೇವರ ಆರ್ಥಿಕವ್ಯವಸ್ಥೆ. ನಾವೆಲ್ಲ ಹೊಟ್ಟೆತುಂಬ ಉಣ್ಣುವವರ ಬಣಕ್ಕೆ ಸೇರಿದವರು. 'ಔಷಧಿ ಪ್ರಮಾಣದಲ್ಲಿ ತೆಗೆದುಕೊಳ್ಳುವಷ್ಟನ್ನು ಸಹಜವಾಗಿ ಅರಿತುಕೊಳ್ಳುವುದು ಭಗೀರಥ ಪ್ರಯತ್ನ. ಏಕೆಂದರೆ ತಂದೆತಾಯಿಗಳ ಶಿಕ್ಷಣದಿಂದ ನಾವು ತಿಂಡಿಪೋತರು. ಹೀಗಾಗಿ ಇನ್ನೇನು ಕಾಲ ಮಿಂಚಿಹೋಯಿತೋ ಎನ್ನುವಾಗ, ಆಹಾರ ತೆಗೆದುಕೊಳ್ಳುವುದು ಭೋಗಕ್ಕಲ್ಲವೆಂದೂ ಶರೀರವನ್ನು ನಮ್ಮ ಗುರಿಯಲ್ಲಿ ಇಟ್ಟುಕೊಳ್ಳುವುದಕ್ಕೆಂದೂ ಅಭಿಪ್ರಾಯ ನಮ್ಮಲ್ಲಿ ಕೆಲವರಿಗೆ ಜನಿಸುತ್ತದೆ. ಅಂದಿನಿಂದ ಭೋಗಕ್ಕಾಗಿ ಉಣ್ಣಬೇಕೆಂಬ ಅಭ್ಯಾಸ—ಆನುವಂಶಿಕವೂ ಗಳಿಸಿಕೊಂಡದ್ದೂ ಆದ ಅಭ್ಯಾಸ ಅದು—ಕಠೋರಸಂಗ್ರಾಮವಾಗುತ್ತದೆ. ಆದುದರಿಂದಲೇ ಗೊತ್ತಾದ ಅವಧಿಯಲ್ಲಿನ ಪೂರ್ಣ ಉಪವಾಸಕ್ಕೂ ಸದಾ ಅರ್ಧ ಉಪವಾಸಕ್ಕೂ ಇರುವ ಆವಶ್ಯಕತೆ. ಅರ್ಧ ಉಪವಾಸವೇ ಗೀತೆಯ ಯುಕ್ತಾಹಾರ ಅಥವಾ ತೂಕಮಾಡಿದ ಆಹಾರ. ಹೀಗೆ, 'ಉಪವಾಸವಿಲ್ಲದೆ ಪ್ರಾರ್ಥನೆಯಿಲ್ಲ' ಎಂಬ ಮಾತು

ಒಂದು ವೈಜ್ಞಾನಿಕ ಸೂತ್ರವಾಗುತ್ತದೆ. ಎಲ್ಲರ ಪ್ರಯೋಗಾನುಭವ ಗಳಿಂದ ತಾಳೆ ಹಾಕಿ ನೋಡಲು ಸಾಧ್ಯವಾದುದು.

ಎಲ್ಲರ ಪ್ರೀತಿ,

**ಬಾಪೂ**

ಚಿ. ಮೀರಾ,

ಈಗ ಶುಕ್ರವಾರ ಬೆಳಗಿನ ಜಾವ ೩–೩೦ ; ಇನ್ನೂ ಈ ವಾರದ ನಿನ್ನ ಪತ್ರ ಬಂದಿಲ್ಲ. ನಾನೇನೋ ಕಳೆದ ವಾರ ತಪ್ಪದೆ ನಿನಗೆ ಬರೆದೆ. ಅಂದು ಶುಕ್ರವಾರ, ಏಕೆಂದರೆ ನಿನ್ನ ಪತ್ರ ಗುರುವಾರ ಮಧ್ಯಾಹ್ನ ತಲಪಿತ್ತು. ನಿನ್ನ ಹೊಸ ವಾಸಸ್ಥಳದಲ್ಲಿ* ಹೊಸ ರಕ್ಷಕರಿಂದ ಈ ವ್ಯತ್ಯಾಸ ಆಗಿದೆ ಎಂದು ಭಾವಿಸುತ್ತೇನೆ. ನಾನು ಗೀತಾಮಾತೆಯ ಸಂದೇಶವನ್ನು ಮನಸ್ಸಿಗೆ ತಂದುಕೊಂಡು ಪ್ರಾರ್ಥನಾಪರನಾಗಿ ನಿರೀಕ್ಷಿಸು ತ್ತೇನೆ. ಗೀತಾಮಾತೆ ಅತ್ಯದ್ಭುತ ಮಾತೆ. ಗೀತೆ ಎಂದರೆ, ಹಾಡು. ಇದನ್ನು ಪವಿತ್ರ ಕಾಮಧೇನುವಿಗೆ ಹೋಲಿಸಲಾಗಿದೆ. ಆದ್ದರಿಂದ 'ಮಾತೆ'. ಆ ಅಮರ ಮಾತೆ ನಮ್ಮ ಆಧ್ಯಾತ್ಮಿಕ ಬೆಳವಣಿಗೆಗೆ ಅಗತ್ಯ ವಾದ ಹಾಲನ್ನೆಲ್ಲ ನೀಡುತ್ತಾಳೆ. ನಾವು ಮಾತ್ರ ಆ ಅಮೃತಪಾನ ಮಾಡಲು ಶಿಶುಗಳಂತೆ ಆಗಬೇಕು, ಅಷ್ಟೆ. ಆಕೆ ತನ್ನ ಅಕ್ಷಯ ಅಮೃತ ಕೋಶದಿಂದ ಕೋಟ್ಯಂತರ ಜನಕ್ಕೆ ಹಾಲನ್ನು ಉಣಿಸಲು ಶಕ್ತಳು.

ನಾನು ಮಾಡುತ್ತಿರುವ ಈ ಹರಿಜನ ಕಾರ್ಯ ನನ್ನನ್ನು ದೂಷಣೆಗೆ ಗುರಿಮಾಡಿದೆ; ನನ್ನನ್ನು ಅಪಾರ್ಥಕ್ಕೂ ನಿರಾಶೆಗೂ ಗುರಿಮಾಡಿದೆ. ನಾನು ಹತಾಶನಾಗದಿರಲು ನನಗೆ ಆವಶ್ಯಕವಾದ ಸಂತೈಸನ್ನು ಗೀತಾ ಮಾತೆಯೇ ನೀಡುತ್ತಾಳೆ.

ಹೀಗೆ ನಾನು ಹರ್ಷದಿಂದಲೂ ಚಿಂತಾಮುಕ್ತನಾಗಿಯೂ ಇರುವು ದನ್ನು ನೀನು ನೋಡಬಹುದು.

ನನ್ನ ತೂಕ ೧೦೩ ಪೌಂಡುಗಳಲ್ಲಿ ಸ್ಥಾಯಿಯಾಗಿದೆ. ಆಹಾರವೂ ಗುಣ ಮತ್ತು ಪ್ರಮಾಣದಲ್ಲಿ ಒಂದೇ ರೀತಿಯಾಗಿದೆ. ಸದ್ಯಕ್ಕೆ ಕಾಯಿಸಿದ,

---

* **ಬೇರೆ ಸೆರೆಮನೆ.**

ಆಗತಾನೆ ಕರೆಸಿದ ಹಾಲು ಯಾವ ತೊಂದರೆಯನ್ನೂ ಕೊಡದಿರುವಂತೆ ಕಂಡುಬರುತ್ತಿದೆ. ಹರಿಜನ ಪತ್ರಿಕೆಗೆ ಬರೆಯುವುದೇ* ನನ್ನ ಮತ್ತು ಮಹಾದೇವನ ಪೂರ್ಣ ಕಾಲವನ್ನು ತೆಗೆದುಕೊಳ್ಳುತ್ತದೆ. ಛಗನಲಾಲ ನಿಗೂ ಸಾಕಷ್ಟು ಕೆಲಸವಿದೆ.

ಸದ್ಯಕ್ಕೆ ಇನ್ನೇನೂ ಇಲ್ಲ; ಮಲಗಿರುವ ಇತರರನ್ನೂ ಪ್ರಾರ್ಥನೆಗೆ ಎಚ್ಚರಗೊಳಿಸಬೇಕು.

ನಿನಗೂ ಇತರರಿಗೂ ನಮ್ಮೆಲ್ಲರ ಪ್ರೀತಿ.

೨೪–೨–೧೯೩೩ ಬಾಪೂ

ಈಗತಾನೆ ನಿನ್ನ ಪತ್ರ ತಲಪಿತು. ಇಂದೇ ಉತ್ತರ ಬರೆಯಲು ವೇಳೆಯಿಲ್ಲ.

ಬಾಪೂ

ಚಿ. ಮೀರಾ,

ಬೆಳಗ್ಗೆ ೬ ಘಂಟೆಗೆ ಉಪವಾಸವನ್ನು† ಆರಂಭಿಸಿದೆ. ಈಗ ಏಳು ಘಂಟೆ. ಈ ವಾರ ನೀನು ನಿರಾತಂಕದಿಂದ ಇರುವೆಯೆಂದು ನಂಬಿದೇನೆ. ಇದಕ್ಕಾಗಿ ನೀನು ತವಕಪಡಬೇಕಾದುದಿಲ್ಲ. ಇದನ್ನೆಲ್ಲ ನಾನು ಹೇಳಿ ಪ್ರಯೋಜನವಾದರೂ ಏನು? ಈ ಪತ್ರವು ನಿನಗೆ ತಲಪುವ ವೇಳೆಗೆ ಈ ಉಪವಾಸ ವಾರ ಎರಡು ಬಾರಿ ಕಳೆದಿರುತ್ತದೆ.

* * * *

---

* ಈ ಸಮಯದಲ್ಲಿಯೇ 'ಹರಿಜನ' ಪತ್ರಿಕೆ ಆರಂಭವಾದುದು.

† ಹರಿಜನ ಸಮಸ್ಯೆ ಬಗೆಗೆ ಮಾಡಿದ ಒಂದು ವಾರದ ಉಪವಾಸ. ಅಜ್ಮೀರ ದಲ್ಲಿ ನಡೆದ ಒಂದು ಸಭೆಯಲ್ಲಿ ಸನಾತನಿಗಳಿಗೂ ಹರಿಜನ ಪರದವರಿಗೂ ಒಂದು ಘರ್ಷಣೆ ನಡೆಯಿತು. ಸನಾತನಿಗಳ ಪರ ಪಂ. ಲಾಲಾನಾಥ್ ಎನ್ನುವವರಿಗೆ ಏಟು ಬಿತ್ತು. ಇದಕ್ಕಾಗಿ ಬಾಪೂ ಉಪವಾಸ ಮಾಡಿದರು.

ಈಗ ನನ್ನ ಮನಸ್ಸಿನಲ್ಲಿ ಅನೇಕ ಪರಿವರ್ತನೆಗಳಾಗುತ್ತಿವೆ. ಕಾಂಗ್ರೆಸ್ ಸಂಸ್ಥೆಯಲ್ಲಿ ಕಂಡುಬರುವ ಭ್ರಷ್ಟಾಚಾರ ಹಿಂದೆ ಎಂದೂ ಇಷ್ಟು ನನ್ನ ಮನಸ್ಸಿನ ಮೇಲೆ ಪರಿಣಾಮ ಮಾಡಿರಲಿಲ್ಲ. ಕಾಂಗ್ರೆಸ್ಸನ್ನು ತ್ಯಜಿಸಿ ಅದರ ಆದರ್ಶಗಳನ್ನು ಸಂಸ್ಥೆಯ ಹೊರಗಡೆಯಿಂದ ಮುಂದುವರಿಸುವ ಬಗೆಗೆ ಸೂಕ್ತತೆ ಕುರಿತು ಗೆಳೆಯರಲ್ಲಿ ಪ್ರಸ್ತಾಪಿಸುತ್ತಿದೇನೆ. ಈ ಭ್ರಷ್ಟಾಚಾರ ನನ್ನಲ್ಲಿ ತಳಮಳ ಹುಟ್ಟಿಸಿರುವುದು ಒಳ್ಳೆಯದು. ನಾನು ಏನನ್ನೂ ಆತುರವಾಗಿ ಮಾಡುವುದಿಲ್ಲ, ಆದರೂ ಆ ಯೋಚನೆ ಇದೆ. ನಾನಾಗಲೀ ವಿನೋಬಾ ಆಗಲಿ ಇಲ್ಲಿರುವ ಮಹಿಳಾ ಸಂಸ್ಥೆಯನ್ನು† ನೋಡಿಕೊಳ್ಳುವ ಜವಾಬುದಾರಿ ವಹಿಸಿಕೊಳ್ಳಲು ಸಾಧ್ಯವಾಗದಿದ್ದಲ್ಲಿ ಅದನ್ನು ಮುಚ್ಚಿಬಿಡುವುದೇ ಲೇಸು ಎನಿಸುತ್ತಿದೆ. ಈ ವಿಷಯವನ್ನು ಈ ಉಪವಾಸದ ಕಾಲದಲ್ಲಿ ಅವನೂ ಚಿಂತಿಸುತ್ತಾನೆ. ಈ ಎರಡು ವಿಷಯಗಳು ಮಾತ್ರ ನನ್ನ ಮನಸ್ಸಿನಲ್ಲಿ ತೀವ್ರವಾಗಿವೆ.

ಉಳಿದ ವಿಷಯವೆಲ್ಲ ಮಹಾದೇವ್ ಅಥವಾ ಪ್ಯಾರೇಲಾಲ್ ಇವರಿಂದ ನಿನಗೆ ಗೊತ್ತಾಗುತ್ತದೆ.

ವರ್ಧಾ ಪ್ರೀತಿ,

೭-೭-೧೯೩೪ ಬಾಪೂ

(ಹಿಂದೂಸ್ಥಾನಕ್ಕೆ ಸ್ವಾತಂತ್ರ್ಯ ಬಂದಿತು. ಬಾಪೂ ಕಲ್ಕತ್ತೆಯ ಹಿಂದೂ-ಮುಸಲ್ಮಾನ್ ಘರ್ಷಣೆಗಳ ಬಗೆಗೆ ಅತೀವ ನೊಂದು, ಅಲ್ಲಿ ಪರಸ್ಪರ ಸೌಹಾರ್ದ ಭಾವವನ್ನೂ ಶಾಂತಿಯನ್ನೂ ಸ್ಥಾಪಿಸಲು ಶ್ರಮಿಸಿದರು. ಸ್ವಲ್ಪ ಕಾಲದಮೇಲೆ ಶಾಂತಿಸ್ಥಾಪನೆಯಾಯಿತು, ಎರಡೂ ಕಡೆಯವರು ಗಾಂಧೀಜೀಗೆ ಭರವಸೆಯನ್ನು ಕೊಟ್ಟುದರ ಪರಿಣಾಮವಾಗಿ. ಇದರ ತರುವಾಯ ಗಾಂಧೀಜೀ ಡಿಲ್ಲಿಗೆ ಬಂದರು. ಮಿತ್ರರ ಒತ್ತಾಯದಮೇಲೆ ಭಂಗೀ ಕಾಲೋನಿಯಲ್ಲಿ ತಂಗುವ ಬದಲು ಬಿರ್ಲಾ ಭವನದಲ್ಲಿ ತಂಗಿದರು. ಮೀರಾ ಬಹುದೀರ್ಘಕಾಲದಮೇಲೆ ಬಾಪೂ ಜೊತೆಯಲ್ಲಿ ಮೂರು ತಿಂಗಳು ಕಾಲ ಇದ್ದರು. ಕೊನೆಗೆ ಬಾಪೂ ಅಪ್ಪಣೆ ಪಡೆದು ಹೃಷೀಕೇಶದ

---

† ಮಹಿಳಾಶ್ರಮ, ವರ್ಧಾ.

ಬಳಿಯಲ್ಲಿ ತಾವು ಸ್ಥಾಪಿಸಿದ್ದ ಆಶ್ರಮಕ್ಕೆ ಹೊರಟುಹೋದರು, ೧೯೪೭ರ ಡಿಸೆಂಬರ್ ೧೮ರಂದು. ಇದಾದ ಒಂದು ತಿಂಗಳಿಗೆ ಡಿಲ್ಲಿಯಲ್ಲಿಯೇ ಹಿಂದೂ-ಮುಸಲ್ಮಾನ್ ಘರ್ಷಣೆ ಆರಂಭವಾಯಿತು. ಆ ಸಂದರ್ಭದಲ್ಲಿ ಗಾಂಧೀಜೀ ತಮ್ಮ ಜೀವಮಾನದ ಕೊನೆಯ ಉಪವಾಸವನ್ನು ಮಾಡಿದರು. ಆಗ ಬರೆದ ಪತ್ರವಿದು :)

ಬಿರ್ಲಾ ಭವನ
ಹೊಸ ಡಿಲ್ಲಿ
೧೬-೧-೧೯೪೮

ಚಿ. ಮೀರಾ,

ನಿನ್ನೆ ನಿನ್ನ ಪತ್ರ ತಲಪಿತು. ಅದನ್ನು ನೀನು ಬರೆದಾಗ ನನ್ನ ಈ ಅತ್ಯಂತ ದೊಡ್ಡ ಉಪವಾಸದ* ವಿಷಯ ನಿನಗೆ ಗೊತ್ತಿರಲಿಲ್ಲವೆಂದು ಕಾಣುತ್ತದೆ. ಅದು ಯಾವ ರೀತಿ ಆದೀತೋ ಹೇಗೋ ಎಂಬ ಬಗೆಗೆ ನಾನಾಗಲೀ ನೀನಾಗಲೀ ಚಿಂತಿಸಬೇಕಾಗಿಲ್ಲ. ನಮ್ಮ ಚಿಂತೆ ಕಾರ್ಯದ ಬಗೆಗೆ; ಆದರ ಫಲಾಫಲಗಳ ಬಗೆಗಲ್ಲ. ಎಂದಿನಂತೆ ಪ್ರಾರ್ಥನೆಯಿಂದ ಉಪವಾಸ ಆರಂಭವಾಯಿತು. 'When I survey the wondrous Cross' † (ಅದ್ಭುತಶಿಲುಬೆಯನ್ನು ನಾನು ಅವಲೋಕಿಸಿದಾಗ) ಎಂಬುದು ಪ್ರಾರ್ಥನೆ ಯಲ್ಲಿ ಸೇರಿತ್ತು. ಸುಶೀಲಾ ಅದನ್ನು ಚೆನ್ನಾಗಿ ಹಾಡಿದಳು. ಆ ಪ್ರಾರ್ಥನಾ ಸಮಯದಲ್ಲಿ ಕೆಲವರು ಆತ್ಮೀಯ ಗೆಳೆಯರು ಇದ್ದರು. ಅವರೆಲ್ಲ ಸ್ವಯಂಪ್ರೇರಿತರಾಗಿ ಬಂದವರು, ಯಾರಿಗೂ ಆಹ್ವಾನವಿರಲಿಲ್ಲ. ಬೆಳಗಿನ ಜಾವ ೩-೩೦ರ ಪ್ರಾರ್ಥನೆಯ ತರುವಾಯ ಉಪವಾಸ ಮಾಡುವ ವ್ಯಕ್ತಿ ಯಾವ ಆಹಾರವನ್ನು ತೆಗೆದುಕೊಳ್ಳಬಹುದೆಂದು ನಿಯಮಿತವಾಗಿದೆಯೋ ಅದನ್ನು ಸೇವಿಸುತ್ತಾ ಇದನ್ನು ಹೇಳಿ ಬರೆಸುತ್ತಿದೇನೆ. ತಲ್ಲಣಗೊಳ್ಳ ಬೇಡ. ಎಂಟು ಔಂಸು ಬಿಸಿನೀರು ಆಹಾರ. ಇದನ್ನು ಸೇವಿಸುವುದು ಮಹಾಪ್ರಯಾಸ. ಅದು ಅಮೃತಕ್ಕೆ ಸಮಾನವೆಂದು ಅರಿತಿದ್ದರೂ ತೊಟ್ಟು

---

* ಇದನ್ನು ಮೇಲೆ ತಿಳಿಸಿದೆ.

† ಒಂದು ಪ್ರಿಯವಾದ ಗೀತೆ. ಮೀರಾ ಇದನ್ನು ಆಶ್ರಮದಲ್ಲಿ ಹಾಡು ತ್ತಿದ್ದರು. ಸುಶೀಲಾ ನಾಯರ್ ಅವರಿಗೆ ಕಲಿಸಿದ್ದರು.

ತೊಟ್ಟಾಗಿ ವಿಷ ಸೇವಿಸಿದಂತೆ ಸೇವಿಸಬೇಕಾಗಿದೆ. ಅದನ್ನು ಸೇವಿಸಿದಾಗ ನನಗೆ ಎಷ್ಟೋ ಉಪಶಮನವಾಗುತ್ತದೆ. ಹೀಗೆ ವಿಷಸದೃಶವಾದರೂ ಅಮೃತೋಪಮವಾದ ಈ ಬಗೆಯ ಆಹಾರವನ್ನು ಎಂಟು ಸಲ ಸೇವಿಸಲು ಶಕ್ತನಾಗಿದೇನೆಂದರೆ ವಿಚಿತ್ರವಲ್ಲವೆ! ಈ ರೀತಿಯಿದ್ದರೂ ನಾನು ಉಪವಾಸ ಮಾಡುತ್ತೇನೆಂದು ಹೇಳಿಕೊಳ್ಳುತ್ತೇನೆ. ಭಾವುಕ ಜನ ಅದನ್ನು ನಂಬುತ್ತಾರೆ!—ಎಂಥ ವಿಚಿತ್ರ ಪ್ರಪಂಚ.

* * * *

ನಿನ್ನ ವರ್ಣನೆ....ಕಾಮಧೇನುವೆಂದು ಕರೆಯಲ್ಪಟ್ಟು ಗೋಪೂಜೆಗೆ ಪ್ರಸಿದ್ಧವಾಗಿರುವ ಈ ದೇಶದಲ್ಲಿ ಗೋವಿನ ಭವಿಷ್ಯವೇನೆಂದು ಯಾರಿಗಾದರೂ ಅನಿಸೀತು. ಇಂಥ ದೇಶದಲ್ಲಿ ಸ್ವರಾಜ್ಯವೆಲ್ಲಿಂದ ಬಂತು.

ನಿನ್ನ ಆಶ್ರಮಕ್ಕೆ 'ಪಶುಲೋಕ'ವೆಂದು ಹೆಸರಿಟ್ಟಿರುವುದು ಅಮೋಘ ಅಭಿಪ್ರಾಯ. ಅದು ಕಾವ್ಯಮಯವಾಗಿದೆ. 'ಆಶ್ರಮದಲ್ಲಿ ಪಶುಲೋಕ' ಎಂದು ಬರೆಯಬೇಡ. 'ಆಶ್ರಮ—ಪಶುಲೋಕ' ಎನ್ನುವುದು ಚೆನ್ನ. ಇದನ್ನು ಕುರಿತು ನಾನು ಸ್ವಲ್ಪ ಆಳವಾಗಿ ಚಿಂತಿಸುತ್ತಿದೇನೆ. 'ಪಶುಲೋಕ—ಆಶ್ರಮ' ಎನ್ನುವುದು ನಿನ್ನ ಅಭಿಪ್ರಾಯವನ್ನು ಚೆನ್ನಾಗಿ ಪ್ರತಿಬಿಂಬಿಸಿತೇನೋ. ಏನೇ ಆಗಲಿ, ಅದು ನಿನ್ನ ಅಮೋಘ ಅಭಿಪ್ರಾಯವಾಗಿರುವುದರಿಂದ ಆಚರಣೆಗೆ ಬರಬೇಕು. ನಿನ್ನ ಆಯ್ಕೆಯೇ ಕೊನೆಯದು.

* * * *

ನಾನು ಉಪವಾಸ ಮಾಡುತ್ತಿರುವೆನೆಂದು ಇಲ್ಲಿಗೆ ಓಡಿ ಬರಬೇಡ. ಇದನ್ನು ನಾನು ಒಂದು ಯಜ್ಞವೆಂದು ಕರೆದಿದೇನೆ. ಯಾರುಯಾರು ಎಲ್ಲೆಲ್ಲಿ ಇದ್ದರೂ ಅಲ್ಲಲ್ಲೇ ತಮ್ಮ ಕರ್ತವ್ಯನಿರತರಾಗಿರಬೇಕೆಂಬುದು ಈ ಯಜ್ಞದ ಬೇಡಿಕೆ. ಸಾಕಷ್ಟು ಮಂದಿ ಈ ರೀತಿ ಮಾಡಿದರೆ ನಾನು ಅಗ್ನಿಪರೀಕ್ಷೆಯಿಂದ ಪಾರಾದೇನು. ಭಗವಂತನನ್ನು ನಂಬು. ಇದ್ದೆಡೆಯಲ್ಲೇ ಇರು....

(ಇದು ಮೀರಾಗೆ ಬಾಪೂ ಬರೆದ ಕೊನೆಯ ಪತ್ರ. ದೇಹಾಂತಕ್ಕೆ ಹನ್ನೊಂದು ದಿನಗಳ ಹಿಂದೆ ಬರೆದುದು.)

ಪೋಸ್ಟ್‌ಕಾರ್ಡ್ ಹೊಸ ಡಿಲ್ಲಿ

೧೯-೧-೧೯೪೮

ಚಿ. ಮೀರಾ,

ನಿನ್ನ ಪತ್ರ. ಎಲ್ಲ ಆತಂಕ* ಮುಕ್ತಾಯವಾಗಿದೆ. ಉಪವಾಸ ಮಾಡುತ್ತಿದ್ದಾಗ ಬರೆದ ಪತ್ರ ನಿನಗೆ ತಲಪಿದೆಯೆಂದು ನಂಬಿದೇನೆ. ನಾನು ಶಕ್ತಿಮೀರಿ ಕೆಲಸಮಾಡುತ್ತಿದೇನೆ. ಹರಿಜನ ಪತ್ರಿಕೆಗೆ ನೀನು ಕಳಿಸಿರುವ ಟಿಪ್ಪಣಿಗೆ ಗಮನ ಕೊಡಲಾಗುವುದು.

ಪ್ರೀತಿ,

ಬಾಪೂ

---

* ಉಪವಾಸ ಮತ್ತು ಕೋಮುವಾರು ಘರ್ಷಣೆ.

## ೭. ಎಸ್ತರ್ ಫೇರಿಂಗ್ ಅವರಿಗೆ

(೧೯೧೬ರಲ್ಲಿ, ಎಸ್ತರ್ ಫೇರಿಂಗ್ ಎಂಬ ಯುವತಿ ಡೆನ್ಮಾರ್ಕಿನಿಂದ ದಕ್ಷಿಣ ಭಾರತಕ್ಕೆ ಬಂದು ಡೇನಿಷ್ ಮಿಷನರಿ ಸಂಸ್ಥೆಯಲ್ಲಿ ಸೇವೆಸಲ್ಲಿಸುತ್ತಿದ್ದಳು. ಆಕೆ ಒಳ್ಳೆ ವಿದ್ಯಾವಂತೆಯಾಗಿದ್ದುದರಿಂದ ಮಿಷನ್ ಸಂಸ್ಥೆಯು ಆಶ್ರಯದಲ್ಲಿ ಹೆಣ್ಣು ಮಕ್ಕಳ ಶಿಕ್ಷಣವನ್ನು ಏರ್ಪಡಿಸಬೇಕಾಯಿತು. ಆದುದರಿಂದ ಹಿಂದೂಸ್ಥಾನದಲ್ಲಿ ಯಶಸ್ವಿಯಾಗಿ ನಡೆಯುತ್ತಿದ್ದ ಶಿಕ್ಷಣಪ್ರಯೋಗಗಳನ್ನು ಪ್ರತ್ಯಕ್ಷ ಅರಿತು ಬರಲು ಮಿಸ್ ಆನ್ ಮೇರಿ ಪೀಟರ್‌ಸನ್ ಎಂಬ ಇನ್ನೊಬ್ಬ ಹಿರಿಯ ಕಾರ್ಯಕರ್ತೆಯೊಡಗೂಡಿ ಪ್ರವಾಸ ಕೈಗೊಂಡಳು ಆಕೆ. ಗಾಂಧೀಜೀ ಆಗತಾನೆ ದಕ್ಷಿಣ ಆಫ್ರಿಕಾದಿಂದ ಹಿಂದಿರುಗಿ ಬಂದಿದ್ದರು; ಅಹಮದಾಬಾದಿನ ಬಳಿ ಸಾಬರಮತಿ ಆಶ್ರಮವನ್ನು ಸ್ಥಾಪಿಸಿ ನಡೆಸುತ್ತಿದ್ದರು. ಫೇರಿಂಗ್, ಆಶ್ರಮಕ್ಕೆ ಭೇಟಿಯಿತ್ತು ಅಲ್ಲಿನ ಜೀವನ ಶಿಕ್ಷಣವಿಧಾನವನ್ನು ಕಂಡು ಅದಕ್ಕೆ ಮಾರುಹೋದಳು. ಆಶ್ರಮದ ಸರಳಜೀವನ, ಶ್ರಮನಿಷ್ಠೆ, ಭಾರತೀಯ ಸಂಸ್ಕೃತಿಯ ಆಧಾರದ ಮೇಲೆ ರೂಪುಗೊಂಡ ಸಮಷ್ಟಿ ಜೀವನ—ಇವೆಲ್ಲ ಆಕೆಯ ಮನಸ್ಸಿನ ಮೇಲೆ ಪ್ರಚಂಡ ಪರಿಣಾಮ ಮಾಡಿದವು. ಕೆಲವೇ ದಿವಸಗಳು ಮಾತ್ರ ಆಕೆ ಆಶ್ರಮದಲ್ಲಿ ಇದ್ದರೂ ಗಾಂಧೀಜೀಗೂ ಆಕೆಗೂ ಬೆಳೆದ ಸಂಬಂಧ ಗಾಢವಾದ ಪ್ರೀತಿಯಲ್ಲಿ ಪರ್ಯವಸಾನಗೊಂಡಿತು. ಗಾಂಧೀಜೀ ಆಕೆಯನ್ನು ತಮ್ಮ 'ಪುತ್ರಿ'ಯೆಂದೇ ಸ್ವೀಕರಿಸಿದರು. ಇದನ್ನು ಕುರಿತು ಅವರೇ ಒಂದೆಡೆ ಹೀಗೆ ಹೇಳಿಕೊಂಡಿದಾರೆ: 'ಎಸ್ತರ್ ನನ್ನ ಔರಸಪುತ್ರಿಗಿಂತಲೂ ಹೆಚ್ಚು. ಅವಳು ಪ್ರೀತಿಯಿಂದ ಆ ಹಕ್ಕನ್ನು ಹೊಂದಿದಾಳೆ.' ಆಕೆಗೆ 'ನನ್ನ ಪ್ರಿಯ ಮಗು' **(My Dear Child)** ಎಂಬುದಾಗಿಯೇ ಸಂಬೋಧಿಸಿ ಪತ್ರ ಬರೆಯುತ್ತಿದ್ದರು. ಅವರ ವಾತ್ಸಲ್ಯಭಾವ, ಇಲ್ಲಿ ಕೊಟ್ಟಿರುವ ಪ್ರತಿಯೊಂದು ಪತ್ರದಲ್ಲಿಯೂ ಎದ್ದು ಕಾಣುತ್ತದೆ.)

## ನೀವು ನಮ್ಮ ಕುಟುಂಬದವರೇ

(ಎಸ್ತರ್ ಆಶ್ರಮದಲ್ಲಿ ಕೆಲವು ಕಾಲವಿದ್ದು ಬೊಂಬಾಯಿಗೆ ಹೋದರು. ಅಲ್ಲಿಂದ ಬರೆದ ಪತ್ರಕ್ಕೆ ಬಾಪೂ ಕೊಟ್ಟ ಉತ್ತರವಿದು; ಬಾಪೂ ಆಕೆಗೆ ಬರೆದ ಮೊದಲನೆಯ ಪತ್ರ:)

ಪ್ರಿಯ ಎಸ್ತರ್,

ನೀನು ಬೊಂಬಾಯಿಯಿಂದ ಬರೆದ ಪತ್ರ ತಲಪಿ ಹರ್ಷವಾಯಿತು. ನೀವಿಬ್ಬರೂ* ನಮ್ಮನ್ನು ಅಗಲಿದುದು ನಮಗೆ ವ್ಯಥೆಯನ್ನುಂಟುಮಾಡಿದೆ. ನೀವು ನಮ್ಮ ಅತಿಥಿಗಳೆನ್ನುವಂತಿರಲಿಲ್ಲ; ನಮ್ಮ ಕುಟುಂಬದವರೇ ಆಗಿಬಿಟ್ಟಿದೀರಿ. ಮಿಸ್ ಪೀಟರ್‌ಸನ್ ಈ ವೇಳೆಗೆ ಚೇತರಿಸಿಕೊಂಡಿರಬೇಕೆಂದು ನಂಬಿದೇನೆ. ನಿನ್ನೆ ನಿಮಗೆ ಬಂದಿದ್ದ ಪತ್ರಗಳನ್ನೆಲ್ಲ ಕಳಿಸಿಕೊಟ್ಟೆ; ಈ ದಿನವೂ ಅದೇ ರೀತಿ ಮಾಡುತ್ತಿದೇನೆ.

ನಿಮ್ಮಿಬ್ಬರಿಗೂ ನನ್ನ ಅಭಿಮಾನ.

ಅಹಮದಾಬಾದ್ ನಿಮ್ಮ ವಿಶ್ವಾಸಿ,
೧೧–೧–೧೯೧೭ **ಮೋ. ಕ. ಗಾಂಧೀ**

## ಆಶ್ರಮಶಾಂತಿ

ಅಹಮದಾಬಾದ್
ಪ್ರಿಯ ಎಸ್ತರ್, ಜನವರಿ ೧೫, ೧೯೧೭

ನಿನ್ನ ಸೊಗಸಾದ ಪತ್ರ ತಲಪಿತು. ಮಿಸ್ ಪೀಟರ್‌ಸನ್ ಪೂರ್ಣವಾಗಿ ನೆಗಡಿಯಿಂದ ಪಾರಾಗಿದಾರೆಂದು ಕೇಳಿ ಹರ್ಷವಾಯಿತು.

ನಿಮಗೆ ಆಶ್ರಮದಲ್ಲಿ ಶಾಂತಿ ಲಭಿಸಿತೆಂದು ಅರಿತು ಸಂತೋಷವಾಯಿತು. ನಿಮ್ಮಿಬ್ಬರನ್ನೂ ನಾವು ಆಶ್ರಮಕುಟುಂಬದವರೆಂದೇ ಭಾವಿಸುತ್ತೇವೆ. ನಿಮಗೆ ಅಪೇಕ್ಷೆಯಾದಾಗ, ಬರುವುದಕ್ಕೆ ಸಾಧ್ಯವಾದಾಗ ಬನ್ನಿ.

ರಾಮದಾಸ್† ಒಳ್ಳೆಯ ಹುಡುಗ. ಈಗ ಅವನು ದಕ್ಷಿಣ ಆಫ್ರಿಕಾಕ್ಕೆ ಹೋಗುವವನಿದಾನೆ. ಅಲ್ಲಿ ಒಳ್ಳೆ ಜವಾಬುದಾರಿಯಿಂದ

---

* ಮಿಸ್ ಪೀಟರ್‌ಸನ್, ಇನ್ನೊಬ್ಬರು.

† ಗಾಂಧೀಜೀಯ ಒಬ್ಬ ಮಗ.

ವರ್ತಿಸುವನೆಂದು ನನಗೆ ನಂಬಿಕೆಯಿದೆ. ಈಗ ಸಿದ್ಧತೆ ಮಾಡಿಕೊಳ್ಳುತ್ತಿದಾನೆ; ಒಂದು ಮುದ್ರಾಲಯದಲ್ಲಿ ಅಚ್ಚುಮೊಳೆ ಜೋಡಿಸುವ ಕೆಲಸವನ್ನು ಅಭ್ಯಾಸಮಾಡುತ್ತಿದಾನೆ.

ನೀನು ನಿನ್ನ ವ್ಯಾಸಂಗದಲ್ಲಿ ಪೂರ್ಣ ಮನಸ್ಸನ್ನು ಇಟ್ಟು ಆದಷ್ಟು ಜಾಗ್ರತೆ ನಿನ್ನ ಉದ್ದೇಶಕ್ಕೆ ನೆರವಾಗುವಷ್ಟು ತಮಿಳನ್ನು ಮಾತನಾಡಲು ಕಲಿಯುವೆಯೆಂದು ನಂಬಿದೇನೆ.

ನಿನಗೆ ಇಷ್ಟವಿರುವ ತನಕ ಆಶ್ರಮನಿಯಮಾವಳಿಯನ್ನು ಪಾಲಿಸು.

ನಿನ್ನ,
**ಮೋ. ಕ. ಗಾಂಧೀ**

## ಪೋಲಕ್ ದಂಪತಿಗಳ* ಕ್ಷೇಮ ಕುರಿತು

ಅಹಮದಾಬಾದ್
ಮಾರ್ಚ್ ೨೦, ೧೯೧೭

ಪ್ರಿಯ ಎಸ್ತರ್,

ನನ್ನ ಒಬ್ಬ ಆಂಗ್ಲ ಮಹಿಳಾ ಗೆಳತಿಯೂ ಮತ್ತು ಆಕೆಯ ತಂಗಿಯ ಮಕ್ಕಳೂ ಬೇಸಗೆಯಲ್ಲಿ ಯಾವುದಾದರೊಂದು ಪರ್ವತಧಾಮದಲ್ಲಿರಲು ಅಪೇಕ್ಷಿಸಿದಾರೆ. ನೀನು ಅಂಥದೊಂದು ಸ್ಥಳಕ್ಕೆ ಹೋಗುವವಳಿದೀಯೆ. ನೀನು ಹೋಗುವ ಸ್ಥಳಕ್ಕೆ ಅವರೂ ಬಂದರೆ, ಅವರೊಂದಿಗೆ ಸ್ನೇಹ ಬೆಳೆಸಲು ಸಾಧ್ಯವೆ? ಅವರು ತಮ್ಮ ವೆಚ್ಚವನ್ನು ತಾವೇ ವಹಿಸುತ್ತಾರೆ. ಅವರಿಗೆ ಬೇಕಾಗಿರುವುದು ಒಳ್ಳೆಯ ಸಂಗಾತಿಗಳು. ಇದಕ್ಕೆ ನಿಮ್ಮನ್ನೇ ಯೋಚಿಸಿದೆ. ನೀನೂ ಅವರ ಗೆಳೆತನ ಅಪೇಕ್ಷಿಸಿದರೆ, ಎಲ್ಲಿಗೆ ಹೋಗುವೆ? ಯಾವಾಗ? ಎಲ್ಲಿ ಇಳಿದುಕೊಳ್ಳುವೆ? ನೀನು ಇರುವ ಎಡೆಯಲ್ಲಿಯೇ ಅವರೂ ಇದ್ದು, ಊಟ–ವಸತಿ ಹೊಂದಲು ಸಾಧ್ಯವೆ? ಅಲ್ಲಿ ವೆಚ್ಚವೆಷ್ಟು? ಇದನ್ನೆಲ್ಲ ತಿಳಿಸು. ನೀನು ಶ್ರೀ ಪೋಲಕ್ ಅವರ ವಿಚಾರವಾಗಿ ಕೇಳಿರ

---

* ದಕ್ಷಿಣ ಆಫ್ರಿಕಾದಲ್ಲಿ ಗಾಂಧೀ ಕುಟುಂಬದವರಾಗಿಯೇ ವಾಸಿಸುತ್ತಿದ್ದ ಆಂಗ್ಲ ದಂಪತಿಗಳು.

ಬಹುದು. ನಿನ್ನ ಗೆಳತಿ ಅವರ ಸಾದಿನಿ. ಶ್ರೀ ಮತ್ತು ಶ್ರೀಮತಿ ಪೋಲಕ್ ಅವರು ಸಾರ್ವಜನಿಕ ಕೆಲಸದಮೇಲೆ ಪ್ರಯಾಣ ಮಾಡುವವರಿದಾರೆ. ಅವರು ತಮ್ಮ ಮಕ್ಕಳನ್ನು ತಮ್ಮ ಸಾದಿನಿಯೊಂದಿಗೆ ಯಾವುದಾದರೊಂದು ಪರ್ವತಧಾಮದಲ್ಲಿ ಒಳ್ಳೆಯ ಸಹವಾಸದಲ್ಲಿ ಇಡಲು ಕಾತುರರಾಗಿದಾರೆ. ಆಕೆ ಭಾರತಕ್ಕೆ ಹೊಸಬಳಾಗಿದಾಳೆ.

ನಮ್ಮೆಲ್ಲರ ಪ್ರೀತಿ.

ನಿನ್ನ ವಿಶ್ವಾಸಿ,

**ಮೋ. ಕ. ಗಾಂಧೀ**

ಪೋಲಕ್ ದಂಪತಿಗಳು ಬಹುಶಃ ಸೋಮವಾರ ಅಹಮದಾಬಾದನ್ನು ಬಿಡುವವರಿದಾರೆ. ಆದುದರಿಂದ ನೀನು ದಯಮಾಡಿ ತಾರನ್ನು ಕಳಿಸು.

ಗಾಂಧೀ, ಅಹಮದಾಬಾದ್, ಈ ವಿಳಾಸಕ್ಕೆ ಕಳಿಸಿದರೆ ತಾರು ನನಗೆ ತಲಪುತ್ತದೆ.

**ಮೋ. ಕ. ಗಾಂ.**

ಅಹಮದಾಬಾದ್

ಮಾರ್ಚ್ ೩೧, ೧೯೧೭

ಪ್ರಿಯ ಎಸ್ತರ್,

ಶ್ರೀಮತಿ ಪೋಲಕ್‌ರವರ ಸಹೋದರಿಯ ಸಲುವಾಗಿ ನಾನು ನಿನ್ನನ್ನು ಬಹಳ ಕಷ್ಟಕ್ಕೀಡುಮಾಡಿದೇನೆ. ಆದರೆ ನಾನು ನಿನಗೆ ಸಹೋದರನಾಗುವ ಸೌಭಾಗ್ಯವನ್ನು ನೀಡಿದೀಯೆ. ಯಾರು ನನಗೆ ಅತ್ಯಂತ ಪ್ರಿಯರೋ, ಅತ್ಯಂತ ಸಮೀಪವರ್ತಿಗಳೋ ಅವರಿಗೆ ಅತ್ಯಂತ ಹೊಣೆಗಾರಿಕೆಯನ್ನು ಕೊಡುವೆನೆಂದು ಹೆಸರುಪಡೆದಿದೇನೆ. ನೀನು ಈ ರೀತಿ ಇರಲು ಅಪೇಕ್ಷಿಸಿರುವುದರಿಂದ ಹೊಣೆಯನ್ನು ಹೊರುವುದರಲ್ಲಿಯೇ ತೃಪ್ತಳಾಗಬೇಕು.

ಶ್ರೀಮತಿ ಪೋಲಕ್ ಅವರ ಸಹೋದರಿಯ ಹೆಸರು ಮಿಸ್ ಗ್ರಹಾಂ. ಈಕೆ ತತ್‌ಕ್ಷಣ ಉದಕಮಂಡಲಕ್ಕೆ ಹೋಗಲು ಸಾಧ್ಯ. ಆಕೆಯೂ, ಪೋಲಕರ ಮಗನೂ ವಿಳಂಬವಿಲ್ಲದೆ ಪರ್ವತಧಾಮದಲ್ಲಿರಬೇಕಾದುದು

ಆಗತ್ಯವಾಗಿದೆ. ನಾನು ಈ ಸಾರಿ ಏಪ್ರಿಲ್ ತಿಂಗಳಲ್ಲಿ ಮದರಾಸಿಗೆ ಬರಲು ಸಾಧ್ಯವಾಗಲಾರದೆಂದು ಅನಿಸುತ್ತಿದೆ. ಒಂದುವೇಳೆ ಬರುವುದೇ ಆದರೆ, ನೀನು ಪರ್ವತದಿಂದ ಇಳಿದುಬಂದ ತರುವಾಯ ಸಾಧ್ಯವಾದೀತೇನೋ.

ನಿನಗೂ ಮಿಸ್ ಪೀಟರ್‌ಸನ್‌ಗೂ ನಮ್ಮ ಪ್ರೀತಿ.

ನಿನ್ನ ವಿಶ್ವಾಸಿ,
**ಮೋ. ಕ. ಗಾಂಧೀ**

## ನಾನು ಇನ್ನೇನು ಬಂಧಿತನಾಗುವವನಿದೇನೆ

(ಈ ಪತ್ರ ಬೀಹಾರಿನ ಚಂಪಾರಣ್ಯ ಸತ್ಯಾಗ್ರಹದ ಸಮಯದಲ್ಲಿ ಬರೆದುದು.)

ನನ್ನ ಪ್ರಿಯ ಎಸ್ತರ್,

ನಾನು ಇನ್ನೇನು ಬಂಧಿತನಾಗುವವನಿದೇನೆ ಎಂದು ತಿಳಿಸಲು ನೀನು ಅಪೇಕ್ಷಿಸುವೆಯೆಂದು ನನಗೆ ಗೊತ್ತು. ಕಾರ್ಮಿಕರ* ಕೆಲವು ಸಮಸ್ಯೆಗಳನ್ನು ಪರಿಹರಿಸಲು ನಾನು ಇಲ್ಲಿಗೆ ಬಂದಿದೇನೆ. ಅಧಿಕಾರಿಗಳಿಗೆ ನಾನು ಬೇಡವಾಗಿದೇನೆ. ಆದುದರಿಂದ ಇಷ್ಟರಲ್ಲೇ ಬಂಧಿತನಾಗಬಹುದು. ಆಶ್ರಮದಲ್ಲಿರುವ ಶ್ರೀ ಎಂ. ಅವರನ್ನು ಕೆಲವು ವೃತ್ತಪತ್ರಿಕೆಗಳನ್ನು ಕಳಿಸಬೇಕೆಂದು ಕೇಳು. ಎಲ್ಲ ನಿನಗೇ ಗೊತ್ತಾಗುತ್ತದೆ. ಅಂತಃಸಾಕ್ಷಿಯ ಸಲುವಾಗಿ ನಾನು ಬಂಧಿತನಾಗುತ್ತೇನೆಂಬುದು ಅತ್ಯಂತ ಹರ್ಷದ ವಿಷಯ.

ನಿನ್ನ,
(ನನ್ನ ಸಹಿಯನ್ನು ಅಪೇಕ್ಷಿಸಿದರೆ)
**ಬಾಪೂ**

## ಪ್ರೇಮತತ್ತ್ವ

ನದಿಯಾದ್
ಮೇ ೧೧, ೧೯೧೭

ನನ್ನ ಪ್ರಿಯ ಎಸ್ತರ್,

ನಿನ್ನ ಕಾಗದ ಬಂದಿತು. ಕ್ರಿಸ್‌ಮಸ್ ಕಾಲದಲ್ಲಿ ನೀನು ಆಶ್ರಮಕ್ಕೆ ಬರುತ್ತೀಯೆಂದು ನಾನು—ನಾವು—ನಿರೀಕ್ಷಿಸುತ್ತಿದೇವೆ. ಆ ವೇಳೆಗೆ

* ನೀಲಿ ತೋಟದ ಕಾರ್ಮಿಕರು.

ಪ್ರಧಾನ ಕಟ್ಟಡ ಮುಗಿದಿರುತ್ತದಲ್ಲದೆ ಹವಾಗುಣವೂ ಹರ್ಷಕರವಾಗಿ ಇರುತ್ತದೆ.

ನಾನು ವೈಸ್‌ರಾಯರಿಗೆ ಬರೆದಿರುವ ಪತ್ರವನ್ನೂ ಮಿ. 'ಪಿ' ಅವರ ಭಾಷಣಕ್ಕೆ ಉತ್ತರರೂಪವಾಗಿ ಬರೆದಿರುವ ಪತ್ರವನ್ನೂ ನೀನು ಓದಿರಬೇಕು. ಅವುಗಳಲ್ಲಿ ಸರಕಾರದ ಬಗೆಗೆ ನನ್ನ ಅಭಿಪ್ರಾಯಗಳನ್ನೂ ಜೀವನತತ್ತ್ವವನ್ನೂ ಸಂಗ್ರಹರೂಪದಲ್ಲಿ ಕಾಣಬಹುದು. ವೈಸ್‌ರಾಯ್ ಅವರಿಗೆ ಬರೆದಿರುವ ಪತ್ರದಲ್ಲಿ ಪ್ರೇಮತತ್ತ್ವ ಮತ್ತು ಕ್ಲೇಶಾನುಭವ ಇವುಗಳ ಬಗೆಗೆ ಸನ್ನ ಅಭಿಪ್ರಾಯಗಳನ್ನು ಅತ್ಯಂತ ಸ್ಪಷ್ಟವಾದ ರೂಪದಲ್ಲಿ ಕಾಣಬಹುದು. ಸಾತ್ವಿಕ ಪ್ರತಿಭಟನೆ ಈ ಅಭಿಪ್ರಾಯವನ್ನು ಅತ್ಯಂತ ಸ್ಥೂಲರೂಪದಲ್ಲಿ ವ್ಯಕ್ತಪಡಿಸುತ್ತದೆ. ನನಗೆ ಆ ಶಬ್ದ ಪ್ರಿಯವಲ್ಲ; ದುರ್ಬಲರ ಅಸ್ತ್ರವೆಂದು ಪರಿಗಣಿಸಲ್ಪಟ್ಟಾಗಲಂತೂ ಅದು ಪ್ರೇಮತತ್ತ್ವವನ್ನು ವಿರೂಪಗೊಳಿಸುತ್ತದೆ. ಪ್ರೇಮವು ಶಕ್ತಿಸಂಕೇತ. ಪೂರ್ಣ ನಿರ್ಭಯತೆ ಇರುವೆಡೆ ಮಾತ್ರ ಅದು ಸ್ವತಂತ್ರವಾಗಿ ಪ್ರವಹಿಸೀತು. ಪ್ರೀತಿಪಾತ್ರರಾದವರಿಗೆ ಶಿಕ್ಷೆಯಾದರೆ ಅದು ಆತ್ಮಕ್ಕೆ ಉಪಶಾಮಕವಿದ್ದಂತೆ.

ನಿನ್ನ ಪಿತ್ತವ್ಯಾಧಿಯನ್ನು ಸರಿಪಡಿಸಿಕೊಳ್ಳಲು ನೀನು ಪೂರ್ಣ ಉಪವಾಸವನ್ನು ಪ್ರಯತ್ನಿಸುವುದಿಲ್ಲವೆ ? ಎಷ್ಟು ಬೇಕಾದರೂ ಮರಳಿಸಿದ ನೀರನ್ನು ಸೇವಿಸು; ಅದು ಸಾಲದೆನಿಸಿದರೆ, ಕಿತ್ತಲೆಹಣ್ಣಿನ ರಸವನ್ನು ನೀರಿನಲ್ಲಿ ಸೇರಿಸಿ, ತೆಳವು ಮಾಡಿ ತೆಗೆದುಕೋ. ದೌರ್ಬಲ್ಯ ಕಂಡುಬಂದರೆ ಹಾಸಿಗೆಯಲ್ಲಿಯೇ ಮಲಗಿರು. ತಣ್ಣೀರಿನಲ್ಲಿ ಕಟಿಸ್ನಾನವನ್ನು ಮಾಡುವುದು ಇನ್ನೂ ಉತ್ತಮ. ಇದು ಒಳ್ಳೆ ಚೇತನಕಾರಿ. ಪಿತ್ತವಿಕಾರಕ್ಕೆ ಉಪವಾಸಕ್ಕಿಂತ ಬೇರೆ ಯಾವ ಚಿಕಿತ್ಸೆಯೂ ಇಲ್ಲ.

ನಿನ್ನ,

**ಬಾಪೂ**

## ಒತ್ತಾಯವಿಲ್ಲದೆ ಸರಕಾರಗಳು ಕಾರ್ಯೋನ್ಮುಖವಾಗುವುದು ಅಪರೂಪ.

ಬೆಟ್ಟಿಯಾ*
ಮೇ ೨೬, ೧೯೧೭

ನನ್ನ ಪ್ರಿಯ ಎಸ್ತರ್,

ನಿನ್ನ ಪತ್ರ ಬಹಳ ಸೊಗಸಾಗಿದೆ. ಅದನ್ನು ಪೋಲಕ್ ದಂಪತಿಗಳು ಓದುವುದಕ್ಕೂ ಅನಂತರ ಅಹಮದಾಬಾದಿಗೆ ರವಾನಿಸುವುದಕ್ಕೂ ಸ್ವಾತಂತ್ರ್ಯ ತೆಗೆದುಕೊಂಡಿದೇನೆ. ಈ ಬಗೆಯ ಸ್ವಾತಂತ್ರ್ಯ ತೆಗೆದು ಕೊಂಡಿರುವುದನ್ನು ನೀನು ಪ್ರಶ್ನಿಸುವುದಿಲ್ಲ ಎಂದು ನಂಬಿದೇನೆ.

ನೀಲಿ ವ್ಯವಸಾಯ† ಮಾಡದಿರುವವರೂ ಅನ್ಯಾಯವಾದ ಲಾಭ ಗಳಿಸಲು ಅಪೇಕ್ಷಿಸುತ್ತಾರೆ. ಅವರು ಏನೋ ಕ್ಷುಲ್ಲಕ ಕೂಲಿಯೆಂಬಂತೆ ಕೊಟ್ಟು ರೈತರನ್ನು ತಮ್ಮ ಹೊಲಗಳಲ್ಲಿ ಬಲಾತ್ಕಾರದಿಂದ ಕೆಲಸ ಮಾಡಿ ಸುತ್ತಾರೆ; ಎಷ್ಟೋ ಸಲ ಕೂಲಿಯನ್ನೂ ಕೊಡುವುದಿಲ್ಲ. ಗುತ್ತಿಗೆ ಯಲ್ಲದೆ ಇನ್ನೂ ಹೆಚ್ಚಿಗೆ ಕೊಡುವಂತೆ ಮಾಡುತ್ತಾರೆ. ಗುಲಾಮರ ಸ್ಥಿತಿಗಿಂತ ಏನೂ ಉತ್ತಮವಾಗಿಲ್ಲ ಅವರ ಸ್ಥಿತಿ. ನಾನು ಕಳಿಸಿರುವ ಇತರ ಪತ್ರಿಕೆಗಳು ಈ ಪ್ರಶ್ನೆಯ ಮೇಲೆ ಹೆಚ್ಚು ಬೆಳಕನ್ನು ಚೆಲ್ಲುತ್ತವೆ. ಇದಕ್ಕೆ ತೋಟಗಳ ಮಾಲೀಕರೇ ಕಾರಣ ಎಂದು ನಿಂದಿಸಬೇಕಾಗಿಲ್ಲ. ಅವರು ಆಂಗ್ಲೇಯರು. ಭಾರತೀಯ ಜಮೀನುದಾರರು ಯಾವ ರೀತಿಯಲ್ಲೂ ಉತ್ತಮ ಇಲ್ಲ; ಕೆಲವರಂತೂ ಬಹಳ ಕೆಟ್ಟವರು. ಈ ಅನ್ಯಾಯ ಇಷ್ಟು ದೂರ ಮುಂದುವರಿಯಲು ಕಾರಣ ಸಾರ್ವಜನಿಕರ ಅಜ್ಞಾನ. ಒತ್ತಾಯ ಇಲ್ಲದೆ ಸರಕಾರಗಳು ಕಾರ್ಯೋನ್ಮುಖವಾಗುವುದು ಅಪರೂಪ.

ನಿನಗಂತೂ ಎಲ್ಲ ಭಾಷೆಗಳಿಗಿಂತಲೂ ತಮಿಳಿಗೇ ಪ್ರಧಾನ ಸ್ಥಾನ, ನೀನು ದೇವನಾಗರೀ ಲಿಪಿಯನ್ನೂ ಅಭ್ಯಸಿಸಿದರೆ ಅತ್ಯಂತ ಉಪಯೋಗ ವಾದೀತು. ಅದು ಬಹಳ ಸುಲಭ; ಪ್ರಪಂಚದ ವರ್ಣಮಾಲೆಗಳಲ್ಲೆಲ್ಲ

---

* ಬೀಹಾರದಲ್ಲಿದೆ.

† ಚಂಪಾರಣ್ಯ ಸತ್ಯಾಗ್ರಹಕ್ಕೆ ಅದೇ ಕಾರಣ.

ಅತ್ಯಂತ ಪರಿಪೂರ್ಣವಾದುದು, ಒಂದು ವರ್ಣಕ್ಕೆ ಒಂದು ಧ್ವನಿ; ಬಹುತೇಕ ಎಲ್ಲ ಧ್ವನಿಗಳೂ ಪ್ರತಿನಿಧಿಸಲ್ಪಟ್ಟಿವೆ.

ನಿನ್ನ,
**ಬಾಪೂ**

## ಭಾರತದಲ್ಲಿರುವ ಐರೋಪ್ಯರು

ಬೆಟ್ಟಿಯಾ
ಜೂನ್ ೯, ೧೯೧೭

ನನ್ನ ಪ್ರಿಯ ಎಸ್ತರ್,

ನಾನು ರಾಂಚಿಗೆ ಹೋಗಿದ್ದ ವಿಷಯವನ್ನು ನೀನು ಪತ್ರಿಕೆಗಳಲ್ಲಿ ಓದಿರಬೇಕು. ಅಲ್ಲಿಂದ ನಿನ್ನೆ ಹಿಂದಕ್ಕೆ ಬಂದೆ. ನಿನ್ನ ಪತ್ರಗಳೆಲ್ಲ ಬಂದಿವೆ.

ನಿನ್ನ ಪ್ರಶ್ನೆಗೆ ಉತ್ತರ ಕಠಿಣ. ಒಟ್ಟಿನಲ್ಲಿ, ಐರೋಪ್ಯರ ಚಟುವಟಿಕೆಗಳು ಭಾರತೀಯರಿಗೆ ಹಿತವಾಗಿಲ್ಲ. ಅವರಲ್ಲಿ ಬಹುತೇಕ ಮಂದಿ ತಮ್ಮ ಸದ್ಗುಣವನ್ನು ಹರಡುವುದಕ್ಕೆ ಪ್ರತಿಯಾಗಿ ಪೌರ್ವಾತ್ಯರ ದೋಷಗಳಿಗೆ ಬಲಿಯಾಗಿದಾರೆ. ಹಾಗೆ ಮಾಡದಿದ್ದರೆ ಅವರಿಗೆ ಒಳಿತೇ ಇಲ್ಲ. ಧರ್ಮವು ಅವರ ಮೇಲೆ ಯಾವ ಶಾಶ್ವತ ಪರಿಣಾಮವನ್ನೂ ಮಾಡಿಲ್ಲ. ಅದಕ್ಕೆ ಇಂದಿನ ಯುದ್ಧವೇ* ನಿದರ್ಶನ, ಆಧುನಿಕ ನಾಗರಿಕತೆ ಕ್ರೈಸ್ತಧರ್ಮಕ್ಕೆ ವಿರುದ್ಧವೆಂದು ನನ್ನ ಸ್ಪಷ್ಟ ಸಿದ್ಧಾಂತ. ಐರೋಪ್ಯರು ಭಾರತಕ್ಕೆ ತಂದಿರುವ ನಾಗರಿಕತೆಯಾದರೂ ಅದೇ; ಅವರು ಜೀಸಸನ ಬಾಳಿನ ಉಪದೇಶವನ್ನು ತಂದಿಲ್ಲ. ನೀನೂ ಮತ್ತೆ ಎಲ್ಲೋ ನಿನ್ನಂಥ ಕೆಲವರು ಮಾತ್ರ ಆ ಬಾಳನ್ನು ಪ್ರತಿನಿಧಿಸುತ್ತಿದೀರಿ. ಅದರ ಪರಿಣಾಮ ಈ ದೇಶದ ಮೇಲೆ ಆದೀತು. ಆದರೆ ಅದು ನಿಧಾನ, 'ಭಗವಂತನ ಗಿರಣಿ ನಿಧಾನವಾಗಿ ತಿರುಗುತ್ತದೆ.' ನೀನೂ ನಿನ್ನಂಥವರೂ ಎದುರಿಗೆ ನಿಂತ ಪಾಪದಿಂದ ಮುಕ್ತರಾಗಿದೀರಿ. ನೀವು ಅದನ್ನು ಬದಿಗಿಟ್ಟು ಅದರ ಹಿಂದಿರುವ

---

* ಪ್ರಥಮ ಜಾಗತಿಕ ಯುದ್ಧ.

ಒಳ್ಳೆಯದನ್ನು ಸಂಶೋಧಿಸಿ, ಅದರ ಜೊತೆಗೆ ನಿಮ್ಮ ಗುಣವನ್ನೂ ಸೇರಿಸಿ, ಪೂರ್ಣ ಸಂಯೋಗವನ್ನು ಮಾಡುತ್ತೀರಿ. ಇಂಥ ವಿಧಾನ ಪರಸ್ಪರ ನಡೆಯಲೆಂದೇ ನನ್ನ ಆಸೆ. ಆದುದರಿಂದಲೇ ನಾನು ನಿನ್ನನ್ನು ಆಶ್ರಮಕ್ಕೆ ಸ್ವಾಗತಿಸಿದುದು, ಹಾಗೆಯೇ ತಮ್ಮ ಶ್ರೇಷ್ಠ ಸಂಪ್ರದಾಯಕ್ಕೆ ನಿಜವಾಗಿ ನಡೆದುಕೊಳ್ಳುವ ಮತ್ತು ಈ ದೇಶ ನೀಡಬಹುದಾದ ಶ್ರೇಷ್ಠವಾದುದನ್ನು ವಿಶಾಲ ಮನಸ್ಸಿನಿಂದ ಸ್ವೀಕರಿಸುವ ಅನೇಕ ಐರೋಪ್ಯ ಗೆಳೆಯರನ್ನೂ ಸ್ವಾಗತಿಸುತ್ತೇನೆ. ನನ್ನ ಅಭಿಪ್ರಾಯ ಸ್ಪಷ್ಟವಾಯಿತು ತಾನೆ? ಇದನ್ನು ನೀನು ನನ್ನೊಂದಿಗೆ ಸ್ವತಂತ್ರವಾಗಿ ಇನ್ನೂ ಚರ್ಚಿಸಬಹುದು.

ಸರಕಾರ ನನ್ನನ್ನು ನೇಮಕ ಮಾಡಲಿರುವ ಸಮಿತಿಯೊಂದರಲ್ಲಿ* ನಾನು ಸೇವೆಸಲ್ಲಿಸುವವನಿದೇನೆ. ನನ್ನ ರಾಂಚೀ ಭೇಟಿ ಕುರಿತು ವಿವರಗಳ ಪತ್ರವೊಂದನ್ನು ಬರೆಯುತ್ತೇನೆ. ನಾನು ಅಲ್ಲಿಗೆ ಹೋಗಿಬಂದುದು ಒಳ್ಳೆಯದಾಯಿತು.

ಶ್ರೀಮತಿ ಗಾಂಧೀ ಮತ್ತು ದೇವದಾಸ್§ ಈಗ ಇಲ್ಲಿದಾರೆ, ಪೋಲಕ್ ಸಹ ಇದಾರೆ. ನಾನು ಬಂಧಿತನಾಗಿದ್ದರೆ ಶ್ರೀಮತಿ ಗಾಂಧೀ ಮತ್ತು ದೇವದಾಸ್ ರೈತರ ನಡುವೆ ಕೆಲಸಮಾಡುತ್ತಾ ಸಮರ ನಡೆಸಲು ಅವರಿಗೆ ಉತ್ತೇಜನ ನೀಡುತ್ತಿದ್ದರು. ನೀನು ಶ್ರೀಮತಿ ಗಾಂಧೀಯನ್ನು ಆದಷ್ಟು ಕ್ಷಿಪ್ರದಲ್ಲಿ ಭೇಟಿಯಾಗಬೇಕೆಂದು ನನ್ನ ಅತ್ಯಂತ ಅಭಿಲಾಷೆ.

ನಾನು ಅತಿಯಾಗಿ ದುಡಿಯುತ್ತಿದೇನೆಂದು ಭಾವಿಸಬೇಡ.

ನಮ್ಮೆಲ್ಲರ ಪ್ರೀತಿ.

ನಿನ್ನ,

**ಬಾಪೂ**

---

* ನೀಲಿ ಕೂಲಿಗಾರರ ಪರಿಸ್ಥಿತಿ ವಿಚಾರಣಾ ಸಮಿತಿ.

§ ಗಾಂಧೀಜೀಯ ಕೊನೆಯ ಮಗ.

## ದ್ವೇಷದ ನಡುವೆ ಪ್ರೇಮಜೀವನ

ಮೋತೀಹಾರಿ
ಜೂನ್ ೧೧, ೧೯೧೭

ನನ್ನ ಪ್ರಿಯ ಎಸ್ತರ್,

ಇಲ್ಲಿ ಒಂದು ದಿನ ಮಾತ್ರ ಇರುತ್ತೇನೆ. ನಾನು ರೈಲ್ವೆ ನಿಲ್ದಾಣಕ್ಕೆ ಹೋಗುವ ಮಾರ್ಗದಲ್ಲಿ ನಿನ್ನ ಪುಸ್ತಕ* ತಲಪಿತು. ನಾನು ದಕ್ಷಿಣ ಆಫ್ರಿಕಾದಲ್ಲಿದ್ದಾಗ ಹೊಂದಿರುತ್ತಿದ್ದ ಸಂತೋಷದ ಕಾಲವನ್ನು ನೆನಪಿಗೆ ತಂದಿತು. ಎಷ್ಟೋ ವರ್ಷಗಳ ಹಿಂದೆ ನನ್ನ ಪ್ರೀತಿಯ ಕ್ರೈಸ್ತ ಗೆಳೆಯರ ಸಹವಾಸದಲ್ಲಿ ಆ ಪುಸ್ತಕವನ್ನು ಓದಿದ್ದೆ. ಇಂದು ಹೆಚ್ಚು ಮೆಚ್ಚುಗೆಯಿಂದ ಓದಿದೇನೆ. ಒಂದು ಧರ್ಮಗ್ರಂಥದ ವಿಷಯವಾಗಿ ಹಾಗೆ ಹೇಳಬಹುದೋ ಹೇಗೋ ಕಾಣೆ: ಸತ್ಯ-ಪ್ರೇಮಗಳು ಪರ್ಯಾಯ ಶಬ್ದಗಳೆಂದು ನನ್ನ ಭಾವನೆ. ಸಾತ್ವಿಕ ಪ್ರತಿಭಟನೆಗೆ ಗುಜರಾತಿ ಭಾಷೆಯಲ್ಲಿ ಸತ್ಯಶಕ್ತಿ ಎಂದು ಹೆಸರಿರುವುದು ನಿನಗೆ ಗೊತ್ತಿಲ್ಲದಿರಬಹುದು. ನಾನು ಅದನ್ನು ಸತ್ಯಶಕ್ತಿ, ಪ್ರೇಮಶಕ್ತಿ ಅಥವಾ ಆತ್ಮಶಕ್ತಿ ಎಂಬ ಬೇರೆ ಬೇರೆ ಹೆಸರುಗಳಿಂದ ವಿವರಿಸಿದೇನೆ. ನಮ್ಮ ನಡುವೆ ಎಲ್ಲೆಲ್ಲೂ ದ್ವೇಷ ಕಂಡುಬರುತ್ತಿದೆ. ಇದರ ಕೂಡ ನಾವು ಪ್ರೇಮಜೀವನ ನಡೆಸಬೇಕು. ಅದರಲ್ಲಿ, ಅದರ ಸತ್ತ್ವದಲ್ಲಿ ಅವಿಚಲ ನಂಬಿಕೆಯಿದ್ದ ಹೊರತು ಇದನ್ನು ಸಾಧಿಸಲು ಶಕ್ಯವಿಲ್ಲ. ಇನ್ನೂರು ಮುನ್ನೂರು ವರ್ಷಗಳ ಹಿಂದೆ ಮೀರಾಬಾಯಿ ಎಂಬ ಪ್ರಸಿದ್ಧ ರಾಣಿ ಇದ್ದಳು. ಆಕೆ ತನ್ನ ಗಂಡನನ್ನೂ ಸಮಸ್ತ ಐಹಿಕ ಸುಖವನ್ನೂ ತ್ಯಜಿಸಿ, ಪರಮಪ್ರೇಮದ ಬಾಳನ್ನು ನಡೆಸಿದಳು. ಕೊನೆಗೆ ಅವಳ ಗಂಡನೂ ಅವಳ ಭಕ್ತನಾದ. ನಾವು ಆಶ್ರಮದಲ್ಲಿ ಆಗಾಗ ಅವಳು ರಚಿಸಿರುವ ಗೀತೆಗಳನ್ನು ಹಾಡುತ್ತೇವೆ. ನೀನು ಅವುಗಳನ್ನು ಕೇಳಬೇಕು. ಆಶ್ರಮಕ್ಕೆ ಬಂದಾಗ ಅವುಗಳನ್ನು ಹಾಡಬೇಕು.

ನಿನ್ನ ಅಮೂಲ್ಯ ಕೊಡುಗೆಗೆ ವಂದನೆ. ಆ ಗ್ರಂಥದಲ್ಲಿರುವ ಭಾವಗಳು ನನಗೆ ಅತ್ಯಂತ ಆವಶ್ಯಕ.

ಪ್ರೀತಿ,
ನಿನ್ನ,
**ಬಾಪೂ**

---

* I Corinthians—Chapter 13.

## ಆಂತರಿಕ ಬೆಳೆವಣಿಗೆ

ಮೋತೀಹಾರಿ

ನನ್ನ ಪ್ರಿಯ ಎಸ್ತರ್, ಜೂನ್ ೩೦, ೧೯೧೭

ನಿನ್ನ ಎರಡು ಪತ್ರಗಳು ನನ್ನ ಮುಂದಿವೆ. ನಾನು ೨೮ರಂದು ಅಹಮದಾಬಾದಿನಿಂದ ಹಿಂತಿರುಗಿ ಬಂದೆ. ಅಲ್ಲಿ ಬಹಳ ಚೆನ್ನಾಗಿತ್ತು.

ಪಟ್ಟಣದ ಜೀವನ ನನಗೆ ಯಾವಾಗಲೂ ಹಿಡಿಸದು; ಹಳ್ಳಿಯ ಜೀವನವೋ ಸ್ವತಂತ್ರ, ಚೇತನದಾಯಕ, ದೈವಭಕ್ತಿಪರ.

'ದೇವರು ನಮಗೆ ಕೊಟ್ಟಿರುವ ಅನೇಕ ಪ್ರತಿಭೆ, ಶಕ್ತಿಗಳು ಮತ್ತು ಜಾಣ್ಮೆ ಇವುಗಳನ್ನು ನಾವು ಉಪಯೋಗಿಸದಿದ್ದರೆ ಅವುಗಳನ್ನು ನೀಡಿರುವ ಉದ್ದೇಶವಾದರೂ ಏನು?' ನೀನು ಕೇಳಿರುವ ಪ್ರಶ್ನೆಯನ್ನು ನನ್ನನ್ನು ನಾನೇ ಕೇಳಿಕೊಂಡಿದ್ದೇನೆ, ಇದನ್ನೇ ಸಾವಿರಾರು ಮಂದಿ ಸದಾ ಕೇಳುತ್ತಾರೆ. ನನ್ನ ವಿನಮ್ರ ಅಭಿಪ್ರಾಯವಿಷ್ಟು: ದೇವರು ನಮ್ಮ ಮುಂದೆ ಇಟ್ಟಿರುವ ಪ್ರಲೋಭನೆಗಳ ಶಕ್ತಿಯೂ ನಮ್ಮನ್ನು ನೈತಿಕವಾಗಿ ಮೇಲಕ್ಕೆ ಎತ್ತುವ ಶಕ್ತಿಯಷ್ಟೇ ಪ್ರಭಾವವುಳ್ಳದು. ನಮ್ಮಲ್ಲಿರುವ ರಜಸಾತ್ಮಕ ಶಕ್ತಿಯನ್ನು ಆಂತರಿಕ ಬೆಳವಣಿಗೆಗಾದರೂ ಉಪಯೋಗಿಸಬಹುದು, ಇಲ್ಲವೇ ಬಾಹ್ಯ ಲೋಲುಪತೆಗಾದರೂ ಉಪಯೋಗಿಸಬಹುದು. ನಾನು ನನ್ನ ಪ್ರತಿಭೆಯನ್ನು ಹಿಮಾಲಯದಿಂದ ದಡದಡ ಬರುವ ಜಲಪಾತವನ್ನು ಉಪಯೋಗಕ್ಕೆ ತಿರುಗಿಸಲು ಪ್ರಯತ್ನಿಸಬಹುದು; ಇದರಿಂದ ಮಾನವ ಕುಲದ ಭೋಗಸೌಕರ್ಯಗಳನ್ನು ಮಾತ್ರ ಹೆಚ್ಚಿಸಿದಂತಾಗುತ್ತದೆ. ನನ್ನ ಅಂತರಂಗದ ಹಿಮಾಲಯ ಜಲಪಾತವನ್ನು ನಿಗ್ರಹಮಾಡಬಲ್ಲ ನಿಯಮಗಳನ್ನು ಪರಿಶೋಧಿಸುವುದಕ್ಕೂ ಆ ಪ್ರತಿಭೆಯನ್ನು ಉಪಯೋಗಿಸಬಹುದು; ಇದರಿಂದ ನಾನೂ ಉದ್ಧಾರವಾಗುವುದಲ್ಲದೆ ಮಾನವಲೋಕವನ್ನೂ ಉದ್ಧಾರಮಾಡಿ ಅದರ ಶಾಶ್ವತ ಶಾಂತಿಭಂಡಾರವನ್ನು ಹೆಚ್ಚಿಸಿಯೇನು. ಹೀಗೆ ನೀನು ಅನಂತ ಉದಾಹರಣೆಗಳನ್ನು ಕೊಟ್ಟು ನಿಮ್ಮ ಎಲ್ಲ ಪ್ರತಿಭೆಯನ್ನೂ ಆಂತರಿಕ ಬೆಳೆವಣಿಗೆಗೆ ಮಾತ್ರ ಉಪಯೋಗಿಸಬೇಕೆಂದೂ, ಅದು ಆತ್ಮನಿಗ್ರಹದಿಂದಲೇ ಸಾಧ್ಯವೆಂದೂ ತೋರಿಸಬಹುದು.

ಮಿ. ಬಿಟ್‌ಮನ್* ಅವರಿಗೆ ನನ್ನ ನೆನಪನ್ನು ನೀಡು. ನಿನಗೆ ವಿರಾಮವಾದಾಗಲೆಲ್ಲ ನೀನು ಆಶ್ರಮಕ್ಕೆ ಬರಲು ಆತ ಅನುಮತಿ ನೀಡುವುದಕ್ಕೆ ನನ್ನ ಪರವಾಗಿ ವಂದಿಸು.

ನಿನ್ನ ಸಂಪರ್ಕಕ್ಕೆ ಬಂದ ಎಲ್ಲ ಸ್ತ್ರೀಪುರುಷರನ್ನೂ ಸುಧಾರಣೆ ಮಾಡಬೇಕೆಂಬ ಬಗೆಗೆ ಆತುರಳಾಗಿರಬೇಡ. ನಮ್ಮನ್ನೇ ನಾವು ಮೊದಲು ಸುಧಾರಣೆ ಮಾಡಿಕೊಳ್ಳಬೇಕು. ಸುಧಾರಣೆಗೆ ಪ್ರಯತ್ನಿಸಿದಾಗ ನಾವು ಖಂಡಿಸಬೇಕಾಗುತ್ತದೆ.

ನಿನ್ನ,

**ಬಾಪೂ**

## ಅನಾವಶ್ಯಕ ವಸ್ತುಗಳು

ಮೋತೀಹಾರಿ

ನನ್ನ ಪ್ರಿಯ ಎಸ್ತರ್, ಜುಲೈ ೧೪, ೧೯೧೭

ನಾನು ಈಗತಾನೆ ರಾಂಚಿಯಿಂದ ಬಂದೆ. ನಿನ್ನ ಪತ್ರ ನನಗಾಗಿ ಕಾದಿತ್ತು.

ನೀನು ಸಸ್ಯಾಹಾರವನ್ನು ಪ್ರಾರಂಭಿಸಿರುವೆಯೆಂದು ಎಂದೂ ನನಗೆ ತಿಳಿಸಲಿಲ್ಲ. ಇದು ಧಾರ್ಮಿಕ ಮೌಲ್ಯವನ್ನು ಹೊಂದಿರುವುದಷ್ಟೇ ಅಲ್ಲ, ಈ ದೇಶದ ಹವಾಗುಣಕ್ಕೆ ಇದು ತಕ್ಕುದೆಂದು ನನ್ನ ನಂಬಿಕೆ. ಸಸ್ಯಾಹಾರಕ್ಕೆ ಪರಿವರ್ತನೆಹೊಂದಿದವರು ದ್ವಿದಳಧಾನ್ಯ, ಬೆಣ್ಣೆ, ಖೋವಾ ಮತ್ತು ಹಾಲು ಇವುಗಳನ್ನು ಮಾಂಸಾಹಾರಿಗಳು ಉಪಯೋಗಿಸುವುದಕ್ಕಿಂತ ಹೆಚ್ಚಾಗಿ ಉಪಯೋಗಿಸಬೇಕೆಂದು ಸಲಹೆ ಸಾಮಾನ್ಯವಾಗಿ ನೀಡಲಾಗುತ್ತದೆ. ಇದು ತಪ್ಪು. ದ್ವಿದಳಧಾನ್ಯಗಳನ್ನು ಮಿತವಾಗಿ ಉಪಯೋಗಿಸಬೇಕು. ಸಾಕಷ್ಟು ಹಾಲನ್ನು ಸೇವಿಸಿದರೆ ಬೆಣ್ಣೆ ಬಹಳ ಕಡಿಮೆ ಬೇಕಾದೀತು.

---

* ದಕ್ಷಿಣ ಭಾರತದಲ್ಲಿ ಡೇನಿಷ್ ಮಿಷನ್ ಸಂಸ್ಥೆಯ ಹಿರಿಯ ಸದಸ್ಯರಾಗಿದ್ದವರು. ಎಸ್ತರ್ ಫೇರಿಂಗ್ ವಿಷಯದಲ್ಲಿ ಅವರಿಗೆ ಬಹಳ ಸಹಾನುಭೂತಿ ಇತ್ತು.

ಅನಾವಶ್ಯಕ ವಸ್ತುಗಳನ್ನು ಹೊಂದುವುದು ತಪ್ಪೆಂದು ನನ್ನ ಅಭಿಪ್ರಾಯ; ಅವುಗಳು ಅಸೂಯೆಯನ್ನು ಹುಟ್ಟಿಸುತ್ತವೆ, ಅವು ರಕ್ಷಣೆಯ ಭಾರವನ್ನು ತಂದೊಡ್ಡುತ್ತವೆ. ಅವುಗಳಿಗಾಗಿ ಹೆಚ್ಚು ಎಚ್ಚರಿಕೆ ಬೇಕಾಗುತ್ತದೆ. ಅದೇ ಎಚ್ಚರಿಕೆಯನ್ನು ಇತರ ಮುಖ್ಯವಾದ ವಸ್ತುಗಳ ಬಗೆಗೆ ಇಟ್ಟರೆ ಎಷ್ಟೋ ಚೆನ್ನಾದೀತು. ನೀವು ಎಷ್ಟೋ ಅನಾಸಕ್ತಿಯಿಂದ ಇದ್ದರೂ ಅವು ಕಳೆದುಹೋದಾಗ ದುಃಖವನ್ನು ಉಂಟುಮಾಡುತ್ತವೆ.

ವಿಚಾರಣಾಸಮಿತಿ* ಸೋಮವಾರದಿಂದ ಕೆಲಸ ಆರಂಭಮಾಡುತ್ತದೆ.

ಶ್ರೀಮತಿ ಗಾಂಧೀಯವರಿಗೆ ನೀವು ಕಳಿಸಿದ ವಿವೇಚನಾಯುಕ್ತ ಕೊಡಿಗೆಗಾಗಿ ತುಂಬ ಸಂತೋಷ.

ನಮ್ಮೆಲ್ಲರ ಪ್ರೇಮ.

ನಿನ್ನ,

**ಬಾಪೂ**

## ಪ್ರಾರ್ಥನೆಯೇ ಮುಖ್ಯ

ನದಿಯಾದ್

ನನ್ನ ಪ್ರಿಯ ಎಸ್ತರ್, ಆಗಸ್ಟ್ ೩, ೧೯೧೭

ನೀನು ದೊಡ್ಡ ಪ್ರಶ್ನೆಗಳನ್ನು ಎತ್ತಿದೀಯೆ. ಜೀಸಸನ ಬೋಧೆ ನಿಸ್ಸಂದಿಗ್ಧವಾದುದೆಂದು ನನ್ನ ಭಾವನೆ. ಯಾವನು ಪ್ರೇಮಭರಿತನೋ ಅವನಿಗೆ ಎಲ್ಲ ಬಗೆಯ ಜೀವಹತ್ಯೆಯೂ ಕೆಟ್ಟುದೇ. ಅವನಿಗೆ ಜೀವಹತ್ಯೆ ಮಾಡುವ ಆವಶ್ಯಕವೇ ಇರುವುದಿಲ್ಲ. ಅವನು ಜೀವಹತ್ಯೆ ಮಾಡುವುದೂ ಇಲ್ಲ. ಯಾವಾತನಿಗೆ ಹಾವಿನ ಬಗೆಗೆ ದಯೆ ಇದೆಯೋ ಅವನಿಗೆ ಅದರ ಭೀತಿಯಿಲ್ಲ, ಅವನು ಅದನ್ನು ಕೊಲ್ಲುವುದಿಲ್ಲ; ಹಾವೂ ಅವನಿಗೆ ಅಪಾಯವನ್ನು ಮಾಡುವುದಿಲ್ಲ. ಇಂಥ ನಿಷ್ಕಲಂಕ ಸ್ಥಿತಿಯನ್ನೇ ನಾವು ಪಡೆಯಬೇಕಾದುದು. ಆದರೆ ಇದು ಕೆಲವರಿಗೆ ಮಾತ್ರ ಲಭ್ಯ. ಜನಾಂಗ ಜನಾಂಗಗಳೇ ಇದನ್ನು ಪಡೆಯಲು ಸಾಧ್ಯವಿಲ್ಲವೆಂದು ನನ್ನ ಮನವರಿಕೆ.

* ಚಂಪಾರಣ್ಯದ ಕೂಲಿಗಾರರ ಸಮಸ್ಯೆ ಪರಿಶೀಲನೆಗಾಗಿ ಸರಕಾರ ನೇಮಿಸಿದ ಸಮಿತಿ.

ಎಲ್ಲರಲ್ಲಿಯೂ ಸಮಾನ ಪ್ರಗತಿ ಎನ್ನುವುದು ಊಹೆಗೆ ಸಿಗದಂಥದು. ಆದುದರಿಂದ ಜನಾಂಗಗಳು ಯಾವಾಗಲೂ ಹೋರಾಡುತ್ತವೆ. ಒಂದು ತಪ್ಪಿನಲ್ಲಿ ಕಡಿಮೆಯಾಗಿರಬಹುದು, ಇನ್ನೊಂದು ಹೆಚ್ಚಾಗಿರಬಹುದು. ನ್ಯಾಯವಾಗಿರುವ ಜನಾಂಗ ಆತ್ಮಶಕ್ತಿಯಿಂದಲೇ ಹೋರಾಡೀತು. ಅಂಥ ಜನಾಂಗ ಇನ್ನೂ ಹುಟ್ಟಬೇಕಾಗಿದೆ. ಭಾರತ ಅಂಥ ಜನಾಂಗವೆಂದು ನಾನು ಭಾವಿಸಿದ್ದೆ. ಇದು ತಪ್ಪು ಎನಿಸುತ್ತದೆ. ಭಾರತದ ವಿಷಯದಲ್ಲಿ ನಾನು ನಿರೀಕ್ಷಿಸಬಹುದಾದ ಅತ್ಯಂತ ಹೆಚ್ಚಿನ ಅಂಶವೆಂದರೆ ಅದು ದೊಡ್ಡ ಆತ್ಮ ಸಂಯಮಪೂರಿತ ಜನಾಂಗವಾದೀತೆಂದು. ಆದರೆ ಅದು ಜಗತ್ತಿಗೆ ಏನಾದರೂ ಪ್ರಭಾವಯುತವಾಗುವ ರೀತಿಯಲ್ಲಿ ನುಡಿಯುವಂತಾಗಬೇಕಾದರೆ ಹೋರಾಡುವ ಮತ್ತು ದುಃಖ ಸಹಿಸುವ ಶಕ್ತಿಯನ್ನು ಪಡೆದುಕೊಳ್ಳಬೇಕು.

ವ್ಯಕ್ತಿಗಳಾದ ನಮ್ಮ ಕರ್ತವ್ಯಗಳೇನು? ಇದೇ ನಮ್ಮಿಬ್ಬರಿಗೂ ಅನ್ವಯಿಸುವ ಪ್ರಶ್ನೆ. ನಾನಂತೂ ಈ ವ್ಯಾವಹಾರಿಕ ತೀರ್ಮಾನಕ್ಕೆ ಬಂದಿದೇನೆ: 'ಯಾವ ಕಾರಣಕ್ಕೇ ಆಗಲಿ, ನಾನು ಯಾರನ್ನೂ ಹತ ಮಾಡುವುದಿಲ್ಲ; ಆತನ ಸಂಕಲ್ಪವನ್ನು ಪ್ರತಿಭಟಿಸುವಾಗ ನಾನೇ ಹತನಾಗಬೇಕಾದ ಸಂಭವ ಬಂದರೆ, ಆ ರೀತಿ ಆದೇನು.' ನಾನು ಇದೇ ಸಲಹೆಯನ್ನು ಎಲ್ಲರಿಗೂ ಇತ್ತೇನು. ಆದರೆ ಎಲ್ಲಿ ಸಂಕಲ್ಪಶಕ್ತಿ ಇಲ್ಲವೇ ಇಲ್ಲವೋ ಅಂಥ ಸಂದರ್ಭದಲ್ಲಿ, ಸಂಕಲ್ಪವನ್ನು ಮಾಡಿ ಹೋರಾಡಬೇಕೆಂದು ಸಲಹೆ ನೀಡಿಯೇನು. ಸಂಕಲ್ಪವಿಲ್ಲವೆಡೆ ಪ್ರೇಮವೂ ಇರಲಾರದು. ಭಾರತದಲ್ಲಿ ಪ್ರೇಮವಿಲ್ಲವೆನ್ನುವುದೊಂದೇ ಅಲ್ಲ, ಪೌರುಷಹೀನತೆಯಿಂದ ದ್ವೇಷವೂ ಇದೆ. ಕೇವಲ ನಿಸ್ಸಹಾಯತೆಯಿಂದ ಕೊಲ್ಲುವುದಕ್ಕೂ ಕೊಲ್ಲಲ್ಪಡುವುದಕ್ಕೂ ಅತ್ಯಂತ ಹೆಚ್ಚಿನ ಅಪೇಕ್ಷೆಯಿದೆ. ಈ ಅಪೇಕ್ಷೆಯು ಹೋರಾಟ ಶಕ್ತಿಯನ್ನು ಪುನಃ ಗಳಿಸಿಕೊಳ್ಳುವುದರಿಂದ ತೃಪ್ತಿಪಡಿಸಲ್ಪಡಬೇಕು. ಅನಂತರ ಯಾವುದನ್ನು ಆಯ್ಕೆ ಮಾಡಬೇಕೆಂಬ ಪ್ರಶ್ನೆ ಏಳುತ್ತದೆ.

ಕ್ಷಮೆ ಮತ್ತು ಪ್ರೇಮ ಇವುಗಳೇ ಕರ್ತೃವಿನ ಹಿರಿತನವನ್ನು ತೋರಿಸುತ್ತವೆ. ಆದರೆ 'ಪ್ರೇಮ ತೋರಿಸುವವರು ಯಾರು?' ಎಂಬ ಪ್ರಶ್ನೆಯನ್ನೇ ಕೇಳಿದರೆ ಅದು ಸಾಧಿಸಬೇಕಾದ ವಿಷಯವನ್ನೇ ಸಿದ್ಧ ಎಂದಿಟ್ಟುಕೊಂಡಂತಾಗುತ್ತದೆ. ಒಂದು ಇಲಿಮರಿ, ಇಲಿಮರಿಯಾಗಿ

ಬೆಕ್ಕನ್ನು ಪ್ರೀತಿಸಲಾರದು. ಸಾಮಾನ್ಯವಾಗಿ, ಒಂದು ಇಲಿಮರಿ ಬೆಕ್ಕಿಗೆ ಅಪಾಯ ಮಾಡದೆ ಇದ್ದೀತೆಂದು ಹೇಳಲಾಗುವುದಿಲ್ಲ. ನೀನು ಯಾರಿಗೆ ಹೆದರುವೆಯೋ ಅವರನ್ನು ಪ್ರೀತಿಸಲಾರೆ. ನೀನು ಹೆದರುವಿಕೆಯನ್ನು ಬಿಟ್ಟಕೂಡಲೇ ಹೊಡೆಯಬೇಕೇ ಇಲ್ಲವೇ ನಿಗ್ರಹಿಸಬೇಕೇ ಎಂಬ ವಿಷಯ ವನ್ನು ನಿರ್ಧರಿಸಲು ಸಿದ್ಧ. ನಿಗ್ರಹವೇ ಮಾನವನ ಆತ್ಮಜಾಗ್ರತಿಯ ಕುರುಹು; ಹೊಡೆಯುವುದು ದೈಹಿಕ ಶಕ್ತಿಗೆ ಪ್ರಮಾಣ. ಆತ್ಮಶಕ್ತಿಯ ಪ್ರಯೋಗವಾದಾಗ ಹೊಡೆಯುವ ಶಕ್ತಿಯೂ ಇರಬೇಕು. ಇದರ ಅರ್ಥ ನಾವು ಎದುರಾಳಿಗಿಂತ ದೈಹಿಕವಾಗಿ ಮೇಲ್ಮಟ್ಟದಲ್ಲಿರಬೇಕೆಂದಲ್ಲ.

ಇದೇನೊ ತೃಪ್ತಿಕರ ಪತ್ರವಲ್ಲ. ಆದರೂ ಇದರ ತರ್ಕವನ್ನು ನೀನು ಅರಿಯಬಹುದು. ಇಂಥ ವಿಷಯಗಳಲ್ಲಿ ಪ್ರಾರ್ಥನೆಯೇ ಮುಖ್ಯ.

ಪ್ರೀತಿ,

**ಬಾಪೂ**

## ಪ್ರೇಮ ಸಹನೆಯಿಂದಿರಬೇಕು

ಬೆಟ್ಟಿಯಾ

ಆಗಸ್ಟ್ ೧೨, ೧೯೧೭

ನನ್ನ ಪ್ರಿಯ ಎಸ್ತರ್,

ಇಂದು ನನಗೆ ಎಲ್ಲೋ ಸ್ವಲ್ಪ ವಿರಾಮವಿದೆ. ನೀನು ಬರೆದು ಕಳಿಸಿರುವುದು ಚೆನ್ನಾಗಿದೆ, ಸತ್ಯವೂ ಆಗಿದೆ. ನಂಬಿಕೆ ಮತ್ತು ಭರವಸೆ ಈ ಎರಡೂ ದೊಡ್ಡವು. ಯಶಸ್ಸಿಗೆ ಇವು ಅತ್ಯಂತ ಆವಶ್ಯಕ. ಆದರೆ ಪ್ರೇಮ ಈ ಎರಡಕ್ಕಿಂತಲೂ ಹಿರಿದು. ಅದಕ್ಕೆ ಅತ್ಯಂತ ಪರೀಕ್ಷೆಯೆಂದು ನನಗೆ ಕಂಡುಬರುತ್ತದೆ. ಈ ದಿನ ಬೆಳಗ್ಗೆ ಒಬ್ಬ ದೃಢಕಾಯನಾದ ವ್ಯಕ್ತಿ ನನ್ನ ಬಳಿಗೆ ಬಂದು ನನ್ನ ಶಕ್ತಿಗೆ ಮೀರಿದ ಸಹಾಯವನ್ನು ಮಾಡಲೇ ಬೇಕೆಂದು ಕೋರಿದನು. ಅವನು ನನ್ನನ್ನು ಬಿಡಲೇ ಒಲ್ಲ. ನಾನು ಪ್ರಾರ್ಥಿಸಿಕೊಂಡೆ. ಅವನು ಎದೆ ಚಚ್ಚಿಕೊಂಡು ಅಳಲಾರಂಭಿಸಿದ. ಅವನ ವಿಚಾರದಲ್ಲಿ ಸ್ವಲ್ಪವೂ ಹುರುಳಿಲ್ಲ. ಅವನು ಪ್ರೀತಿಯಿಂದಲೂ ಭರವಸೆ ಯಿಂದಲೂ ನನ್ನ ಬಳಿಗೆ ಬಂದಿದ್ದನು. ಅವನನ್ನು ನಾನು ಪ್ರೀತಿಸುತ್ತೇನೆ;

ಮತ್ತೆ ಹೇಗೆ ಕಾಣಲೆಂಬುದು ಪ್ರಶ್ನೆ ಆಯಿತು. ಅವನು ಆಳುತ್ತಿರುವುದಕ್ಕೆ ಕಾರಣ ನಿಜವೆಂದು ಭಾವಿಸಿ, ಅದನ್ನೆಲ್ಲ ಸಹಿಸಿಕೊಂಡು ಅವನೊಂದಿಗೆ ಸಂಭಾಷಿಸುತ್ತಾ ಹೋಗಲೆ? ಇಂಥ ಸಮಸ್ಯೆಗಳು ದಿನವೂ ಬರುತ್ತವೆ. ಪ್ರೇಮ ಸಹನೆಯಿಂದಿರಬೇಕು. ಇಂಥ ಸಂದರ್ಭಗಳಲ್ಲಿ ಮೇಲೆ ಹೇಳಿದ ನಿಯಮವನ್ನು ಅನುಸರಿಸುವ ಪರಿ ಹೇಗೆ? ಶುದ್ಧ ಮನಸ್ಸಿನಿಂದ ಕೂಡಿದ್ದು ನಿಃಸ್ಪೃಹನಾದವನಿಗೆ ಅಂತಃಸಾಕ್ಷಿಯೇ ಸರಿಯಾದ ಮಾರ್ಗದರ್ಶಕ. ನಾವು ಎಷ್ಟೋ ಸಲ ಆತ್ಮವಂಚನೆ ಮಾಡಿಕೊಳ್ಳುತ್ತೇವೆ.

* * * *

ನಿನಗೆ ಹಾವು ಕಚ್ಚಿದಾಗ ಯಾವ ಚಿಕಿತ್ಸೆಯನ್ನು ಮಾಡಿಕೊಂಡೆ? ಅದು ಕಚ್ಚಿದ್ದಾದರೂ ಹೇಗೆ? ಎಲ್ಲಿ ಕಚ್ಚಿತು? ಅದನ್ನು ಹಿಡಿದು ಕೊಲ್ಲಲಾಯಿತೆ? ನಾನು ಯಾವಾಗಲೂ ಹಾವುಗಳು ಮತ್ತು ಹಾವಿನ ಕಡಿತ ಇವುಗಳ ವಿಷಯದಲ್ಲಿ ಆಸಕ್ತನಾಗಿದೇನೆ.

ನಮ್ಮೆಲ್ಲರ ಪ್ರೇಮ.

ನಿನ್ನ,
**ಬಾಪೂ**

## ನಮ್ಮ ಪ್ರೇಮಶಕ್ತಿ ನಿರಂತರ ವೃದ್ಧಿಯಾಗಬೇಕು.

ಮೋತೀಹಾರಿ
ಜನವರಿ ೧೩, ೧೯೧೮

ನನ್ನ ಪ್ರಿಯ ಎಸ್ತರ್,

ನಾನು ಸಂಚಾರದ ಮೇಲಿರುವುದರಿಂದ ನಿನಗೆ ಉತ್ತರವನ್ನೇ ಬರೆಯಲಾಗಲಿಲ್ಲ. ಕಲ್ಕತ್ತಾ, ಬೊಂಬಾಯಿ, ಅನಂತರ ಆಶ್ರಮ ಇವುಗಳಿಗೆಲ್ಲ ಭೇಟಿಕೊಟ್ಟು ನಿನ್ನೆತಾನೆ ಇಲ್ಲಿಗೆ ಬಂದೆ. ನನಗೆ ವಿವಿಧ ಅನುಭವಗಳು ಬಂದಿವೆ. ಕಾಲ ಸಾಲದ ಕಾರಣ ಅವುಗಳನ್ನು ವಿವರಿಸಲಾರೆ.

ಈ ಲೋಕದಲ್ಲಿ ಪೂರ್ಣತೆಯನ್ನು ಪಡೆಯಲು ಸಾಧ್ಯವಿಲ್ಲವೆಂದರೆ ದೇವರೇ ಇಲ್ಲವೆಂದಂತೆ. ಪಾಪವಿಮುಕ್ತರಾಗಲು ಅಸಾಧ್ಯವೆನ್ನುವುದು

ಜೀವನದ ಒಂದು ಹಂತವನ್ನು ಸ್ಪಷ್ಟವಾಗಿ ತೋರಿಸುತ್ತದೆ. ಈ ಮಾತನ್ನು ಸಮರ್ಥಿಸಲು ನಾವು ಶಾಸ್ತ್ರಗಳನ್ನು ಹುಡುಕಬೇಕಾಗಿಲ್ಲ. ಪ್ರಯತ್ನ ದಿಂದಲೂ ಮತ್ತು ಶ್ರದ್ಧೆಯಿಂದಲೂ ಜನ ಉತ್ತಮರಾಗುವುದನ್ನು ನಾವು ಕಾಣುತ್ತೇವೆ. ಉತ್ತಮವಾಗುವ ಸಾಧ್ಯತೆಯನ್ನು ಪರಿಮಿತಿಗೊಳಿಸಲು ಅವಕಾಶವೇ ಇಲ್ಲ. ಈ ಲೋಕದಲ್ಲಿ ಪೂರ್ಣ ಪ್ರೇಮವನ್ನು ನಾನು ಸಾಧಿಸಬಲ್ಲೆನೆಂಬ ಭಾವನೆ ನನಗೆ ಬಂದರೆ, ಜೀವನದ ಆಸೆಯೇ ಹೋದೀತು. ಒಟ್ಟಿನಲ್ಲಿ ಪ್ರೇಮಶಕ್ತಿ ನಿರಂತರ ವೃದ್ಧಿಯಾಗುವುದೇ ಮುಖ್ಯ. ಅದು ನಿಧಾನವಾಗಿ ಆಗುತ್ತದೆ. ಒಳ್ಳೆಯ ಕೆಲಸ ಮಾಡುವಾಗಲೂ ನಿಮಗೆ ಅಡ್ಡಿಬರುವ ಜನರನ್ನು ಪ್ರೀತಿಸುವುದಾದರೂ ಹೇಗೆ? ಆದರೂ ಅದೇ ಪರಮ ಪರೀಕ್ಷೆಯ ಕಾಲ.

ಈಗ ನಿನಗೆ ಹೆಚ್ಚು ಮಾನಸಿಕ ಶಾಂತಿ ಇದೆಯೆಂದು ನಂಬಿದೇನೆ. ನಿನ್ನ ಆಶ್ರಮಪ್ರೇಮ ನೀನು ಮಾಡುತ್ತಿರುವ ಕೆಲಸಕ್ಕೆ ಸೇವಾಶಕ್ತಿಯನ್ನು ನೀಡಲಿ. ನಮ್ಮ ಪಾಲಿಗೆ ಬಂದ ಕರ್ತವ್ಯವನ್ನು ಅತ್ಯಂತ ಎಚ್ಚರಿಕೆ ಯಿಂದಲೂ ಹರ್ಷದಿಂದಲೂ ಮಾಡುವುದನ್ನು ಕಲಿಸುವುದೇ ಆಶ್ರಮದ ಉದ್ದೇಶ. ನಮ್ಮ ಆಸೆಗಳು (ಎಷ್ಟೇ ಪರಿಶುದ್ಧವಿರಲಿ) ಈಡೇರದಿದ್ದರೆ ಅದೂ ಅರ್ಥಪೂರ್ಣವೇ. ಈಡೇರುವುದು ನಮ್ಮ ಇಚ್ಛೆಯಲ್ಲ, ಭಗವಂತನದು.

ನೀನು ತಮಿಳು ಪಾಠ ಕಲಿಯುವುದರಲ್ಲಿ ಮುಂದುವರಿಯು ತ್ತಿದೀಯೆಂದು ನಂಬಿದೇನೆ.

ನಟೇಶನ್ ಕಂಪೆನಿಯವರು* ಪ್ರಕಾಶನಗೊಳಿಸಿರುವ ನನ್ನ 'ಭಾಷಣ ಗಳು ಮತ್ತು ಬರೆಹಗಳು' ಎಂಬ ಪುಸ್ತಕದ ಪ್ರತಿ ನಿನಗೆ ತಲಪಿವೆಯೆ? ಸಮಾಜಸೇವೆಯನ್ನು ಕುರಿತು ನಾನು ಕಲ್ಕತ್ತಾದಲ್ಲಿ ಮಾಡಿದ ಭಾಷಣದ ಒಂದು ಪ್ರತಿಯನ್ನು ನಿನಗೆ ಕಳಿಸಿದೇನೆ.

ಪ್ರೀತಿ,

ನಿನ್ನ,

ಬಾಪೂ

---

* ಮದರಾಸಿನ ಪುಸ್ತಕ ಪ್ರಕಾಶಕರು.

## ಶಾಂತಿ, ಅನುಗ್ರಹ ಮತ್ತು ಆಧ್ಯಾತ್ಮಿಕ ಮೇಲ್ಮೆಯ ದಿನಗಳು

ರೈಲಿನಲ್ಲಿ
ಪ್ರಿಯ ಎಸ್ತರ್, ಏಪ್ರಿಲ್ ೮, ೧೯೧೮

ನಿನಗೆ ಪತ್ರ ಬರೆವುದನ್ನು ನಾನು ನಿರ್ದಯತೆಯಿಂದ ಮರೆತಂತೆ ಕಾಣುತ್ತದೆ. ಏನೋ ಒಂದು ಪಂಕ್ತಿಯನ್ನು ಬರೆದರೆ ನನಗೆ ತೃಪ್ತಿಯಾಗದು. ದೀರ್ಘವೂ, ಪ್ರೀತಿಭರಿತವೂ ಆದ ಪತ್ರವನ್ನು ಬರೆಯಬೇಕೆಂಬುದೇ ನನ್ನಾಸೆ. ಅಂಥ ಪತ್ರವನ್ನು ಬರೆಯಲು ನನಗೆ ಶಾಂತಿಯೇ ಇಲ್ಲ. ಆದರೆ ಹಾಗೆಂದುಕೊಂಡು ಇನ್ನೂ ತಡಮಾಡಲಾರೆ.

ನನ್ನ ಕಾರ್ಯಗಳು ಯಾವುವೂ ನಾನಾಗಿ ಆರಿಸಿಕೊಂಡು ಹೋದುವಲ್ಲ. ಅವುಗಳನ್ನು ಹೇಗೆ ವಿವರಿಸಲೋ ಕಾಣೆ. ನಾನು ಬೇಡವೆನ್ನುವ ರೀತಿಯಲ್ಲಿ ಅವೆಲ್ಲ ತಾವಾಗಿಯೇ ತಪ್ಪದೆ ಬಂದಿವೆ. ಸುತ್ತಲೂ ಬಂಧನಕ್ಕೆ ಒಳಗಾದ ಯೋಧ ಏನನ್ನು ಮಾಡಬೇಕು? ಸುತ್ತಲೂ ಮೇಲಿಕ್ಕಿ ಬರುವ ಶಕ್ತಿಗಳನ್ನು ಪರಿಗಣಿಸದೆ ಯಾವುದಾದರೊಂದು ಕಡೆ ಮಾತ್ರ ತನ್ನ ಶಕ್ತಿಯನ್ನೆಲ್ಲ ವಿನಿಯೋಗಿಸಬೇಕೆ? ಅವನಿಗೆ ಸಾಧ್ಯವಾದಷ್ಟೂ ಎಲ್ಲ ಶಕ್ತಿಗಳನ್ನೂ ಎದುರಿಸಿದರೇ ನಿಜ ರಕ್ಷಣೆ ದೊರೆಕೀತು. ನನ್ನ ಸ್ಥಿತಿಯೂ ಈ ರೀತಿ ಇದೆ. ಎಲ್ಲ ಕಡೆಗಳಲ್ಲಿಯೂ ದುಃಖ ಅಂಗಲಾಚಿ ಬೇಡುತ್ತಿದೆ. ನನಗೆ ಪರಿಹಾರ ಗೊತ್ತಿರುವಾಗ ನೆರವನ್ನು ನಿರಾಕರಿಸಲಾರೆ.

ಅಹಮದಾಬಾದಿನ ಮುಷ್ಕರ* ನನಗೆ ಜೀವನದಲ್ಲಿ ಅತ್ಯಂತ ದೊಡ್ಡ ಪಾಠ ಕಲಿಸಿತು. ಮುಷ್ಕರದ ಕಾಲದಲ್ಲಿ ಕಂಡುಬಂದ ಪ್ರಭಾವಯುತ ಪ್ರೇಮ ಎಂದೂ ಕಂಡುಬರಲಿಲ್ಲ. ನಾನು ಉಪವಾಸವನ್ನು ಮಾಡುವೆ ಎಂದು ಘೋಷಿಸಿದ ಕೂಡಲೇ ಆ ಜನಸಮೂಹದಲ್ಲಿ ಭಗವಂತನ ಸಾನ್ನಿಧ್ಯ ಪ್ರಕಟವಾಯಿತು. ನೀನು ಕಳಿಸಿದ ತಾರು ಎಲ್ಲದಕ್ಕಿಂತ ಅತ್ಯಂತ ಹೃದಯಸ್ಪರ್ಶಿಯೂ ನಿಜವೂ ಆಗಿತ್ತು. ಉಪವಾಸದ ಆ ನಾಲ್ಕು ದಿನಗಳು ನನಗೆ

---

* ಕಾರ್ಮಿಕರ ಮತ್ತು ಮಾಲೀಕರ ನಡುವೆ ವಿವಾದ ಬಂದು ಗಾಂಧೀಜೀ ಕಾರ್ಮಿಕರು ಅನೀತಿಗೊಳಗಾಗದಿರಲೆಂದು ಉಪವಾಸ ಮಾಡಿದ್ದರು.

ಶಾಂತಿ, ಅನುಗ್ರಹ ಮತ್ತು ಆಧ್ಯಾತ್ಮಿಕ ಮೇಲ್ಮೆಯ ದಿನಗಳಾಗಿದ್ದವು. ಆ ದಿನಗಳಲ್ಲಿ ಆಹಾರ ತೆಗೆದುಕೊಳ್ಳಬೇಕೆಂಬ ಆಸೆಯೇ ಬರಲಿಲ್ಲ.

ಪತ್ರಿಕೆಗಳಿಗೆ ನಾನು ಬರೆದಿರುವ ಪತ್ರದಿಂದ ಖೈರಾ* ಪ್ರಸಂಗ ನಿನಗೆ ಅರಿವಾಗಿರಬೇಕು. ಆ ಪತ್ರಗಳಲ್ಲಿ ಒಂದನ್ನು ಉಪವಾಸ ಕುರಿತು ಬರೆದಿದ್ದೆ. ನೀನು ಆ ಪತ್ರಗಳನ್ನು ನೋಡಿರದಿದ್ದರೆ ದಯೆಮಾಡಿ ತಿಳಿಸು.

ನೀನು ಆರೋಗ್ಯವಾಗಿದೀಯೆಂದು ನಂಬಿದೇನೆ. ಪಿತ್ತವಿಕಾರವಾದಾಗ ಉಪವಾಸದಷ್ಟು ಪ್ರಯೋಜನಕಾರಿಯಾದುದು ಬೇರೊಂದಿಲ್ಲ.

ನಿನ್ನ ಪತ್ರಗಳನ್ನು ಅಹಮದಾಬಾದಿಗೆ ಅಥವಾ ಸಾಬರಮತಿಗೆ ಬರೆ.

ಪ್ರೀತಿ,

ನಿನ್ನ,

ಬಾಪೂ

## ಒಪ್ಪಂದವನ್ನು ಶಾಂತಿಯಿಂದ ಪೂರ್ತಿಗೊಳಿಸು.

(ಶಿಕ್ಷಣದಲ್ಲಿ ಎಸ್ತರ್ ಮಾಡಿದ ಪ್ರಯೋಗಗಳು ಡೇನಿಷ್ ಮಿಷನ್ ಸಂಸ್ಥೆಗೆ ಹಿಡಿಸಲಿಲ್ಲವೆಂದು ಕಂಡುಬರುತ್ತದೆ. ಆಗ ಸಂಸ್ಥೆಗೂ ಆಕೆಗೂ ತಿಕ್ಕಾಟ ನಡೆದಿರಬೇಕು. ಅಂಥ ಸಮಯದಲ್ಲಿ ಆಕೆ ಬರೆದ ಪತ್ರವೊಂದಕ್ಕೆ ಬಾಪೂ ಕೊಟ್ಟ ಉತ್ತರ ಇದು ಎಂದು ಭಾಸವಾಗುತ್ತದೆ.)

ಬೊಂಬಾಯಿ

ನನ್ನ ಪ್ರಿಯ ಮಗು,† ಜುಲೈ ೨೨, ೧೯೧೮

ನಿನಗೆ ಪತ್ರ ಬರೆಯಲೋ ಬೇಡವೋ ಎಂದು ನನ್ನಲ್ಲಿ ನಾನೇ ಜಿಜ್ಞಾಸೆಗೊಳಗಾಗಿದೇನೆ. ನಿನ್ನ ಪತ್ರ ಓದಿ ನನಗೆ ದುಃಖವಾಯಿತು. ಇಂದು ನಾನು ಆಶ್ರಮದಲ್ಲಿದೇನೆ. ನೀನು ಕಳಿಸಿದ್ದ ಒಂದು ಒಳ ಅಂಗಿ

---

* ಖೈರಾದಲ್ಲಿ ಬೆಳೆ ನಷ್ಟವಾಗಿ ಕಂದಾಯವನ್ನು ಮನ್ನಾ ಮಾಡಬೇಕೆಂದು ರೈತರು ಸರಕಾರಕ್ಕೆ ಸವಾಲನ್ನು ಹಾಕಿದ್ದರು.

† ಈ ರೀತಿ ಬಾಪೂ ಸಂಬೋಧಿಸಿ ಬರೆದಿರುವುದು ಇದೇ ಮೊದಲನೆಯ ಪತ್ರ.

(Vest)ಯನ್ನು ಇಂದು ಧರಿಸಿಕೊಂಡಿದೇನೆ. ಅದು ನನಗೆ ಅರಿವಾದುದು ಇಂದೇ. ಅದು ಸರಿಯಾಗಿ ಹೊಂದಿಕೊಂಡಿಲ್ಲ. ತೋಳುಗಳು ಬಹಳ ತುಂಡಾಗಿವೆ. ಚಿಂತೆಯಿಲ್ಲ. ಧರಿಸುತ್ತಿದೇನೆ, ಹಾಗೆಯೇ ಸವೆಸುತ್ತೇನೆ. ನನ್ನೊಡನೆ ಪತ್ರ ನಡಸಲು ಅಥವಾ ಆಶ್ರಮಕ್ಕೆ ಬರಲು ನಿನಗೆ ಪ್ರತಿಬಂಧಕವಿದ್ದರೂ ನೀನು ಶಾಂತಿಯಿಂದ ನಿನ್ನ ಒಪ್ಪಂದವನ್ನು ಪೂರ್ಣಗೊಳಿಸಬೇಕೆಂದು ನನಗೆ ಮನವರಿಕೆಯಾಗಿದೆ. ಈ ಸ್ವಯಂ ವಿಧಿತ ಶಿಸ್ತು ಸಂಯಮಗಳಿಂದ ನಿನ್ನ ಸಂಕಲ್ಪಶಕ್ತಿ ಹೆಚ್ಚೀತೆಂದು ನನ್ನ ಭರವಸೆ.

ನನಗೆ ಪತ್ರ ಬರೆಯುವುದಕ್ಕೂ ನನ್ನ ಪತ್ರಗಳನ್ನು ಪಡೆಯುವುದಕ್ಕೂ ನಿನಗೆ ಅವಕಾಶ ದೊರೆತರೆ ಅದು ನನಗೊಂದು ಸೌಭಾಗ್ಯ. ಅಂತಿಮ ತೀರ್ಮಾನ ಏನಾಗಿದೆಯೋ ದಯಮಾಡಿ ತಿಳಿಸು.

ನಾನು ಸವಿನಯ ಶಾಸನಭಂಗವನ್ನು ತಾತ್ಕಾಲಿಕವಾಗಿ ನಿಲ್ಲಿಸಿದೇನೆ. ಪತ್ರಿಕೆಗಳಿಗೆ ನಾನು ಕೊಟ್ಟಿರುವ ಹೇಳಿಕೆ ನೋಡು.

ಪ್ರೀತಿ,
ನಿನ್ನ,
**ಬಾಪೂ**

## ಜಗತ್ತಿನಲ್ಲೇ ಅತ್ಯಂತ ಸುಖಿ*

ಮುಂಬೈ ಮಾರ್ಗದಲ್ಲಿ
ಬಂಧನವಲ್ಲಿ
ಏಪ್ರಿಲ್ ೧೦, ೧೯೧೯

ನನ್ನ ಪ್ರಿಯ ಮಗು,

ನಿನ್ನ 'ಬ್ಯಾಂಕ್ ನೋಟ್' (ಹುಂಡಿ) ತಲಪಿತು. ನೀನು ದಿನನಿತ್ಯದ ಆವಶ್ಯಕ ವಸ್ತುಗಳನ್ನು ತ್ಯಜಿಸುವುದಿಲ್ಲವೆಂದು ನಂಬುತ್ತೇನೆ.

ಹುಂಡಿಯನ್ನು ಆಶ್ರಮಕ್ಕೆ ಕಳಿಸುತ್ತೇನೆ. ಸರಿ ತಾನೆ ?

ನಿನ್ನೆ ರಾತ್ರಿ ನಾನು ದಿಲ್ಲಿಗೆ ಪ್ರಯಾಣ ಮಾಡುತ್ತಿರುವಾಗ ನಾನು ಪಂಜಾಬಿಗೆ ಪ್ರವೇಶಮಾಡಬಾರದೆಂಬ ಆಜ್ಞೆ ತಲಪಿತು. ನಾನು ಅಲ್ಲಿಯೇ ಆಗಲೇ ಆಜ್ಞಾಭಂಗಮಾಡಿದೆ. ಬಂಧಿತನಾದೆ. ಇದರನಂತರ ಇನ್ನೆರಡು

---

* ಇದು ಗಾಂಧೀಜೀ ಪ್ರಥಮ ಬಂಧನದ ಕಾಲದಲ್ಲಿ ಬರೆದ ಪತ್ರ— ಅಸಹಕಾರ ಆಂದೋಲನದ ಸಂದರ್ಭದಲ್ಲಿ.

ಆಜ್ಞೆಗಳು ತಲಪಿದವು ; ಒಂದು ಡಿಲ್ಲಿ ಪ್ರಾಂತಕ್ಕೆ ಪ್ರವೇಶ ಮಾಡಬಾರದೆಂದು, ಇನ್ನೊಂದು ನಾನು ಬೊಂಬಾಯಿಯನ್ನು ಬಿಟ್ಟುಹೋಗಬಾರದು ಎಂದು. ಈಗ ಅಧಿಕಾರಿಗಳು ನನ್ನನ್ನು ಬೊಂಬಾಯಿಗೆ ಕರೆದುಕೊಂಡು ಹೋಗುತ್ತಿದಾರೆ. ನನ್ನನ್ನು ಸ್ವತಂತ್ರನನ್ನಾಗಿ ಬಿಟ್ಟರೆ ನನ್ನ ಚಲನವಲನದ ಮೇಲೆ ವಿಧಿಸಿರುವ ಆಜ್ಞೆಯನ್ನು ತತ್‌ಕ್ಷಣ ಉಲ್ಲಂಘಿಸುತ್ತೇನೆ. ಬಹುಶಃ ಇಂದು ನಾನು ಜಗತ್ತಿನಲ್ಲಿ ಇರುವ ಎಲ್ಲರಿಗಿಂತ ಅತ್ಯಂತ ಸುಖಿ ; ಕಳೆದ ಎರಡು ತಿಂಗಳ ಕಾಲದಲ್ಲಿ ಜನರ ಪ್ರೇಮಾಧಿಕ್ಯವನ್ನು ಅನುಭವಿಸಿದೇನೆ. ಇಂದು ನಾನು ಯಾರನ್ನು ದ್ವೇಷಿಸದಿದ್ದರೂ, ಇಂದು ಭಾರತದಲ್ಲಿ ಶಾಂತಿಯನ್ನು ಎಲ್ಲರಿಗಿಂತ ಹೆಚ್ಚಾಗಿ ನಾನೊಬ್ಬನೇ ಕಾಪಾಡಬಲ್ಲವನಾಗಿದ್ದರೂ ಬಂಧಿತನಾಗಿದೇನೆ. ಆದುದರಿಂದ ಈ ನನ್ನ ಬಂಧನ ತಪ್ಪಿಸಗುವಾತನ ನಿಜಸ್ವರೂಪವನ್ನು ತೋರಿಸುತ್ತದೆ. ನನ್ನಾತ್ಮ ಶಾಂತವಾಗಿಯೂ ಆತಂಕ ಇಲ್ಲದೆಯೂ ಇರುವುದರಿಂದ ಆತ ನನಗೆ ಯಾವ ಕೇಡುಕನ್ನೂ ಎಸಗಲಾರ.

ದೇವರು ನಿನ್ನ ಗೆಳೆಯನೊಬ್ಬನಿಗೆ ಶತ್ರುಗಳೆಂದು ಕರೆದುಕೊಳ್ಳುವವರನ್ನೂ ಪ್ರೀತಿಸುವ ಮತ್ತು ಬವಣೆಗಳನ್ನೆಲ್ಲ ಆನಂದದಿಂದ ಸ್ವಾಗತಿಸುವ ಶಕ್ತಿ ನೀಡಿರುವುದಕ್ಕಾಗಿ ನೀನೂ ಆನಂದಪಡು. ನನ್ನ ಈ ಬಂಧನಕ್ಕಾಗಿ ನೀನು ದುಃಖಿಸಬಾರದೆಂದು ಇದನ್ನು ಹೇಳುತ್ತಿದೇನೆ. ನನ್ನನ್ನು ನೋಡಿಕೊಳ್ಳುತ್ತಿರುವ ಅಧಿಕಾರಿ ಬಹಳ ದಯೆಯಿಂದಲೂ ಮತ್ತು ಎಚ್ಚರಿಕೆಯಿಂದಲೂ ಇದಾರೆ.

ಮಹಾದೇವ್ ಇನ್ನೂ ಕೆಲವು ಕಾಲ ಬಂಧಿತನಾಗದೆ ಇದ್ದರೆ ಹೆಚ್ಚಿಗೆ ಬರೆಯುತ್ತಾನೆ.

ಪ್ರೀತಿ,
ಎಂದಿಗೂ ನಿನ್ನ,
ಬಾಪೂ

ಮದರಾಸಿನಿಂದ ಬೊಂಬಾಯಿಯ ಮಾರ್ಗದಲ್ಲಿ ಬೆಜವಾಡದಿಂದಲೋ ಇನ್ನೆಲ್ಲಿಂದಲೊ* ಬರೆದ ಪತ್ರ ನಿನಗೆ ತಲಪಿದೆಯೇ ?

---

* ಇದು ಸಿಕಂದರಾಬಾದಿನಿಂದ ಬರೆದ ಪತ್ರವಾಗಿತ್ತು.

## ನೀನು ಮಹಾಕ್ರೈಸ್ತಳಾಗು

ಡಿಲ್ಲಿ

ನನ್ನ ಪ್ರಿಯ ಮಗು, ...........೧೯೧೯

ನೀನು ಆಶ್ರಮಕ್ಕೆ* ಬಂದ ಕೂಡಲೇ ನಾನು ಅಲ್ಲಿಂದ ಹೊರಟುದು ದುಃಖವೆನಿಸಿತು. ನಿನ್ನೊಡನೆ ದೀರ್ಘವಾಗಿ ಮಾತನಾಡಿ ಯಾವುದಾದರೂ ವಿಷಯದಲ್ಲಿ ನಿನಗೆ ಆತಂಕವಿದ್ದರೆ ಅದನ್ನು ಪರಿಹರಿಸಲು ಯೋಚಿಸಿದ್ದೆ. ನಿನ್ನ ಬಳಿ ಸಾಕಷ್ಟು ಹೊದಿಕೆಯೂ ಇರಲಿಲ್ಲವೆಂದು ದೇವದಾಸ್ ಹೇಳಿದ ಮೇಲಂತೂ ನನ್ನ ದುಃಖ ಇನ್ನೂ ಹೆಚ್ಚಿತು. ನಿನಗೆ ಬೇಕಾದುದನ್ನು ನೀನೇ ಕೇಳಿದೀಯೆ ಅಥವಾ ಯಾರಾದರೂ ಅದನ್ನು ಊಹಿಸಿಯಾರೆಂದು ನಂಬಿದೇನೆ.

ಅಡಿಗೆಯ ವಿಷಯದಲ್ಲಿ ಆಗಿರುವ ಬದಲಾವಣೆ ನಿನಗೆ ಗೊತ್ತಾಗಿರ ಬೇಕು. 'ಬಿ' ಅಡಿಗೆಮನೆಯಿಂದ ದೂರವಾಗುವಳು. ನೀನು 'ಎ'ಗೆ ಅಡಿಗೆಯ ಕೆಲಸದಲ್ಲಿ ನೆರವನ್ನು ನೀಡಬೇಕೆಂದು ನನ್ನ ಅಪೇಕ್ಷೆ. ಆದರೆ ಅದಕ್ಕೆ ಬಹಳ ತಾಳ್ಮೆ ಆವಶ್ಯಕವಾದರೆ ನೀನು ಆ ರೀತಿ ಮಾಡಬೇಕಾಗಿಲ್ಲ. ಆಕೆಗೇನೋ ಸಮಚಿತ್ತವಿಲ್ಲ. ಆಕೆ ಯಾವಾಗಲೂ ಹರ್ಷಚಿತ್ತಳಾಗಿರುವು ದಿಲ್ಲ. ಕ್ಷುಲ್ಲಕ ರೀತಿಯಲ್ಲಿಯೂ ವರ್ತಿಸಬಲ್ಲಳು. ಸದ್ಯಕ್ಕೆ ಆಕೆ ಶಾರೀರಕ ವಾಗಿಯೂ ಅಶಕ್ತಳಾಗಿದ್ದಾಳೆ. ಇಂಥ ಕ್ಷುಲ್ಲಕತನಕ್ಕೆ ಪ್ರತಿಯಾಗಿ ವಿಶಾಲ ಹೃದಯದಿಂದ ವರ್ತಿಸಲು ನೀನು ನಿನ್ನ ಕ್ರೈಸ್ತಧರ್ಮಶ್ರದ್ಧೆಯನ್ನೆಲ್ಲ ಆಚರಣೆಗೆ ತರಬೇಕು. ನಾವು ಹರ್ಷವಾಗಿದ್ದರೇ ನಿಜವಾಗಿಯೂ ವಿಶಾಲ ಹೃದಯ ಹೊಂದಿದಂತೆ. ಏನೋ ಬೇಜಾರಿನಿಂದ ವಿಶಾಲಹೃದಯ ತೋರಿಸುವ ಗೆಳೆಯರನ್ನು ನಾನು ಕಂಡಿದೇನೆ. ಅವರ ಔದಾರ್ಯ ಒಂದು ಬಗೆಯ ಧರ್ಮವೀರನ ಹಿಂಸಾನುಭವವಾಗಿದೆ. ಎಂಥ ವೇದನೆಯಿದ್ದರೂ ಹರ್ಷಚಿತ್ತದಿಂದಿರುವುದು, ತಿರಸ್ಕಾರದಿಂದ ಕಾಣುವಾತನನ್ನು ದಯೆ ಯಿಂದ ಕಾಣುವುದು, ಆತನಲ್ಲಿ ದುರ್ಬಲತೆ ಇದ್ದಷ್ಟು ಪ್ರೀತಿಸುವುದು— ನಿಜವಾದ ಔದಾರ್ಯ. ನಾವು ಆ ಸ್ಥಿತಿಯನ್ನು ಮುಟ್ಟಲು ಶಕ್ಯವಿಲ್ಲದೆ

* ಎಸ್ತರ್ ಆಶ್ರಮಕ್ಕೆ ಆಗಂತುಕಳಾಗಿ ಬರದೆ ಅಲ್ಲಿನ ನಿವಾಸಿಯಾಗಲು ಬಂದಿದ್ದಳು.

ಇರಬಹುದು. ಆದುದರಿಂದ ನಾವು ಪರೀಕ್ಷಿಸಬಾರದು. ನನ್ನ ಪ್ರಿಯ ಎಸ್ತರ್, 'ಎ' ನಿನ್ನನ್ನು ಪರೀಕ್ಷೆಗೀಡುಮಾಡಿದರೆ, ನಾನು ಸೂಚಿಸಿರುವಂತೆ ನೀನು ಗಾಢಸಂಪರ್ಕವನ್ನು ಬಿಡಬೇಕು; ಯಾವುದೇ ಕಾರಣಕ್ಕಾಗಲಿ ನೀನು ಆಂತರಿಕ ಶಾಂತಿಯನ್ನೂ ಹರ್ಷವನ್ನೂ ಕಳೆದುಕೊಳ್ಳಬಾರದೆಂದು ನನ್ನ ಇಚ್ಛೆ. ಆಶ್ರಮದ ರೀತಿಯಲ್ಲಿ ಹೆಚ್ಚಿನ ಹರ್ಷ, ಹೆಚ್ಚಿನ ಸುಖ, ಹೆಚ್ಚಿನ ಸೂಕ್ಷ್ಮರೀತಿಯ ಸತ್ಯದರ್ಶನ ಇವುಗಳನ್ನು ಪಡೆದುಕೊಂಡು ನಿನ್ನ ಬಾಳನ್ನು ಬೆಳೆಸಿಕೊಳ್ಳಬೇಕು. ಆಶ್ರಮದಲ್ಲಿದ್ದು ನೀನು ಮಹಾಕ್ಯೆಸ್ತಳಾಗ ಬೇಕೆಂದು ನನ್ನ ಆಸೆ. ನಿನ್ನೆ ದಿನ ಪೂರ್ತಿಯಾಗಿಯೂ ಮತ್ತು ರಾತ್ರಿಯೂ ನಿನ್ನ ಯೋಚನೆಯನ್ನೇ ನಾನು ಮಾಡುತ್ತಿದ್ದೆ. ನೀನು ಮಾನಸಿಕವಾಗಿಯೂ ದೈಹಿಕವಾಗಿಯೂ ಮತ್ತು ಆಧ್ಯಾತ್ಮಿಕವಾಗಿಯೂ ಚೆನ್ನಾಗಿ ವೃದ್ಧಿಹೊಂದಿ ಭಗವಂತನ ಸೇವೆಗೆ ಉತ್ತಮ ಸಾಧನವಾಗೆಂದು ಪ್ರಾರ್ಥಿಸುತ್ತೇನೆ.

ನೀನು 'ಡಿ'ಯವರ ಸ್ನೇಹ ಬೆಳಸಬೇಕೆಂದು ನನ್ನ ಇಚ್ಛೆ. ಅವರು ಯಾರೆಂಬುದನ್ನು ಮಹಾದೇವ್ ತಿಳಿಸುತ್ತಾನೆ. ಇನ್ನು ಹೆಚ್ಚಿಗೆ ಬರೆಯಲು ನನಗೆ ಕಾಲವಿಲ್ಲ.

ನೀನು ಅಪೇಕ್ಷಿಸಿದರೆ ಮಹಾದೇವನಿಗೆ ಈ ಪತ್ರವನ್ನು ತೋರಿಸು. ಇದು ನನ್ನ ಪ್ರಾರ್ಥನೆಯ ಫಲ. ಇಂದು ಮುಂಜಾನೆ ನಿನಗೆ ಸಂತಸದ ಸಂದೇಶ ತಿಳಿಸಲು ಆಶಿಸಿದೆ. ಮಹಾದೇವನ ವಿಷಯದಲ್ಲಿಯೂ ಇದೇ ನನ್ನ ಭಾವ. ಅವನು ಬಹುದೊಡ್ಡ ಹೊರೆಯನ್ನು ಹೊರಬೇಕು. ದೇವರು ಅವನಿಗೆ ಸೂಕ್ಷ್ಮ ಮನಸ್ಸನ್ನು ಕೊಟ್ಟು ಅವನ ವಿಷಯದಲ್ಲಿ ದಯೆ ತೋರದೆ ಇದ್ದಾನೆ. ಮಹಾದೇವ್ ಆಗಾಗ ಸಿಟ್ಟಿಗೇಳುವುದುಂಟು. ಅವನಿಗಿನ್ನೂ ಸಾಕಾದಷ್ಟು ದಿವ್ಯಾನುಭವವಿಲ್ಲ, ಆದುದರಿಂದ ಚಿಂತೆಗೊಳ ಗಾಗುತ್ತಾನೆ.

ಅವನಿಗೆ ದಯಮಾಡಿ ನೆರವಾಗು. ನೀನು ಅವನಿಂದ ನೆರವನ್ನು ಪಡೆದುಕೋ.

ನಿನ್ನ ಮದರಾಸಿನ ಅನುಭವಗಳನ್ನು ಕುರಿತು ಪತ್ರ ಬರೆ.

ಗಾಢಪ್ರೀತಿ,

ನಿನ್ನ,

**ಬಾಪೂ**

## ನಿನ್ನ ತ್ಯಾಗಭಾವ ಎಂದಿಗೂ ಮಾನಸಿಕ ಕ್ಲೇಶ ತರದಿರಲಿ.

ಲಾಹೋರ್

ಜನವರಿ ೨೪, ೧೯೨೦

ನನ್ನ ಪ್ರಿಯ ಮಗೂ,

ನಿನ್ನೆ ಲಾಹೋರಿಗೆ ಬಂದಾಗ ನಿನ್ನ ಪತ್ರ ತಲಪಿ ಹರ್ಷವಾಯಿತು.

ನೀನು ನಿನ್ನ ಹೃದಯವನ್ನು ಬಿಚ್ಚಿಟ್ಟಿದೀಯೆ. ಇದು ನನಗೆ ಸಂತೋಷಕರ. ಗೆಳೆತನದ ಮತ್ತು ಪ್ರೇಮದ ಅತ್ಯಂತ ನಿಜವಾದ ಪರೀಕ್ಷೆಯೇ ಇದು. ನೀನು ಈ ರೀತಿ ಬಿಚ್ಚುಹೃದಯದಿಂದ ಇದ್ದರೆ ನಿನಗೆ ನಾನು ಸಹಾಯ ಮಾಡಲು ಶಕ್ತಿ ಕೊಟ್ಟಂತಾಗುತ್ತದೆ. ನೀನು ಆಗಲೇ 'ಎ'ಯ ಕ್ಷುಲ್ಲಕತನವನ್ನು ಗಮನಿಸಿದ್ದೆ ಎಂಬುದರ ಬಗೆಗೆ ನನಗೆ ಸ್ವಲ್ಪವೂ ಸುಳಿವಿರಲಿಲ್ಲ. ನೀನು ಅವಳೊಂದಿಗೆ ಹೆಚ್ಚು ಸಂಪರ್ಕಮಾಡಬೇಕಾಗಿದ್ದುದರಿಂದ ನಾನು ಸುಮ್ಮನೆ ಎಚ್ಚರವಿತ್ತಿದ್ದೆ. ನನ್ನ ಎಚ್ಚರಿಕೆ ನಿನಗೆ ಸಕಾಲದಲ್ಲಿ ತಲಪಿತು. ಯುಕ್ತವಾದ ಕಾರ್ಯವನ್ನು ಯುಕ್ತವಾದ ಕಾಲದಲ್ಲಿಯೇ ಮಾಡುವ ಶಕ್ತಿಯನ್ನು ದೇವರು ನಿನಗೆ ನೀಡುತ್ತಾನೆ. ಆದರೆ ಒಂದು ವಿಚಾರ ನೆನಪಿರಲಿ. ನಿನ್ನ ತ್ಯಾಗಭಾವ ನಿನಗೆ ಮಾನಸಿಕ ಕ್ಲೇಶ ತರದಿರಲಿ; ನಿನ್ನ ವಿಷಯದಲ್ಲಾಗಲೀ, ನಿನ್ನ ಸುತ್ತ ಇರುವವರ ವಿಷಯದಲ್ಲಾಗಲೀ ಜುಗುಪ್ಸೆ ಹುಟ್ಟುವಂತೆ ಆಗದಿರಲಿ. ಕಾರ್ಯಕರ್ತರು ಸಾಮಾನ್ಯವಾಗಿ ಗುರಿಯಾಗುವ ತೀವ್ರವಾದ ಪ್ರಲೋಭನೆಗಳಲ್ಲೊಂದಿದು. ಅವರು ತ್ಯಾಗ ಮಾಡುತ್ತಾ ಹೋಗಿ ಎಲ್ಲ ವಿಷಯಗಳಲ್ಲಿಯೂ ಎಲ್ಲ ವ್ಯಕ್ತಿಗಳಲ್ಲಿಯೂ ಪ್ರತಿಫಲ ಕಾಣದವರಾಗಿ ಜುಗುಪ್ಸೆಹೊಂದುತ್ತಾರೆ. ನಾವು ಯಾವ ಪ್ರತಿಫಲವನ್ನೂ ನಿರೀಕ್ಷಿಸದೆ ಇದ್ದಾಗಲೇ ನಿಜವಾದ ತ್ಯಾಗವನ್ನು ಮಾಡಿದಂತೆ. ಈ ಶಬ್ದದ ಮೂಲಾರ್ಥವನ್ನು ತಿಳಿದುಕೊಳ್ಳುವುದು ಒಳ್ಳೆಯದು. ಅದು ನಿನಗೂ ಗೊತ್ತಿರುವಂತೆ—ಪವಿತ್ರಗೊಳಿಸುವುದು. ನಾವು ಕೆರಳಿದಾಗ ಅಥವಾ ಸಿಟ್ಟಿಗೆದ್ದಾಗ ನಾವಾಗಲೀ ಇತರರನ್ನಾಗಲೀ ಪವಿತ್ರಗೊಳಿಸಲಾರೆವು. ಎಷ್ಟೋ ಸಲ ಒಂದು ದಿವ್ಯಮುಖದಲ್ಲಿ ಕಂಡುಬರುವ ಮುಗುಳ್ನಗೆಯಲ್ಲಿ ಇರುವಂಥ ತ್ಯಾಗಭಾವ ತ್ಯಾಗವೆಂದು ಕರೆಯಲ್ಪಡುವು

ದರಲ್ಲಿ ಇರಲಾರದು. ಈ ವಾಕ್ಯಗಳಿಂದ ಮೇರಿ ಮತ್ತು ಮ್ಯಾಗ್ಡಲೀನರ* ಸ್ಮರಣೆ ನನಗೆ ಬರುತ್ತಿದೆ. ಇಬ್ಬರೂ ಸಾಧುಗಳಾಗಿದ್ದರು. ಬಹುಶಃ ಮೇರಿ ಹೆಚ್ಚು ತ್ಯಾಗಪರಳಾಗಿದ್ದಳೇನೋ. ನಿನ್ನ ಬಗೆಗೂ ಹೀಗೆಯೇ ಇದ್ದೀತು. 'ಎ' ಅನ್ನೋ ಅಥವಾ ಇತರ ಯಾರನ್ನೋ ತೃಪ್ತಿಪಡಿಸ ಲೋಸುಗ ನಿನ್ನ ಸತ್ತ್ವವನ್ನು ಮಿತಿಮೀರಿ ಉಪಯೋಗಿಸಬೇಡ. ಆಕೆ ಯೊಡನೆ ಹೊಂದಿಕೊಂಡು ಹೋಗಲು ನಿನಗೆ ಸಾಧ್ಯವಿಲ್ಲವೆಂದು ಕಂಡು ಬಂದ ಕೂಡಲೇ ನೀನು ಪ್ರತ್ಯೇಕ ಅಡಿಗೆಮನೆಯನ್ನು ಮಾಡಿಕೋ. ಆಮೇಲೂ ನೀನು ಆಕೆಗೆ ಸೇವೆಯನ್ನು ಸಲ್ಲಿಸಬಹುದು, ಆದರೆ ಹಿಂದಿನಷ್ಟು ಗಾಢಸಂಪರ್ಕದಿಂದ ಇರಬೇಕಾದುದಿಲ್ಲ. ನೀನು ಮಾಡುವ ಯಾವ ಕೆಲಸವೆ ಆಗಲಿ ನಿನ್ನ ಆತ್ಮಕ್ಕೂ ದೇಹಕ್ಕೂ ದಣಿವನ್ನುಂಟುಮಾಡಬಾರದು.

ಆಹಾರವೇ ಆಗಲೀ ಇನ್ನಾವುದೇ ಆಗಲೀ, ಎಲ್ಲ ಅಗತ್ಯವಾದ ಸೌಕರ್ಯವನ್ನೂ ದಯಮಾಡಿ ಕೇಳಿ ಪಡೆದುಕೋ. 'ಎಂ' ಅಥವಾ ನಿನಗೆ ಬಹಳ ಸಮೀಪವರ್ತಿಗಳಾದ ಬೇರೆ ಯಾರನ್ನಾದರೂ ಕೇಳಬಹುದು.

'ಡಿ', ನೀನು ವಿವರಿಸುವ ರೀತಿಯಲ್ಲಿ ನಿಜವಾಗಿಯೂ ಇದಾನೆಯೆ? ಅವನು ತನ್ನ ಜವಾಬದಾರಿಯನ್ನು ಕ್ರಮವಾಗಿ ಅರಿತುಕೊಳ್ಳುವಂತೆಯೂ ಮತ್ತು ವ್ಯಾಸಂಗದ ಮೇಲೆ ಮನಸ್ಸನ್ನಿಡುವಂತೆಯೂ ಒಳ್ಳೆಯ ಮಾತಿನಿಂದಲೇ ಪ್ರಯತ್ನಿಸು. ಅವನ ಪತ್ರಲೇಖನದ ಬಗೆಗೆ ಮೇಲ್ವಿಚಾರಣೆ ನಡೆಸು. ಅವನು ದಿನವೂ ಪೂರ್ತಿಯಾಗಿಯೂ ಅಂದವಾಗಿಯೂ ತನ್ನ ತಾಯಿಗೆ ಬರೆಯುವಂತೆ ನೋಡಿಕೋ.

ನಿನ್ನ ದುಃಖದಲ್ಲಿ ನಾನೂ ಪಾಲುಗೊಳ್ಳುತ್ತೇನೆ. ಡೆನ್ಮಾರ್ಕಿನಲ್ಲಿ ಇರುವ ನಿನ್ನ ಸಹೋದರನೊಂದಿಗೆ ಇರಬೇಕೆಂಬ ನಿನ್ನ ಇಚ್ಛೆ ನನಗೆ ಅರ್ಥವಾಗುತ್ತದೆ. ಆದರೆ ನೀನು ಬೇರೆ ಪಥವನ್ನು ಆರಿಸಿಕೊಂಡಿದೀಯೆ. ಆ ಪಥ ಯಾರನ್ನೂ ಹೊರಚ್ಚುಮಾಡುವಂಥ ಸೇವೆಯ ಪಥವಲ್ಲ. ನಿನ್ನ ಕಾರ್ಯ ಸಲ್ಲಿಸಲು ದೇವರು ನಿನಗೆ ಶಕ್ತಿ ನೀಡಲಿ.

ಬಾಪೂ

---

* ಮೇರಿ ಮತ್ತು ಮಾರ್ಥಾ; ಜೀಸಸನ ಶಿಷ್ಯೆಯರು. ಮೇರಿ ನಂಬಿಕೆ-ಪ್ರಧಾನವಾಗಿದ್ದವಳು, ಮಾರ್ಥಾ ಕರ್ಮನಿರತಳು.

# ಕೆಡುಕನ್ನು ಪ್ರತಿಭಟಿಸಬೇಡ.

ಭಾನುವಾರ
............೧೯೨೦

ನನ್ನ ಪ್ರಿಯ ಮಗು,

ನೀನು ಈಗ 'ಐ' ಒಂದಿಗೆ ಊಟ ಮಾಡಿಕೊಂಡಿದೀಯೆಂದು 'ಎಂ' ತಿಳಿಸುತ್ತಾನೆ. ಅಲ್ಲಿ ನಿನ್ನೊಂದಿಗೆ ದಿನವೆಲ್ಲ ಇಂಗ್ಲೀಷಿನಲ್ಲಿ ಮಾತನಾಡುವವರೊಬ್ಬರಿರುವುದರಿಂದ ನಿನಗೆ ಮಾನಸಿಕ ನೆಮ್ಮದಿ ಇರುವುದಾದರೆ ನನಗೆ ಸಂತೋಷವೇ. ನಿನ್ನ ವಿವೇಚನಾಯುಕ್ತ ಪ್ರೇಮವನ್ನು 'ಎಫ್' ಮೇಲೆ ಹನಿಸಬಹುದು. ಇದರಿಂದ ಶೀಘ್ರ ಪರಿಣಾಮವೂ ಆದೀತು.

ನೀನು ನಿನ್ನ ಆರೋಗ್ಯವನ್ನೂ ಮಾನಸಿಕ ನೆಮ್ಮದಿಯನ್ನೂ ಕಳೆದುಕೊಳ್ಳುವುದಾದರೆ ನನಗೆ ಬಹಳ ವ್ಯಥೆಯಾಗುತ್ತದೆ. 'ಕೆಡುಕನ್ನು ಪ್ರತಿಭಟಿಸಬೇಡ' ಎಂಬುದರ ಅರ್ಥ ಮೇಲೆ ಕಂಡುಬರುವುದಕ್ಕಿಂತಲೂ ಹೆಚ್ಚು ಆಳವಾದುದು. ಉದಾಹರಣೆಗೆ 'ಎ'ನಲ್ಲಿ ಕಂಡುಬರುವ ದುರ್ಗುಣವನ್ನು ನೀನು ಪ್ರತಿಭಟಿಸಬಾರದು. ನೀನಾಗಲೀ, ನಾನೇ ಆಗಲಿ ಅವರ ಬಗೆಗೆ ಚಡಪಡಿಸಿ ಅಥವಾ ತಾಳ್ಮೆ ತಪ್ಪಿ, 'ಈ ಹೆಂಗಸು ಸತ್ಯವನ್ನೇಕೆ ಕಾಣಲಾರಳು ಅಥವಾ ನನ್ನ ಪ್ರೀತಿಗೆ ಪ್ರತಿಯಾಗಿ ಏಕೆ ಪ್ರೀತಿಸಲಾರಳು?' ಎಂದುಕೊಳ್ಳಬಾರದು. ಜಿಂಕೆ ಹೇಗೆ ತನ್ನ ಮೈಯ ಚುಕ್ಕಿಗಳನ್ನು ಬದಲಾಯಿಸಿಕೊಳ್ಳಲಾರದೋ ಅದೇ ರೀತಿ ಆಕೆ ತನ್ನ ಸ್ವಭಾವವನ್ನೂ ಬದಲಾಯಿಸಿಕೊಳ್ಳಲಾರಳು. ಆಕೆ ಪ್ರತಿಯಾಗಿ ಮಿಡಿಯದಿದ್ದರೆ ತನ್ನ ಸ್ವಭಾವದಂತೆ ಮಾತ್ರ ವರ್ತಿಸಿಯಾಳು. ಇದಕ್ಕಾಗಿ ನಾವು ಚಡಪಡಿಸಿದರೆ ಕೆಡುಕನ್ನು ಪ್ರತಿಭಟಿಸಿದಂತೆ. ಇದನ್ನು ನೀನು ಒಪ್ಪುವೆ ತಾನೆ? ಆ ವಿಧಿಯ ಆಳವಾದ ಅರ್ಥ ಇದೇ. ಆದುದರಿಂದ ಎಲ್ಲರೊಂದಿಗೂ ನೀನು ವರ್ತಿಸುವಾಗ ನಿನ್ನ ಸಮಬುದ್ಧಿಯನ್ನು ರಕ್ಷಿಸಿಕೊಳ್ಳಬೇಕು. ಎರಡನೆಯದಾಗಿ, ನಿನ್ನ ದೈಹಿಕ ಸೌಕರ್ಯಕ್ಕೋಸ್ಕರ ಬೇಕೆನಿಸುವ ಯಾವ ಅಗತ್ಯ ವಸ್ತುವನ್ನೂ ತ್ಯಜಿಸಬೇಡ. ಬೇರೆ ಯಾರನ್ನೂ ಕೇಳಲು ನಿನಗೆ ಇಷ್ಟವಿಲ್ಲವಾದರೆ ನನ್ನನ್ನೇ ಕೇಳು.

ನಾನು ನಿನ್ನ ವಿಷಯದಲ್ಲಿ ತವಕಪಡುತ್ತಿರುವಾಗ ನೀನು ದಿನವೂ ಬರೆಯಬೇಕೆಂದು ಅಪೇಕ್ಷಿಸುತ್ತೇನೆ.

ಪ್ರೀತಿ ಮತ್ತು ಪ್ರಾರ್ಥನೆಗಳು.

ನಿನ್ನ,
**ಬಾಪೂ**

## ಒಂದು ವಿವಾಹಕೂಟ

ಲಾಹೋರ್
ಭಾನುವಾರ..........೧೯೨೦

ನನ್ನ ಪ್ರಿಯ ಮಗು,

ನೀನು ಅನೇಕ ದಿವಸಗಳಿಂದ ನನಗೆ ಒಂದು ಪಂಕ್ತಿಯನ್ನು ಕೂಡ ಬರೆಯದೆ ಕೆಟ್ಟ ಮಗುವಾಗಿದೀಯೆ. ನಿನ್ನ ಬಗೆಗೆ ಇತರರಿಂದ ನನಗೆ ವಾರ್ತೆ ಏನೋ ಗೊತ್ತಾಗುತ್ತದೆ. ನೀನೊಂದು ವಿವಾಹಕೂಟದಲ್ಲಿದೀಯೆ. ಇದರಿಂದ ನನಗೆ ಕೊಂಚ ತಲ್ಲಣವಾಗಿದೆ. ಇದೆಲ್ಲ ಏನು? ನೀನು ಅಪರಿಚಿತರ ನಡುವೆ ಹೇಗೆ ನಡೆದುಕೊಂಡೆ? ಅಲ್ಲಿಗೆ ನೀನು ಕರ್ತವ್ಯ ದೃಷ್ಟಿಯಿಂದ ಹೋಗಿದ್ದರೆ ಅದು ತಪ್ಪು. ಏಕೆಂದರೆ ಅಂಥ ಕೂಟಗಳಿಗೆ ಹೋಗಬೇಕಾದಂಥ ಕರ್ತವ್ಯವೇನೂ ಇರಲಿಲ್ಲ. ಏನೋ ಹೊಸ ಅನುಭವ ವನ್ನು ಹೊಂದಬೇಕೆಂಬ ದೃಷ್ಟಿಯಿಂದ ಹೋಗಿದ್ದರೆ ನಿನಗೆ ಅಪೇಕ್ಷಣೀಯ ಅನುಭವ ದೊರಕಿತೋ ಹೇಗೋ ಕಾಣೆ. ಕೂಟ ಎಲ್ಲಿತ್ತು? ಯಾರು ಯಾರು ಸೇರಿದ್ದರು? ಅವರಿಗೆ ಇಂಗ್ಲೀಷ್ ಗೊತ್ತಿದ್ದಿತೆ? ನೀನು ಅಲ್ಲಿ ಯಾವ ಆಹಾರ ತೆಗೆದುಕೊಂಡೆ? ನೀನು ಎಲ್ಲಿ ಮಲಗಿದ್ದೆ? ನೀನು ಅಲ್ಲಿಗೆ ಹೋಗಲು ಸಲಹೆ ಇತ್ತವರು ಯಾರು? ಇದೆಲ್ಲ ನನಗೆ ವಿಚಿತ್ರವಾಗಿ ಕಾಣುತ್ತದೆ. ನೀನು ಅರಿವಿಲ್ಲದೆ ಪ್ರಯೋಗಗಳನ್ನು ನಡೆಸಬಾರದೆಂದು ಅಪೇಕ್ಷಿಸುತ್ತೇನೆ. ಇಂದು ಭಾನುವಾರ ಮುಂಜಾನೆ. ನಿನ್ನ ವಿಷಯದಲ್ಲಿ ನನಗೆ ಪೂರ್ಣ ಆತಂಕ ಮೂಡಿದೆ. ಆತಂಕಪಡುವುದು ಮೂಢತನವೆಂದು ನಾನು ಬಲ್ಲೆ. ದೇವರು ನಮ್ಮೆಲ್ಲರಿಗೂ ಮೀರಿದವನಾಗಿ ರಕ್ಷಕನಾಗಿದ್ದಾನೆ. ಅವನ ಸಂಕಲ್ಪವೇ ನಡೆದೀತು. ನೀನಾದರೂ 'ನನ್ನ ಮಗು'ವೆಂದು

ನಿನ್ನನ್ನು ಕರೆಯುವ ವಿಶೇಷ ಭಾಗ್ಯವನ್ನು ನನಗೆ ಕೊಟ್ಟಿದೀಯೆ. 'ಯುಗ ಯುಗದ ಆಧಾರವೇ, ನೀ ಎನಗಾಗಿ ಬಾಯ್ದೆರೆದಿರುವೆ; ನಿನ್ನನೇ ಮೊರೆ ಹೊಗುವೆ ನಾ.' (Rock of Ages, cleft for me; Let me hide myself in Thee.)

ನಿನ್ನ,
**ಬಾಪೂ**

## ಸಂಯಮಭರಿತ ಅಂತರ್ವಾಣಿಯೇ ಭಗವಂತನ ವಾಣಿ

ಲಾಹೋರ್

ನನ್ನ ಪ್ರಿಯ ಮಗು,

ಇದರ ಜೊತೆಗೆ ಇಟ್ಟಿರುವ ಪತ್ರವನ್ನು ಪ್ರಾತಃಕಾಲ ಬರೆದೆ. ನೀನು ಸೀಸದ ಕಡ್ಡಿಯಿಂದ ಬರೆದ ಪತ್ರ ಈಗತಾನೆ ತಲಪಿತು. ನೀನು ಆಹ್ವಾನವನ್ನು* ಒಪ್ಪಿಕೊಂಡುದು ತಪ್ಪೆಂದು ನನಗೆ ಸ್ಪಷ್ಟವಾಗಿ ಕಾಣುತ್ತದೆ. ನೀನಿನ್ನೂ ಹರೆಯದವಳು, ಅನುಭವವಿಲ್ಲದವಳು. ನಿನಗೇನೋ ಚಿನ್ನದಂಥ ಹೃದಯವಿದೆ. ಆದರೆ ಅದು ಚಂಚಲತೆಯಿಲ್ಲದಿರಬೇಕು. ಚುಕ್ಕಾಣಿಯಿಲ್ಲದ ಹಡಗು ಎಷ್ಟು ದೊಡ್ಡದಾದರೇನು? ಅದು ಯಾವ ಗುರಿ ಮುಟ್ಟಲು ಸಾಧ್ಯ? ಅದು ಅತ್ತಿಂದಿತ್ತ ಮಾರ್ಗ ತಪ್ಪಿಹೋಗುತ್ತದೆ. ಇಂದು ನಿನಗಾಗಿ ನನ್ನ ಹೃದಯ ದುಃಖತಪ್ತವಾಗಿದೆ. ನೀನು ಒಂದು ವಿಧಾನದಲ್ಲಿ ಬೆಳೆಯುತ್ತಿದ್ದ ಸನ್ನಿವೇಶದಿಂದ† ಹೊರಬಂದಿದೀಯೆ. ಈಗ ಬಂದಿರುವ ಸನ್ನಿವೇಶ,§ ಅದಕ್ಕೆ ನೀನು ಚೆನ್ನಾಗಿ ಹೊಂದಿಕೊಳ್ಳುವೆಯಾದರೆ, ಬಹಳ ಚೆನ್ನಾಗಿ ಬೆಳೆಯುವೆ. ನಿನ್ನ ಅನಿಶ್ಚಿತ ಭಾವದಲ್ಲಿ ನಿನ್ನನ್ನು ನೀನೇ ಹಳಿದುಕೊಳ್ಳಬಾರದು. ಸಂಯಮಪೂರಿತ ಅಂತರ್ವಾಣಿಯಂತೆಯೇ ನಡೆಯಬೇಕು. ಅದು ಭಗವಂತನ ವಾಣಿ. ಸಂಯಮ

---

* ಹಿಂದೆ ಹೇಳಿರುವ ವಿವಾಹಕೂಟದ ಆಹ್ವಾನವಿರಬೇಕು.

† ಮಿಷನರಿ ಸನ್ನಿವೇಶ.

§ ಸಾಬರಮತಿ ಆಶ್ರಮದ ಸನ್ನಿವೇಶ.

ರಹಿತ ಅಂತರ್ವಾಣಿ ನರಕಕ್ಕೆ ಮಾರ್ಗ; ಏಕೆಂದರೆ ಅದು ಪಿಶಾಚಿಯ ವಾಣಿ. ನಿನ್ನೊಂದಿಗೆ ನಾನೂ ಇದ್ದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು. 'ಪ್ರಭು, ಪ್ರಭು, ಎಂದು ನನ್ನನ್ನು ಕರೆವವರೆಲ್ಲ ಸ್ವರ್ಗರಾಜ್ಯವನ್ನು ಸೇರಲಾರರು. ಆದರೆ ಯಾರು ಸ್ವರ್ಗದಲ್ಲಿರುವ ನನ್ನ ಪಿತನ (ದೇವರ) ಇಚ್ಛೆಯನ್ನು ಪಾಲಿಸುವರೊ ಅವರು ಮಾತ್ರ ಆ ರಾಜ್ಯವನ್ನು ಸೇರುವರು.' ಇದನ್ನು ನನ್ನ ನೆನಪಿನಿಂದ ಬರೆಯುತ್ತಿದೇನೆ. ಇಷ್ಟು ಸಾಕು.

ನೀನು ಸಂಯಮಬದ್ಧಳಾಗು. ಮಹಾದೇವನೊಂದಿಗೆ ಸಮಾಲೋಚಿಸದೆ ಯಾವ ಕೆಲಸವನ್ನೂ ಮಾಡಬೇಡ. ಅವನು ನಿನ್ನ ಹಿರಿಯ ಅಣ್ಣ ಆಗಲಿ. ಅವನೊಡನೆ ಗಾಢಸಂಪರ್ಕ ಹೊಂದಿರು. ನಿನಗೆ ಅಗತ್ಯವಾದ ಆಹಾರವನ್ನು ಕೇಳಿ ತೆಗೆದುಕೊ, ಎಷ್ಟು ವಿಶ್ರಾಂತಿ ಬೇಕೋ ಅಷ್ಟನ್ನು ತೆಗೆದುಕೊ. ನಿನ್ನ ದೇಹಕ್ಕೂ ಮನಸ್ಸಿಗೂ ವಿಶ್ರಾಂತಿ ಕೊಡು.

ದಿನವೂ ಒಂದು ಸಮಗ್ರ ಪತ್ರ ಬರೆ.

ನಿನ್ನ ಚಂಚಲತೆಯೇ ನಿನಗಾಗಿ ಹೆಚ್ಚು ಪ್ರಾರ್ಥನೆ ಸಲ್ಲಿಸುವುದಕ್ಕೂ ನಿನ್ನನ್ನು ಹೆಚ್ಚು ಪ್ರೀತಿಸುವುದಕ್ಕೂ ನನ್ನನ್ನು ಪ್ರೇರಿಸುತ್ತಿದೆ.

ನಿನ್ನ,

**ಬಾಪೂ**

## ಪವಿತ್ರ ದೇಗುಲ

ನನ್ನ ಪ್ರಿಯ ಮಗು,

'ಎಸ್'ಗೆ ನೀನು ಬರೆದಿರುವ ದುಃಖಭರಿತ ಪತ್ರವನ್ನು ನಾನು ನೋಡಿದೇನೆ. ಅದರಲ್ಲಿ ನೀನು ಹೃದಯವನ್ನೇ ಬಿಚ್ಚಿಟ್ಟಿದೀಯೆ. ಅದು ನನಗೆ ಹರ್ಷವನ್ನುಂಟುಮಾಡಿತು. ನೀನು ಆಶ್ರಮದಲ್ಲೇ ಇರಲು ಸಾಧ್ಯವಾಗುವುದಾದರೆ ನಾನು ಬರುವವರೆಗೂ ಅಲ್ಲಿಂದ ನಿರ್ಗಮಿಸಬೇಡವೆಂದು ಈ ದಿನ ತಾರನ್ನು ಕಳಿಸಿದೇನೆ. ಆಶ್ರಮದಲ್ಲಿ ನನಗೆ ದೊರಕುವ ಮುಂಜಾನೆಯ ವೇಳೆಯಲ್ಲಿ ನಿನ್ನೊಂದಿಗೆ ಕೆಲವು ಸಲ ದೀರ್ಘ ಮಾತನಾಡಲು ಅಪೇಕ್ಷಿಸುತ್ತೇನೆ. ನಾನು ಸೂಚಿಸಿರುವ ಸ್ನಾನಗಳನ್ನೂ ನೀನು ಮಾಡ

ಬೇಕೆಂದು ಒತ್ತಾಯಪಡಿಸುತ್ತೇನೆ. ನಿನಗೆ ಆವಶ್ಯಕವಾದ ನೀರನ್ನು ಕೇಳಿ ತರಿಸಿಕೊ.

ನೀನೇನು ಅಯೋಗ್ಯ ಮಗುವಲ್ಲ! ನಿನ್ನ ಅದ್ಭುತಪ್ರೇಮದಿಂದಲೂ ಅಂತಃಸಾಕ್ಷಿಯಂತೆ ನಡೆಯುವಿಕೆಯಿಂದಲೂ ನನಗೆ ಬಹಳ ಪ್ರಿಯಳಾಗಿ ದೀಯೆ. ನೀನು ಚಂಚಲತೆಯಿಂದ ಕೂಡಿರುವುದರಿಂದ ನಿನ್ನ ಯೋಗ್ಯತೆಯ ಬಗೆಗೆ ನನ್ನ ಮೆಚ್ಚುಗೆ ಸ್ವಲ್ಪವೂ ಕಡಿಮೆಯಾಗುವುದೆಂದು ಒಂದು ಕ್ಷಣವೂ ಯೋಚಿಸಬೇಡ. ನೀನು ಎಲ್ಲಿ ಶಕ್ತಿಗೊಳ್ಳಬೇಕೆಂದು ಸೂಚಿಸು ವುದು ನನ್ನ ಭಾಗ್ಯ. ಈ ದೇಹ ಒಂದು ಪವಿತ್ರ ದೇಗುಲವಾದರೆ ಅದರ ಬಗೆಗೆ ನಾವು ಅತ್ಯಂತ ಎಚ್ಚರಿಕೆಯಿಂದ ಕೂಡಿರಬೇಕು—ಎಂದರೆ, ಅದನ್ನು ಅತಿಯಾಗಿ ಲಾಲಿಸಲೂ ಬಾರದು ಅಥವಾ ಸ್ವಲ್ಪವೂ ಪರಿಗಣಿಸದೆಯೂ ತಾತ್ಸಾರಬುದ್ಧಿಯಿಂದಲೂ ಇರಬಾರದು.

ಸದಾ ಪ್ರಾರ್ಥನೆಯಿಂದೊಡಗೂಡಿದ ಗಾಢಪ್ರೇಮ.

ನಿನ್ನ,
**ಬಾಪೂ**

## ಮಹಾಸೇವೆಯ ಸಾಧನ

ಕಾಶೀಗೆ ಮಾರ್ಗದ ರೈಲಿನಲ್ಲಿ
ಭಾನುವಾರ

ನನ್ನ ಪ್ರಿಯ ಮಗು,

ನಾನು ಕಾಶೀ ಮಾರ್ಗದಲ್ಲಿ ಪ್ರಯಾಣಮಾಡುತ್ತಿದೇನೆ. ಇಷ್ಟರಲ್ಲೇ ಸಂಧಿಸೋಣ. ನೀನು ನನ್ನೊಡನಿದ್ದು ದೇವದಾಸನಂತೆ ಸೇವೆಸಲ್ಲಿಸುತ್ತಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು! ಅದು ನಿಮ್ಮಿಬ್ಬರಿಗೂ ಪ್ರಿಯವೆಂದು ನಾನು ಬಲ್ಲೆ. ಯಾರಿಗೆ ಯಾರೂ ತಂದೆಯಂತೆ ವರ್ತಿಸಲು ಸಾಧ್ಯವಿಲ್ಲ. ಆದರೆ ಈ ದೇಶವನ್ನು ಸ್ವೀಕಾರ ಮಾಡಿರುವ ನಿನಗೆ ನನ್ನ ಕೈಲಾದಷ್ಟೂ ತಂದೆ ಯಂತೆ ವರ್ತಿಸಲು ಅಪೇಕ್ಷಿಸುತ್ತೇನೆ. ನಿನ್ನ ಆರೋಗ್ಯವನ್ನು ಸರಿಪಡಿಸಿ ಕೊಳ್ಳುವುದಕ್ಕೋಸ್ಕರ ನೀನು ಡೆನ್ಮಾರ್ಕಿಗೆ ಹಿಂದಕ್ಕೆ ಹೋಗಬೇಕೆಂಬು ದನ್ನು ಕೇಳಿ ನನಗೆ ನಾಚಿಕೆಯಾಗುತ್ತದೆ. ನೀನು ನಿನ್ನ ಆರೋಗ್ಯವನ್ನು ಚೆನ್ನಾಗಿ ಗುಣಪಡಿಸಿ, ನೀನು ಒಳ್ಳೆ ಕ್ರೈಸ್ತಳಾಗಿಯೂ ಒಳ್ಳೆಯ ಕುಮಾರಿ

ಯಾಗಿಯೂ ಡೆನ್ಮಾರ್ಕಿಗೆ ಹೋಗಬೇಕೆಂಬುದು ನನ್ನ ಇಚ್ಛೆ. ನೀನು ಈ ಜೀವನದಲ್ಲಿಯೇ ಪೂರ್ಣ ಬೆಳವಣಿಗೆಯನ್ನು ಹೊಂದಬಹುದಾದ ಸಾಧ್ಯತೆ ಯೆಲ್ಲ ಇದೆ. ದೇವರು ನಿನ್ನ ಪ್ರಿಯ ವಾಂಛೆಗಳನ್ನೆಲ್ಲ ಈಡೇರಿಸಲಿ; ನೀನು ಮಾನವತೆಯ ಮಹಾಸೇವೆ ಸಲ್ಲಿಸುವ ಸಾಧನವಾಗು. ನಿನ್ನ ಮಾನವತೆಯ ಪ್ರೇಮದ ಅಭಿವ್ಯಕ್ತತೆಯಾಗಿ ಮಾತ್ರ ನಿನ್ನ ಭಾರತಪ್ರೇಮ ಸ್ವೀಕೃತವಾಗಬಲ್ಲದು. 'ಎನ್ನದೆಂಬುದೇನೂ ಇಲ್ಲ, ಸಕಲವೂ ನಿನ್ನದೇ' ಎಂಬುದು ಅತ್ಯಂತ ಹಿರಿಯ ಪ್ರಾರ್ಥನೆ. ಇದು ನಿನಗೂ ನನಗೂ ಇಬ್ಬರಿಗೂ ಸತ್ಯವಾಗಲಿ.

ಪೂರ್ಣ ಪ್ರೇಮದೊಡನೆ. ನಿನ್ನ,

**ಬಾಪೂ**

'ಎ'ಗೆ ನಿನ್ನ ಹೃದಯವನ್ನೆಲ್ಲ ನೀಡು.

(ಎಸ್ತರ್ ಡೆನ್ಮಾರ್ಕಿಗೆ ಹೊರಟುಹೋದಳು. ಅಲ್ಲಿ ಇ. ಕೆ. ಮೆನನ್ ಎಂಬ ಭಾರತೀಯ ವೈದ್ಯರನ್ನು ವಿವಾಹವಾದಳು. ಈ ವಾರ್ತೆ ಕೇಳಿ ಬಾಪೂ ಬರೆದ ಪತ್ರ ಈ ಕೆಳಗಿನದು :)

## ಆವನ ಕೃಪೆಯಿಂದ........ಸ್ವರಾಜ್ಯ

ಪ್ರವಾಸದಲ್ಲಿ

ನನ್ನ ಪ್ರಿಯ ಮಗು, ಸೆಪ್ಟೆಂಬರ್ ೪, ೧೯೨೦

ನಾನು ಪೂರ್ವ ಬಂಗಾಳದ ಪ್ರವಾಸ ಮುಗಿಸಿಕೊಂಡು ಕಲ್ಕತ್ತಾಕ್ಕೆ ಬರುವ ವೇಳೆಗೆ ನಿನ್ನ ಪತ್ರ ಬಂದಿದ್ದಿತು.

ನಿನಗೂ ನಿನ್ನಾತನಿಗೂ ಸೇವೆಯ ಸುಖಜೀವನ ಲಭಿಸಲೆಂದು ಹಾರೈಸುತ್ತೇನೆ.

ನಿನ್ನ ಪತ್ರಕ್ಕಾಗಿಯೇ ನಾನು ತವಕಗೊಂಡಿದ್ದೆ; ನೀನು ಹೇಗೆ ಇದೀಯೋ ಅರಿಯಲು ಆತುರನಾಗಿದ್ದೆ.

ನಿನಗೆ 'ಯಂಗ್ ಇಂಡಿಯಾ'* ಏಕೆ ಬರುತ್ತಿಲ್ಲವೊ ಅರ್ಥವಾಗಿಲ್ಲ, ವಿಚಾರಿಸುತ್ತೇನೆ.

---

* ಪತ್ರಿಕೆ.

ನೀನು ಭಾರತಕ್ಕೆ ಬರುವ ವೇಳೆಗೆ ಆಶ್ರಮ ತನ್ನ ಪೂರ್ಣ ಕಾಲವನ್ನು ಹಿಂಜುವುದು, ನೂಲುವುದು, ನೇಯ್ಗೆ ಇವುಗಳಿಗಾಗಿ ವಿನಿಯೋಗಿಸಿರುತ್ತದೆ. ನೀನು ಡೆನ್ಮಾರ್ಕಿನಲ್ಲಿ ಕೈಯಿಂದ ನೂಲುವುದು ಮತ್ತು ನೇಯ್ಗೆ ಇವುಗಳ ಬಗೆಗೆ ಏನಾದರೂ ಇದ್ದರೆ, ವ್ಯಾಸಂಗ ಮಾಡಿರುವೆ ಎಂದು ನಂಬಿದೇನೆ.

ದೇವರು ದೊಡ್ಡವನು. ನಮ್ಮ ಪ್ರಯತ್ನ ಹಾಗಿರಲಿ, ಅವನ ಕೃಪೆಯಿದ್ದರೆ ಈ ವರುಷವೇ† ನಮಗೆ ಸ್ವರಾಜ್ಯ ಬಂದೀತು. ಆಗ ನೀನು ಯಾವ ಆತಂಕವೂ ಇಲ್ಲದೆ ಭಾರತಕ್ಕೆ ಹಿಂದಿರುಗಿ ಬರಬಹುದು.§ ಸ್ವರಾಜ್ಯವನ್ನು ಗಳಿಸಲು ಎಷ್ಟು ಸ್ಥಿತಪ್ರಜ್ಞತೆ ಬೇಕೋ ಅದನ್ನು ರೂಪಿಸಲೂ ಅಷ್ಟೇ ಬೇಕು. ಸ್ವರಾಜ್ಯವನ್ನು ಗಳಿಸಲು ಆನ್ ಮೇರಿ ಇಲ್ಲಿ ಕೆಲಸ ಮಾಡಿದರೆ ನೀನು ಡೆನ್ಮಾರ್ಕಿನಿಂದಲೇ ಮಾಡು.

ನಿಮ್ಮಿಬ್ಬರಿಗೂ ಪ್ರೀತಿ.

ನಿನ್ನ,

**ಬಾಪೂ**

## ಒಂದು ಸ್ವಾಗತ ನೀಡುವ ತಾರು

(ಎಸ್ತರ್ ಮತ್ತು ಆಕೆಯ ಪತಿ ಡಾ. ಮೆನನ್ ಇಬ್ಬರೂ ಭಾರತಕ್ಕೆ ಹಿಂದಿರುಗಿ ಬಂದು ಪೋರ್ಟೋನೋವೋದಲ್ಲಿ ಮಿಸ್ ಪೀಟರ್‌ಸನ್ ಅವರ ಶಾಲೆ ಮತ್ತು ಆಶ್ರಮ ನಡೆಸಲು ನೆರವನ್ನು ನೀಡುತ್ತಿದ್ದರು. ಆಗ ಕಳಿಸಿದ ತಾರು ಇದು :)

ದೇವರು ನಿಮ್ಮಿಬ್ಬರನ್ನೂ ರಕ್ಷಿಸಲಿ.

**ಗಾಂಧೀ**

---

† ಅಸಹಕಾರ ಆಂದೋಲನ ಆರಂಭವಾದಾಗ 'ಒಂದೇ ವರ್ಷದಲ್ಲಿ ಸ್ವರಾಜ್ಯ' ಎಂದು ಬಾಪೂ ಘೋಷಿಸಿದ್ದರು. ಅದು ಜನತೆಯ ಕ್ರಿಯಾಸಿದ್ಧಿಯನ್ನು ಅವಲಂಬಿಸಿತ್ತು.

§ ಬ್ರಿಟಿಷ್ ಸರಕಾರ ಎಸ್ತರ್ ಭಾರತಕ್ಕೆ ಹಿಂದಿರುಗಿ ಬರಲು ಅಪ್ಪಣೆ ನೀಡಿರಲಿಲ್ಲ.

## ತ್ಯಾಗ

ಆಜ್ಮೀರ್
ನನ್ನ ಪ್ರಿಯ ಮಗು, ಮಾರ್ಚ್ ೮, ೧೯೨೩

ಇಲ್ಲಿ ಒಂದು ದಿನ ಮಾತ್ರ ಇರಲು ಬಂದಿದೇನೆ. ಈಗಲೇ ನಿನಗೆ ಪತ್ರ ಬರೆಯಲು ವೇಳೆ ದೊರೆತುದು. ಇನ್ನೊಬ್ಬರೊಡನೆ ನಿನ್ನ ಬಾಳನ್ನು ಹಂಚಿಕೊಳ್ಳುವುದು ನಿನ್ನ ಸ್ವೇಚ್ಛಾಪ್ರವೃತ್ತಿಯ ಸ್ವಾತಂತ್ರ್ಯ ಕಳೆದು ಕೊಂಡ ನಷ್ಟವನ್ನು ಮೇರೆ ಮೀರಿ ತುಂಬಿಕೊಟ್ಟಿದೆ. ವಿವಾಹವೆನ್ನುವು ದಕ್ಕೆ ಏನಾದರೂ ಅರ್ಥವಿರಬೇಕಾದರೆ ಅದು ನಮ್ಮೆಲ್ಲರನ್ನೂ ಕಾದಿರುವ ಮಹಾತ್ಯಾಗದ ಸಂಕೇತವಾಗಿರಬೇಕು. ಇಬ್ಬರು ವಿಭಿನ್ನ (ಆಕಾರದಲ್ಲಿ) ವ್ಯಕ್ತಿಗಳ ಪರಸ್ಪರ ತ್ಯಾಗ ಹೆಚ್ಚಿನ ಸ್ವಾತಂತ್ರ್ಯ, ಏಕೆಂದರೆ ಅದು ಹೆಚ್ಚು ಹೊಣೆಗಾರಿಕೆಯನ್ನು ಸ್ವೀಕರಿಸಿದಂತೆ. ಅತ್ಯಂತ ದೊಡ್ಡ ಹೊಣೆಗಾರಿಕೆ ಯನ್ನು ನಿರ್ವಹಿಸುವುದೇ ಅತ್ಯಂತ ದೊಡ್ಡ ಸ್ವಾತಂತ್ರ್ಯ. ಇದು ಭಗವಂತನಿಗೆ ಪೂರ್ಣ ಶರಣಾಗುವುದರಿಂದ ಮಾತ್ರ ಲಭ್ಯ.

ನಿನಗೆ ಬರಬೇಕೆನಿಸಿದಾಗ ನೀನು ಬರುವೆಯೆಂದು ನನಗೆ ಗೊತ್ತಿದೆ. ನಾನು ಸ್ವತಂತ್ರನಾಗಿಯೇ ಇರುವುದಾದರೆ ಕೆಲವು ಕಾಲ ಗುಜರಾತಿನಿಂದ ಹೊರಗೆ ಹೋಗುವುದಿಲ್ಲ. ನನ್ನ ಬಂಧನದ ಬಗೆಗೆ ವಿಧವಿಧವಾದ ವಾರ್ತೆಗಳು ಹಬ್ಬಿವೆ.

ಮಿಸ್ ಪೀಟರ್‌ಸನ್ ನನ್ನ ಒಂದು ಪತ್ರಕ್ಕೆ ಉತ್ತರ ಬರೆಯ ಬೇಕಾಗಿದೆ.

ನಿಮಗೆಲ್ಲ ನನ್ನ ಪ್ರೇಮ.

ನಿನ್ನ,
ಬಾಪೂ

## ಸತ್ಯ-ಅಹಿಂಸೆಗಳಿಲ್ಲದೆ ನಾನು ಜೀವಿಸಲಾರೆ

ನನ್ನ ಪ್ರಿಯ ಎಸ್ತರ್,

ಬಿಹಾರದಲ್ಲಿ ಪ್ರವಾಸಮಾಡುತ್ತಾ ಸುಂದರವಾದ ಸ್ಥಳ ಸೇಪ್‌ಪುರ್‌ನಿಂದ ಇದನ್ನು ಬರೆಯುತ್ತಿದೇನೆ. ಇಂದು ನನ್ನ ಸೋಮವಾರ.* ನಿನ್ನ ದೀರ್ಘ ಪತ್ರ ನನ್ನ ಮುಂದೆ ಇದೆ. ನಾನು ಸದಾ ನಿಮ್ಮೆಲ್ಲರನ್ನೂ ಕುರಿತು ಚಿಂತಿಸಿದೇನೆ. ನೀನು ಪೂರ್ಣವಾಗಿ ಗುಣಮುಖವಾಗಿದೀಯೆಂದೂ, ಅದು ಭಾರತೀಯ ಔಷಧಿಯಿಂದ ಆಯಿತೆಂದೂ ಕೇಳಿ ನನಗೆ ಎಷ್ಟೋ ಮನಸ್ಸಿನ ಆತಂಕ ಹರಿಯಿತು. ಹೀಗೆ ಗಳಿಸಿರುವ ಆರೋಗ್ಯವನ್ನು ನೀನು ಕಾಪಾಡಿಕೊಳ್ಳುವೆಯೆಂದು ನಂಬಿದೇನೆ.

ಮುಂದಿನ ವರ್ಷದ ಆದಿಯಲ್ಲಿ ಮಿಸ್ ಪೀಟರ್‌ಸನ್ ಡೆನ್ಮಾರ್ಕಿಗೆ ಹೋಗುವುದು ಒಳ್ಳೆಯದು. ಆಕೆಗೆ ವಿಶ್ರಾಂತಿ ಆವಶ್ಯಕ. ಆಕೆ ಪಾಠಶಾಲೆಯನ್ನು ಚೆನ್ನಾದ ಸ್ಥಿತಿಯಲ್ಲಿಟ್ಟಿರುವುದು ಬಹಳ ಚೆನ್ನ. ಅದು ಯಶ ಗಳಿಸುವ ವಿಷಯದಲ್ಲಿ ನನಗೆ ಅನುಮಾನವೇ ಇರಲಿಲ್ಲ. ತಾಳ್ಮೆಯೊಂದೇ ಪ್ರಧಾನವಾಗಿ ಬೇಕಾಗಿದ್ದುದು. ಕೃತಕತೆಯ ಅಥವಾ ಸ್ವಾರ್ಥವೇ ಮುಖ್ಯವಾಗಿರುವ ಈ ಕಾಲದಲ್ಲಿ ಯಾವ ಹೊಸ ವಿಷಯವನ್ನೇ ಆಗಲಿ, ಸಾಮಾನ್ಯವಲ್ಲದುದನ್ನೇ ಆಗಲಿ ಜನ ಸಂಶಯದೃಷ್ಟಿಯಿಂದಲೇ ನೋಡುವರು.

ನೀವೆಲ್ಲ ನೂಲುವವರ ಸಂಘಕ್ಕೆ† ಸೇರುತ್ತೀರಿ. ನೀನು ಅದರ ಸಂವಿಧಾನವನ್ನು ಓದಿರುವೆ ತಾನೆ?

ಒಂದು ಅಥವಾ ಎರಡು ತಿಂಗಳ ಹಿಂದೆ ಒಬ್ಬ ಡೇನಿಷ್ ಮಹಿಳೆಯಿಂದ ನನಗೊಂದು ಸೊಗಸಾದ ಪತ್ರ ಬಂದಿದ್ದಿತು. ನಾನು ಡೆನ್ಮಾರ್ಕಿಗೆ ಹೋಗಲು ಖಂಡಿತ ಇಚ್ಛೈಸುತ್ತೇನೆ. ಆದರೆ ಭಾರತದಲ್ಲಿ ಈಗ ಇರುವ ಅಹಿಂಸೆ ಚೆನ್ನಾಗಿ ರೂಢಭದ್ರವಾದ ಹೊರತು ಅದನ್ನು ಬಿಡುವ ಇಚ್ಛೆಯಿಲ್ಲ. ಇದೇ ಸತ್ಯವೆಂದು ನನಗೆ ಅರಿವಿದೆ, ಆದರೆ ನಾನು ಇನ್ನೂ

---

* ಸೋಮವಾರ ಗಾಂಧೀಜೀಯವರ ಉಪವಾಸದ ದಿವಸವಾಗಿತ್ತು.

† ಅಖಿಲ ಭಾರತ ನೂಲುವವರ ಸಂಘ.

ಆದರ ಅತ್ಯಂತ ಹೀನ ಪ್ರತಿನಿಧಿಯಾಗಿರಬಹುದು. ಇದು ನನಗೆ ಗೊತ್ತಿದ್ದರೂ ಸತ್ಯ–ಅಹಿಂಸೆಗಳಿಲ್ಲದೆ ನಾನಂತೂ ಜೀವಿಸಲಾರೆ.

ನೀನು ನನ್ನ ಜೀವನಚರಿತ್ರೆಯನ್ನು ಬರೆಯಬೇಕೆಂಬ ಕಾರ್ಯದಲ್ಲಿ ತೊಡಗಿದರೆ ಆಶ್ರಮದಲ್ಲಿ ಅನೇಕ ತಿಂಗಳುಗಳು ಇರಬೇಕಲ್ಲದೆ ದಕ್ಷಿಣ ಆಫ್ರಿಕಾ, ಚಂಪಾರಣ್ಯ, ಖೇಡಾ, ಬಹುಶಃ ಪಂಜಾಬ್ ಈ ಎಲ್ಲ ಸ್ಥಳಗಳಿಗೂ ಭೇಟಿಕೊಡಬೇಕಾದೀತು. ಅದನ್ನು ಸಮಗ್ರವಾಗಿ ಮಾಡಬೇಕೆಂದರೆ ಬಹಳ ಅಗಾಧ ಕೆಲಸ. ಈ ಸ್ಥಳಗಳಲ್ಲಿಯೇ ನಾನು ಅರಿತುಕೊಂಡ ಅಹಿಂಸೆಯನ್ನು ಕಾರ್ಯರೂಪಕ್ಕೆ ತರಲು ಪ್ರಯತ್ನಪಟ್ಟೆ.

ಎಲ್ಲರಿಗೂ ಪ್ರೇಮ, ಮಗುವಿಗೆ ಮುತ್ತುಗಳು.†

ನಿನ್ನ,

೫–೧೦–೧೯೨೫ **ಬಾಪೂ**

## ಸ್ನೇಹ

ಆಶ್ರಮ, ಸಾಬರಮತಿ

ನನ್ನ ಪ್ರಿಯ ಮಗು, ೧೦–೨–೧೯೨೬

ನಿನ್ನ ಪತ್ರ ಮತ್ತು ಭಾಂಗಿ ಬಂದು ತಲಪಿದವು. ಭಾಂಗಿಯಲ್ಲಿ ಇರುವ ಸೀಸೆಯ ಮೇಲೆ ಅದರಲ್ಲಿರುವ ಚೂರ್ಣ ಮಲೇರಿಯಾಕ್ಕೆ ಎಂಬ ಸೂಚನೆಯನ್ನು ಬಿಟ್ಟರೆ ಬೇರೆ ಏನೂ ಇಲ್ಲ. ಸದ್ಯಕ್ಕಂತೂ ನಾನು ಮಲೇರಿಯಾದಿಂದ ಮುಕ್ತನಾಗಿದೇನೆ. ಒಂದುವೇಳೆ ಅದು ಮರುಕಳಿಸಿದರೆ ಆಗಲೂ ನಾನು ಅದನ್ನು ಉಪಯೋಗಿಸಲು ಸಾಧ್ಯವಿಲ್ಲ; ಏಕೆಂದರೆ, ೨೪ ಘಂಟೆಗಳ ಕಾಲದಲ್ಲಿ ಆಹಾರವಾಗಲಿ, ಔಷಧವಾಗಲಿ, ಎಲ್ಲ ಸೇರಿ ಐದು ವಸ್ತುಗಳನ್ನು ನಾನು ತೆಗೆದುಕೊಳ್ಳುತ್ತಿರುವ ನಿಯಮ ನಿನಗೆ ಗೊತ್ತೇ ಇದೆ. ಆ ಆಯುರ್ವೇದದ ಔಷಧಗಳಲ್ಲಿ ಹತ್ತಾರು ವಸ್ತುಗಳು ಸೇರಿರುತ್ತವೆ. ಆದುದರಿಂದ ಅವು ಎಷ್ಟೇ ಉಪಯುಕ್ತವಾದರೂ ನನ್ನ ಭಾಗಕ್ಕೆ ಪ್ರಯೋಜನಕಾರಿಯಲ್ಲ. ಆದರೆ ಇಲ್ಲಿ ಅನೇಕರಿಗೆ ಮಲೇರಿಯಾ ಬರುತ್ತಿದೆ. ನೀನು ಸೂಚನೆಗಳನ್ನು ಕೊಡುವುದಾದರೆ ಈ ಔಷಧವನ್ನು

---

† ಈ ವೇಳೆಗೆ ಎಸ್ತರ್ ಒಂದು ಮಗುವಿನ ತಾಯಿಯಾಗಿದ್ದಳು,

ಇಲ್ಲಿ ಸಂತೋಷದಿಂದ ಪ್ರಯೋಗ ಮಾಡುವೆನು. ಆದುದರಿಂದ ಅವು ಗಳನ್ನು ನನಗೆ ತಿಳಿಸು, ಹಾಗೆಯೇ ಯಾವ ಯಾವ ವಸ್ತುಗಳನ್ನು ಸೇರಿಸಿ ತಯಾರಿಸಲಾಗಿವೆ ಎಂಬುದು ನಿನಗೆ ಗೊತ್ತಿದ್ದರೆ ನನಗೂ ತಿಳಿಸಬಹುದು.

ಈಗ ಸ್ನೇಹದ ವಿಷಯ. 'ಸ್ನೇಹಿತ' ಎಂಬ ಶಬ್ದವನ್ನು ನೀನು ಮೂರು ಬೇರೆ ಬೇರೆ ಅರ್ಥಗಳಲ್ಲಿ ಉಪಯೋಗಿಸಿದೀಯೆ. ನಮಗೆಲ್ಲ ಶಕ್ತಿಯಿದ್ದರೆ ನಾವೂ ಜೀಸಸನಂಥ ಸ್ನೇಹಿತರಾಗಬಹುದು. ಅಲ್ಲಿ 'ಸ್ನೇಹಿತ' ಎಂಬುದರ ಅರ್ಥ 'ದಯಾಭರಿತ ಸಹಾಯಕ' ಎಂದು. ನಮಗೂ ನಮಗಿಂತ ಹಿರಿಯರಿಗೂ ಇರಬಹುದಾದ ಸ್ನೇಹವೂ ಏಕದೇಶೀಯ ವಾದುದು. ಒಬ್ಬ ತಂದೆ ತನ್ನ ಮಕ್ಕಳಿಗೆ ಸ್ನೇಹಿತನಾಗಿದಾನೆ, ಇರಲೂ ಬೇಕು. ಆ ಸಂದರ್ಭದಲ್ಲಿ ಅದು ಒಳ್ಳೆಯದರ ಸಹವಾಸವೆನಿಸುತ್ತದೆ; ಅದಕ್ಕೆ ಸಂಸ್ಕೃತದಲ್ಲಿ ಸತ್ಸಂಗವೆಂದು ಹೆಸರು. ನಾನು ಬರೆದಿರುವುದೆಲ್ಲ ಇಷ್ಟು. ಇಬ್ಬರು ಅಥವಾ ಹೆಚ್ಚಿಗೆ ಜನಕ್ಕೆ ಇರುವ ಗಾಢಸಂಪರ್ಕವದು; ಅದರಲ್ಲಿ ಗೋಪ್ಯತೆ ಎನ್ನುವುದಿಲ್ಲ; ಪರಸ್ಪರ ನೆರವು ಆ ಸ್ನೇಹದ ಪರಿಣಾಮವೇ ಹೊರತು ಅದರ ಉದ್ದೇಶವಲ್ಲ. ಆ ಉದ್ದೇಶ ಯಾವುದೋ ಒಂದು ಅವರ್ಣನೀಯ ಆಕರ್ಷಣೆ. ಈ ವಿವಿಕ್ತ ಸಂಬಂಧವನ್ನೇ ನಾನು ಅನಪೇಕ್ಷಣೀಯ ಮತ್ತು ದೈವವಿರೋಧೀಭಾವವೆಂದು ಪರಿಗಣಿಸಿರುವುದು. ನನ್ನ ಆತ್ಮಕಥೆಯಲ್ಲಿ ಇಂಥ ಸ್ನೇಹದ ಪ್ರಸಂಗವೊಂದನ್ನು ವಿವರಿಸಿದೇನೆ.*

ನೂಲುವುದರಲ್ಲಿ ನಿನಗೆ ಸ್ವಾಭಾವಿಕವಾದ ಆಸಕ್ತಿಯಿಲ್ಲವೆ? ನೀನು ನೂಲುವುದೇ ಆದರೆ, ನಿನಗೆ ಅದರಲ್ಲಿ ಆಸಕ್ತಿಯಿರುವುದರಿಂದ ನೂಲುವೆ ಯೆಂದು ನಾನು ನಿರೀಕ್ಷಿಸುತ್ತೇನೆ. ನಿನಗೆ ಆಸಕ್ತಿ ಇದ್ದರೆ ಯಂತ್ರದ ವಿಷಯವನ್ನೆಲ್ಲ ಚೆನ್ನಾಗಿ ತಿಳಿದುಕೊಂಡು ನಿನ್ನ ಸಾಧನವನ್ನು ಒಳ್ಳೆ ಚೆನ್ನಾದ ಸ್ಥಿತಿಯಲ್ಲಿ ಇಟ್ಟಿರುತ್ತೀಯೆ, ಅಡಿಗೆ ಮಾಡುವುದರಲ್ಲಿ ನಿನಗೆ ಆಸಕ್ತಿಯಿದ್ದರೆ ಒಲೆಯನ್ನು ಚೆನ್ನಾಗಿ ಇಟ್ಟಿರುವಂತೆ.

ನನಗಂತೂ ನೂಲುವುದೆಂದರೆ ದೇಶದ ಅತ್ಯಂತ ದರಿದ್ರರಿಗೂ ನನಗೂ ಸ್ನೇಹಸಂಬಂಧವನ್ನು ಕಲ್ಪಿಸುವ ಒಂದು ಸಂಕೇತ. ದಿನವೂ

* ಆತ್ಮಕಥೆ, ಭಾಗ ೨, ಅಧ್ಯಾಯ ೨೩ — 'ಗೃಹಸ್ಥನಾಗಿ' ಎಂಬುದರಲ್ಲಿ ಈ ಬಗೆಯ ಸ್ನೇಹದ ಒಂದು ಪ್ರಸಂಗ ಉಲ್ಲೇಖವಾಗಿದೆ.

ನೂಲುವಾಗ ಈ ಸಂಬಂಧ ಬೆಳೆಯುತ್ತದೆ. ಈ ರೀತಿ ಅದು ನನಗೆ ಸದಾ ಆನಂದವನ್ನೂ ಸೊಗಸನ್ನೂ ನೀಡುತ್ತದೆ. ನಾನು ಊಟವನ್ನಾದರೂ ಬಿಟ್ಟೇನು, ನೂಲುವುದನ್ನು ಮಾತ್ರ ಬಿಡಲಾರೆ. ನೀನು ನೂಲುವುದರ ಈ ಅಂತರಾರ್ಥವನ್ನು ತಿಳಿದುಕೊಳ್ಳಬೇಕೆಂದು ನನ್ನ ಆಶಯ. ನೀನು ನೂಲುವುದೇ ಆದರೆ, ನಾನು ಸಲಹೆ ಮಾಡುವೆನೆಂದೋ, ಕಾಂಗ್ರೆಸ್ ಸಲಹೆ ಮಾಡುವುದೆಂದೋ, ಅದರಲ್ಲಿ ಆರ್ಥಿಕ ಅನುಕೂಲವಿರುವುದೆಂದೋ ನೂಲುವೆಯೆಂದು ನಾನು ನಿರೀಕ್ಷಿಸುವುದಿಲ್ಲ.

ದಿನದಿನಕ್ಕೆ ನನಗೆ ಸ್ವಲ್ಪ ಸ್ವಲ್ಪ ಶಕ್ತಿ ಕೂಡುತ್ತಿದೆ.

ನಿಮಗೆಲ್ಲ ಪ್ರೇಮ.

ನಿನ್ನ,
**ಬಾಪೂ**

## ಹೊಸದಾಗಿ ಹುಟ್ಟಿದ ಮಗುವಿಗೆ ಆಶೀರ್ವಾದ

(ಎಸ್ತರ್ ಎರಡನೆಯ ಮಗುವನ್ನು ಹಡೆದ ಸಂದರ್ಭದಲ್ಲಿ ಬರೆದ ಪತ್ರವಿದು :)

ನನ್ನ ಪ್ರಿಯ ಮಗು,

ನಿಮ್ಮ ಕುಟುಂಬದಲ್ಲಿ ಹೊಸದಾಗಿ ಹುಟ್ಟಿದ ಮಗುವಿಗೆ ಆಶೀರ್ವಾದ. ನೀನೂ ಮಗು ಇಬ್ಬರೂ ನಿಧಾನವಾಗಿ ಉತ್ತಮವಾಗುತ್ತಿದೀರಿ ಎಂದು ನಂಬಿದೇನೆ. ನೀನು ಸೂಚಿಸಿರುವ ಎಲ್ಲ ಹೆಸರುಗಳೂ ಚೆನ್ನಾಗಿವೆ. ಅದು ಸಣ್ಣದಾದಷ್ಟೂ ಉತ್ತಮ.

ನಿನ್ನ,
**ಬಾಪೂ**

## ಮಗುವಿಗೆ ಖಾದೀ

ಆಶ್ರಮ, ಸಾಬರಮತಿ
೩೦–೪–೧೯೨೭

ನನ್ನ ಪ್ರಿಯ ಮಗು,

ನಿನ್ನ ಪತ್ರ. ನಿನ್ನ ಆರೋಗ್ಯದ ಬಗೆಗೆ ನನಗೆ ಆತಂಕ. ನೀನು ಹಿಂದಿನಂತೆ ಲವಲವಿಕೆಯನ್ನೂ ಶಕ್ತಿಯನ್ನೂ ಗಳಿಸಿಕೊಳ್ಳಬೇಕು.

ಮಿಸ್ ಪೀಟರ್ಸನ್ ಅವರ ಶಾಲೆಯ ಬಗೆಗೆ ಅವ್ಯವಸ್ಥೆ ಕೇಳಿ ದುಃಖವಾಯಿತು. ನೀನು ನಮೂದಿಸಿರುವ ಹುಡುಗಿಯರಿಂದ ನೂಲು ಇನ್ನೂ ನನಗೆ ತಲಪಿಲ್ಲ. ಉಪಯೋಗಿಸಿದ ಮೃದುವಾದ ಎಷ್ಟು ಖಾದೀ ಚಿಂದಿಯನ್ನು ಬೇಕಾದರೂ ನೀನು ಹೊಂದಬಹುದು. ನಿನಗೆ ಎಷ್ಟು ಉದ್ದದ ಬಟ್ಟೆ ಬೇಕೆಂದು ತಿಳಿಸಿದರೆ ಅದನ್ನು ಕಳಿಸಿಕೊಡುತ್ತೇನೆ. ಉಪಯೋಗಿಸಿದ ಖಾದೀಗೆ ಬೆಲೆಯನ್ನು ನಿಗದಿ ಮಾಡುವುದು ಕಷ್ಟ. ಆದುದರಿಂದ ನಿನಗೆ ಏನನ್ನು ಕಳಿಸಲು ಸಾಧ್ಯವೋ ಅಷ್ಟನ್ನು ಕಳಿಸು, ಇಲ್ಲವಾದರೆ ಏನೂ ಬೇಡ. ನೀನು ಇದಕ್ಕೆ ಏನನ್ನಾದರೂ ಹಣ ಕೊಡ ಬೇಕಾಗುತ್ತದೆಂಬ ಕಾರಣದಿಂದ ಹಿಂದೆಗೆಯಬೇಡ ಅಥವಾ ನಿನಗೆ ಆವಶ್ಯಕ ಇದ್ದಷ್ಟನ್ನು ಕೇಳಲು ಸಂಶಯಪಡಬೇಡ.

ನಿನ್ನ,

**ಬಾಪೂ**

## ಆಶ್ರಮಗಳೂ ಉಪವಾಸವೂ

ಆಶ್ರಮ, ಸಾಬರಮತಿ

೨೦–೮–೧೯೨೭

ನನ್ನ ಪ್ರಿಯ ಮಗು,

ನಿನ್ನ ಪತ್ರ ತಲಪಿದೆ....

'ಆಶ್ರಮ' ಎಂಬುದರ ಶಬ್ದಾರ್ಥ ಒಂದು ವಾಸಸ್ಥಳ ಎಂದು. ಆದರೆ ಅದರಲ್ಲಿ ಈ ಅಂಶಗಳಿರಬೇಕು: ಅದು ಸರಳವಾಗಿ ಇರಬೇಕು. ಅದು ಕೇವಲ ಶಿಕ್ಷಣಸಂಸ್ಥೆಯಾಗಿರಬಾರದು. ನಿರಂತರ ಇಂದ್ರಿಯನಿಗ್ರಹ ಮಾಡಲು ಪ್ರತಿಜ್ಞೆ ಮಾಡಿದವರು ಅದರಲ್ಲಿ ಪ್ರಧಾನವಾಗಿ ಇರಬೇಕು. ಅದು ಸಂನ್ಯಾಸಪರ ಎಂದರೆ, ಜಗತ್ತಿನ ಬಗೆಗೆ ವಿರಕ್ತಭಾವಪರವಾಗಿರ ಬೇಕು. ಆದುದರಿಂದ ಅದು ಇಚ್ಛಾಪೂರ್ವಕವಾಗಿಯೇ ಬಡತನದ ಸಂಸ್ಥೆ ಆಗಿರಬೇಕು; ಕಟ್ಟುನಿಟ್ಟಾದ ಸರಳತೆ ಇರಬೇಕು ಅದರಲ್ಲಿ. ಆತ್ಮಸಾಕ್ಷಾ ತ್ಕಾರದ ದೃಷ್ಟಿಯಿಂದ ಶೀಲವೃದ್ಧಿಗೆ ಅದು ಪ್ರಧಾನ ಗಮನ ಕೊಡಬೇಕು. ಆಶ್ರಮದಲ್ಲಿ ವಾಸಿಸುವ ಎಲ್ಲ ಸ್ತ್ರೀಪುರುಷರೂ ದೈಹಿಕಶ್ರಮ ಮಾಡಬೇಕು;

ಎಲ್ಲರಿಗೂ ಸಮಾನ ಸ್ಥಾನಮಾನ. ಯಾರಿಗಾದರೂ ಮೇಲುಸ್ಥಾನ ಎಂಬ ಭಾವಕ್ಕೆ ಎಡೆಯೇ ಇಲ್ಲ ಅಲ್ಲಿ. ಆಶ್ರಮದ ಮುಖ್ಯಸ್ಥ ಎಲ್ಲರಿಗೂ ರಕ್ಷಕ ನಂತಿರಬೇಕು, ಎಲ್ಲರನ್ನೂ ತನ್ನ ಮಕ್ಕಳೆಂದು ಭಾವಿಸಬೇಕು. ಇಷ್ಟರಿಂದ ಆಶ್ರಮದಲ್ಲಿರಬೇಕಾದ ಗುಣಗಳನ್ನು ನಾನು ನಿನಗೆ ಸಾಕಷ್ಟು ಚಿತ್ರಿಸಿರು ವೆನೋ ಹೇಗೋ.

* * * *

ಉಪವಾಸದ ವಿಷಯದಲ್ಲಿ ನೀನು ಹೇಳಿರುವುದು ಪೂರ್ಣ ನಿಜ. ಅದೇ ಒಂದು ಪರಮಪುರುಷಾರ್ಥವಲ್ಲ. ಅದರ ಹಿಂದೆ ನಿಜವಾದ ಆಧ್ಯಾತ್ಮಭಾವ ಇರದಿದ್ದರೆ ಅದರಿಂದ ಸ್ವಲ್ಪವೂ ಆತ್ಮೋನ್ನತಿಯಾಗ ಲಾರದು. ಮಿಶ್ರಭಾವಗಳಿಂದ ಕೂಡಿದ ಉಪವಾಸವು ಬರೀ ಲೌಕಿಕ ಪರಿಣಾಮಗಳಲ್ಲಿ ಪರ್ಯವಸಾನಗೊಳ್ಳುತ್ತದೆ. ವ್ಯಕ್ತಿಯ ಜೀವನವಿಕಾಸದ ಒಂದಲ್ಲ ಒಂದು ಹಂತದಲ್ಲಿ ಆತ್ಮೋತ್ಕರ್ಷಕ್ಕಾಗಿ ಉಪವಾಸವನ್ನು ಒಂದು ನಿಯಮದಂತೆ ಅಗತ್ಯವಾಗಿ ಕೈಗೊಳ್ಳಬೇಕೆಂಬುದು ನನ್ನ ಅಭಿಪ್ರಾಯ. ಪ್ರಾಟೆಸ್ಟೆಂಟ್ ಪಂಥವು* ಈ ವಿಷಯದಲ್ಲಿ ಕೊರತೆಯಿಂದ ಕೂಡಿದು ದೆಂದು ಯಾವಾಗಲೂ ನಾನು ಭಾವಿಸಿದೇನೆ. ಪ್ರಾಮುಖ್ಯತೆಯುಳ್ಳ ಪ್ರತಿಯೊಂದು ಮತಪಂಥವೂ ಉಪವಾಸದ ಆಧ್ಯಾತ್ಮಿಕ ಮೌಲ್ಯವನ್ನು ಪರಿಗಣಿಸುತ್ತದೆ. ಇಚ್ಛಾಪೂರ್ವಕವಾಗಿ ಉಪವಾಸದ ಕ್ಲೇಶವನ್ನು ಸಹಿಸಿದ ಹೊರತೂ ದೇಹದಂಡನೆ ಎಂಬುದು ಅರ್ಥವಿಲ್ಲದ ಮಾತು. ಹಾಗೆಯೇ ಹಸಿವಿನಿಂದ ನರಳುವ ಬಡವರೊಂದಿಗೆ ಆ ಬಗೆಯ ಅನುಭವವಿಲ್ಲವಾದರೆ, ಅವರ ಜೀವನದಲ್ಲಿ ಸಮಭಾಗಿಗಳಾಗುವುದೆಂಬುದೂ ಅರ್ಥವಿಲ್ಲದ ಮಾತು. ಎಂಬತ್ತು ದಿವಸ ಉಪವಾಸಮಾಡಿದರೂ ಅಹಂಭಾವ, ಸ್ವಾರ್ಥ, ದುರಾಶೆ ಇತ್ಯಾದಿಗಳು ನಾಶವಾಗಲಾರವೆಂಬುದನ್ನೂ ನಾನು ಪೂರ್ಣವಾಗಿ ಒಪ್ಪು ತ್ತೇನೆ. ಉಪವಾಸ ಕೇವಲ ಒಂದು ಸಾಧನ ಮಾತ್ರ. ಅಲ್ಲಾಡಿ ಕೆಳಗೆ

* ಕ್ರೈಸ್ತಮತದಲ್ಲಿ ಒಂದು ಪ್ರಧಾನ ಪಂಗಡ ; ರೋಮನ್ ಕ್ಯಾಥೊಲಿಕ್ ಪಂಥಕ್ಕೆ ವಿರುದ್ಧವಾದುದು.

ಬೀಳುವುದರಲ್ಲಿರುವ ಕಟ್ಟಡವೊಂದಕ್ಕೆ ಊರೆಗೋಲು ಒಂದು ಸಾಧನವಾಗುವಂತೆ ಉಪವಾಸವೂ ಕ್ಲೇಶಪಡುತ್ತಿರುವ ಜೀವವೊಂದಕ್ಕೆ ಅದು ಸಾಧನವಾಗುತ್ತದೆ.

ಪ್ರೀತಿ,

ನಿನ್ನ,

ಬಾಪೂ

## ಜೀಸಸನ ವೈಶಿಷ್ಟ್ಯ

ಆಶ್ರಮ, ಸಾಬರಮತಿ

೧೭–೯–೧೯೨೬

ನನ್ನ ಪ್ರಿಯ ಮಗು,

ನೀನು ನಿನ್ನ ಪತ್ರದಲ್ಲಿ ತಿಳಿಸುವ ರೋಮನ್ ಕ್ಯಾಥೊಲಿಕರ ಉಪವಾಸವು ಉಪವಾಸವೇ ಅಲ್ಲ, ಆದರೂ ಅವರಲ್ಲಿಯೂ ನಿಜ ಉಪವಾಸವೆನ್ನುವುದು ಇದೆ ಅಥವಾ ಇತ್ತು ಎನ್ನಬಹುದು. ಅದು ಹೇಗೇ ಇರಲಿ, ಅವರಲ್ಲಿ ಅಂಥದು ಇದೆ ಅಥವಾ ಇಲ್ಲ ಎನ್ನುವುದು ನಮಗೆ ಮುಖ್ಯವಲ್ಲ. ಉಪವಾಸವೇ ಆಗಲಿ, ಅಷ್ಟೇಕೆ ಯಾವುದೇ ಆದರೂ, ಅದು ಹೊರಗಿನಿಂದ ಹೇರಲ್ಪಟ್ಟರೆ ಅದರಿಂದ ಏನೂ ಪ್ರಯೋಜನವಾಗಲಾರದು. ಕ್ರಿಸ್ತನ ಪ್ರಶ್ನೆ ಬಂದಾಗ ನೀನು ಕ್ಷಮೆ ಬೇಡಬೇಕಾಗಿರಲಿಲ್ಲ. ಹೊಸ ಒಡಂಬಡಿಕೆಯಲ್ಲಿ ಜೀಸಸನದೆಂದೇ ಹೇಳಲಾಗಿರುವ ಪ್ರತಿಯೊಂದು ಮಾತನ್ನೂ ನಾನು ಅತ್ಯಂತ ಎಚ್ಚರಿಕೆಯಿಂದ ಓದಿದ್ದರೂ, ಅತ್ಯಂತ ನಮ್ರತೆಯಿಂದ ಭಾವಿಸಿದ್ದರೂ ನಾನು ಅರ್ಥಮಾಡಿಕೊಳ್ಳಬಹುದಾದ, ವಿವರಿಸಬಹುದಾದ, ಮೆಚ್ಚಬಹುದಾದ ಇತರ ಬೋಧಕರ ಮಾತಿಗೂ ಜೀಸಸನ ಮಾತಿಗೂ ನನಗೆ ಯಾವ ವ್ಯತ್ಯಾಸವೂ ಕಂಡುಬರುವುದಿಲ್ಲ. ಬಾಲ್ಯದಿಂದಲೂ ಜೀಸಸನ ಬೋಧೆಯನ್ನೇ ನೀನು ಗ್ರಹಿಸಿದೀಯೆ; ಆದುದರಿಂದ ಎಲ್ಲವನ್ನೂ, ನಿನಗೆ ಅರಿವಿಲ್ಲದಂತೆ ಆ ಅಭಿಪ್ರಾಯದಿಂದಲೇ ಓದುತ್ತೀಯೆ. ನನಗಂತೂ ಬಾಲ್ಯದಲ್ಲಿ ವ್ಯತ್ಯಾಸ ಮಾಡುವುದನ್ನು ಯಾರೂ ಕಲಿಸಲಿಲ್ಲ. ಆದುದರಿಂದ ಯಾವ ಬಗೆಯ ಪೂರ್ವನಿಶ್ಚಿತವೂ ಇಲ್ಲದೆ ನಾನು ಬೆಳೆದಿದೇನೆ. ನಾನು ಹೆಸರಿಸಬಹುದಾದ ಎಲ್ಲ ಬೋಧಕರಿಗೂ,

ಜೀಸಸ್, ಮೊಹಮ್ಮದ್, ಕೃಷ್ಣ, ಬುದ್ಧ, ಝೊರೋವಾಸ್ತರ್ ಇವರೆಲ್ಲರಿಗೂ ಸಮನಾದ ಗೌರವವನ್ನು ನೀಡುತ್ತೇನೆ. ಆದರೆ ಇದೆಲ್ಲ ವಾದದ ವಿಚಾರವಲ್ಲ. ಅವರವರ ಗಾಢವೂ ಪವಿತ್ರವೂ ಆದ ಅಭಿಪ್ರಾಯದ ವಿಚಾರ. ನೀನು ಜೀಸಸನಿಗೆ ನೀಡುತ್ತಿರುವ ವಿಶಿಷ್ಟ ಗೌರವವನ್ನು ನಿನ್ನ ಮನಸ್ಸಿನಿಂದ ತೆಗೆದುಹಾಕಬೇಕೆನ್ನುವುದು ನನ್ನ ಉದ್ದೇಶವಲ್ಲ. ಆದರೆ ಇವುಗಳ ಬಗೆಗೆ ಇರುವ ಸಮಗ್ರಭಾವನೆಯನ್ನೂ ನೀನು ಅರಿತು ಮೆಚ್ಚಬೇಕೆಂಬುದು ನನ್ನ ಆಶಯ.

ನಿನ್ನ,

**ಬಾಪೂ**

## ಗೊಂದಲಗಳ ನಡುವೆ

ನನ್ನ ಪ್ರಿಯ ಮಗು,

ನಿನ್ನ ದುಃಖಭರಿತ ಪತ್ರ. ಇಷ್ಟು ದಿವಸಗಳಿಂದ ನಿನ್ನಿಂದ ಏಕೆ ಪತ್ರಗಳಿಲ್ಲವೋ ಎಂದು ಚಿಂತಿಸುತ್ತಿದ್ದೆ. ಈಗ ಅರ್ಥವಾಯಿತು. ನೀನು ಇಂಥ ದುಃಖಭರಿತ ಸ್ಥಿತಿಯಲ್ಲಿರುವುದನ್ನು ಕೇಳಿ ನನಗೂ ದುಃಖವಾಗಿದೆ. ಬಹಳ ಗೊಂದಲಗಳ ನಡುವೆ ಈ ಪತ್ರ ಬರೆಯುತ್ತಿದೇನೆ. ನನಗೆ ಒಂದು ನಿಮಿಷವೂ ವಿರಾಮವಿಲ್ಲ. ಆದುದರಿಂದ ನನ್ನ ಪ್ರೇಮ ಮತ್ತು ಪ್ರಾರ್ಥನಾಭರಿತ ಆಶೀರ್ವಾದಗಳನ್ನು ನಿನಗೆ ಕಳಿಸುತ್ತೇನೆ. ಏಪ್ರಿಲ್ ತಿಂಗಳಲ್ಲಿ ದಕ್ಷಿಣ ಭಾರತಕ್ಕೆ ಬರುತ್ತೇನೆ. ಆ ಪ್ರವಾಸದ ಕಾಲದಲ್ಲಿ ನಾನು ನಿನ್ನನ್ನು ಸಂಧಿಸಲೇಬೇಕು.

ನಿಮಗೆಲ್ಲ ಪ್ರೀತಿ.

ನಿನ್ನ,

**ಬಾಪೂ**

(ಈ ಕೆಳಗಿನ ಪತ್ರ ಮತ್ತು ಮುಂದಿನ ಪತ್ರಗಳನ್ನು ಗಾಂಧೀಜೀ ಯರವಡಾ ಸೆರೆಮನೆಯಿಂದ ಬರೆದರು. ಅವರು ೧೯೩೨ರಲ್ಲಿ ಇಂಗ್ಲೆಂಡಿನಲ್ಲಿ ನಡೆದ ಚಕ್ರಗೋಷ್ಠಿಗೆ ಹೋಗಿದ್ದು ಅಲ್ಲಿಂದ ಭಾರತಕ್ಕೆ ಹಿಂತಿರುಗಿದ ಕೂಡಲೇ ಬಂಧಿತರಾಗಿ ಸೆರೆಮನೆ ಸೇರಬೇಕಾಯಿತು. ಆ ಕಾಲದಲ್ಲಿ ಮೆನನ್ ಕುಟುಂಬದವರು ಬರ್ಮಿಂಗ್‌ಹ್ಯಾಮಿನ 'ಸೆಲ್ಲಿ ಓಕ್' ಎಂಬಲ್ಲಿ ಇದ್ದರು.)

## ಅಂತರಂಗಶಾಂತಿಯನ್ನು ಹೊಂದು.

ನನ್ನ ಪ್ರಿಯ ಮಗು,

ಕಾಯಿಲೆಯಿಂದ* ಕೂಡಿರುವ ಭಗಿನಿಯನ್ನು ನೀನು ಭೇಟಿಯಾಗಿ ಬರೆದಿರುವ ಪತ್ರ ಹೃದಯಸ್ಪರ್ಶಿಯಾಗಿದೆ.

ನೀನು ಈಗ ಅಂತರಂಗಶಾಂತಿಯನ್ನು ಹೊಂದಿದೀಯೆಂದು ನಂಬಿದೇನೆ. ಮಕ್ಕಳು ಚೆನ್ನಾಗಿರಬೇಕು. ಅವು ನನ್ನಿಂದ ಮುತ್ತನ್ನು ಸ್ವೀಕರಿಸುವಂತಿದ್ದರೆ ನನಗಾಗಿ ನೀನೇ ಮುತ್ತು ಕೊಡು.

ಯ. ಕೇಂ. ಸೆ.§ ಪ್ರೀತಿ,
೨೧–೧–೧೯೩೨ **ಬಾಪೂ**

## ನೀಡಬೇಕಾದುದು ಪ್ರೇಮಧರ್ಮ

ನನ್ನ ಪ್ರಿಯ ಮಗು,

ಪುನಃ ನಿನ್ನ ಕಾಗದ ಬಂದುದರಿಂದ ನನಗೆ ಹರ್ಷವಾಯಿತು; ಹಾಗೂ ನ್ಯಾನ್† ಅನಿರೀಕ್ಷಿತವಾಗಿ ಬರೆದು ಕಳಿಸಿರುವ ಗೀಚುಪತ್ರವೂ ಹರ್ಷ ತಂದಿತು.

ನಿನ್ನ ಕುಟುಂಬ ವಿಶ್ವಕುಟುಂಬವಾಗಿರುವಂತೆ° ಕಂಡುಬರುತ್ತದೆ. ನಿನ್ನ ಆರೋಗ್ಯಕ್ಕೆ ಮೀರಿದ ಕೆಲಸವನ್ನು ಇದು ನಿನಗೆ ಕೊಡುವುದಿಲ್ಲ ಎಂದು ನಂಬಿದೇನೆ.

---

* ಒಬ್ಬ ಬಡ ಆಂಗ್ಲ ಹುಡುಗಿ ಗಾಂಧೀಜೀಯನ್ನು ಬಹಳ ಮೆಚ್ಚಿಕೊಂಡಿದ್ದಳು. ಅವಳು ಕಾಯಿಲೆಯಿಂದ ಹಾಸಿಗೆ ಹಿಡಿದಿದ್ದಳು.

§ ಯರವಡಾ ಕೇಂದ್ರ ಸೆರೆಮನೆ.

† ಎಸ್ತರ್ ಮೆನನ್‌ಳ ಮೊದಲನೆಯ ಮಗು.

° ಸೆಲ್ಲಿ ಓಕ್‌ನಲ್ಲಿದ್ದ ಮೆನನ್ ಕುಟುಂಬ ಯಾವಾಗಲೂ ಒಂದು ಅಂತರರಾಷ್ಟ್ರೀಯ ಕೇಂದ್ರದಂತಿತ್ತು.

ಗೀತೆಯ ಬೋಧೆಯೂ ಬೇರೆ ಏನಲ್ಲ. ನಮ್ಮ ಎಲ್ಲ ಕರ್ಮಗಳೂ ಸಹಜವಾಗಿಯೂ, ತಾವಾಗಿಯೇ ಬಂದವಾಗಿಯೂ ಮತ್ತು ನಮಗೆ ಅರಿವಿಲ್ಲದಂತೆಯೂ ಇರಬೇಕೆಂಬುದೇ ಅದರ ಬೋಧೆ. ಅವು ಆ ರೀತಿ ಇದ್ದರೆ ಪ್ರತಿಫಲ ಅಥವಾ ಪರಿಣಾಮದ ಯೋಚನೆಯೇ ಬರದು. ಆದುದರಿಂದ ನೈಜಪ್ರೇಮದಲ್ಲಿ ಕೊಡುವುದು – ತೆಗೆದುಕೊಳ್ಳುವುದು ಎಂಬುದೇನೂ ಇಲ್ಲ. ಇದನ್ನು ಬೇರೆ ಮಾತಿನಲ್ಲಿ ಹೇಳುವುದಾದರೆ ತೆಗೆದುಕೊಳ್ಳದೆ ಕೊಡುವುದೆನ್ನುವುದು ಯಾವುದೂ ಇಲ್ಲ, ಈ ಪ್ರಪಂಚದಲ್ಲಿ. ನೀಡಲೇಬೇಕಾದುದು ಪ್ರೇಮಧರ್ಮ; ಅದೇ ಅದರ ಸ್ವಭಾವ. ಆದುದರಿಂದ ಲಾಭವೇನಾಯಿತೆಂಬುದನ್ನು ಕುರಿತು ಅದು ಚಿಂತಿಸುವುದೇ ಇಲ್ಲ. ಕೊಡುವುದು, ಹಾಗೆಯೇ ತೆಗೆದುಕೊಳ್ಳುವುದು ಎರಡೂ ಅದಕ್ಕೆ ಅರಿವೇ ಇರುವುದಿಲ್ಲ. ಪ್ರೇಮಕ್ಕೆ ಅದೇ ಪ್ರತಿಫಲ. ಆ ಅವರ್ಣನೀಯ ಪ್ರೇಮವೊಂದಿದ್ದರೆ ಬಾಹ್ಯ ಸನ್ನಿವೇಶದಿಂದ ದೊರಕಬಹುದಾದ ಆನಂದವೆಲ್ಲವನ್ನೂ ಮೀರಿಸುವ ಆನಂದ ನಮ್ಮಲ್ಲಿರುತ್ತದೆ. ಆ ಆನಂದವನ್ನೇ ನೀನು ಹೊಂದಬೇಕೆಂಬುದು ನನ್ನ ಆಸೆ. ಒಂದು ಕಾಲದಲ್ಲಿ ನೀನೂ ನಾನೂ ಅದನ್ನು ಹೊಂದಿದ್ದೆವೆಂದು ಭಾವಿಸಿದ್ದೆವು. ಆಗ ನೀನು ಕ್ಲೇಶದ ಅಗ್ನಿಪರೀಕ್ಷೆಗೆ ಗುರಿಯಾಗಿರಲಿಲ್ಲ. ಒಂದಲ್ಲ ಒಂದು ದಿನ ನಿನಗೆ ಖಂಡಿತವಾಗಿ ಲಭಿಸುವ ಆ ಆನಂದ ಆ ಅಗ್ನಿಪರೀಕ್ಷೆಯ ಪಾವನಮಯ ಸಂಪತ್ತಿನಿಂದಲೇ ಲಭಿಸುತ್ತದೆ. ನಿನಗೆ ಅರಿವಿಲ್ಲದಂತೆಯೇ ಅದು ಬರುತ್ತದೆ. ಅದು ಜಾಗ್ರತೆ ಬರಲೆಂದು ಹಾರೈಸುವೆ.

ನಾನು ಆರೋಗ್ಯವಾಗಿದೇನೆ.

ಯು. ಕೇಂ. ಸೆ. ಪ್ರೀತಿ,
೨೮–೨–೧೯೩೨ ಬಾಪೂ

## ದೇವರು ಎಂದಿಗೂ ಕೈಬಿಡುವುದಿಲ್ಲ.

ನನ್ನ ಪ್ರಿಯ ಮಗು,

ನಿನ್ನಿಂದ ಪತ್ರ ಬಂದಾಗಲೆಲ್ಲ ನನಗೆ ಆನಂದವಾಗುತ್ತದೆ. ನಿನ್ನ ಪತ್ರ ಆಸಕ್ತಿಜನಕವಾಗಿಯೂ ಅಭಿವ್ಯಕ್ತಪೂರಕವಾಗಿಯೂ ಇದೆ. ನೀನು

ಇನ್ನೂ ಅಲ್ಪಸ್ವಲ್ಪ ಸಿಟ್ಟಿನಿಂದ ಕೂಡಿದೀಯೆ. ನೀನು ಅದನ್ನು ಜಯಿಸ ಬೇಕು. ನಮಗೆ ದೇವರಲ್ಲಿ ನಂಬಿಕೆ ಇರುವುದಾದರೆ ನಂಬಿಕೆಗೆ ಅರ್ಹನಾದ ದ್ವಾರಪಾಲಕನೋ ರಕ್ಷಕನೋ ಇರುವಾಗ ನಾವು ನಿಶ್ಚಿಂತೆಯಿಂದಿರುವಂತೆ ಇರಬೇಕು. ಎಂದಿಗೂ ಕೈಬಿಡದ ದೇವರಿಗಿಂತ ಉತ್ತಮ ದ್ವಾರಪಾಲಕ ಅಥವಾ ರಕ್ಷಕ ಬೇರೆ ಯಾರು ಇದ್ದಾರು? ದೇವರನ್ನು ಕುರಿತು ಹಾಡಿದ ರಾಗಲಿ ಅಥವಾ ಕೇವಲ ಬೌದ್ಧಿಕ ಗ್ರಹಣದಿಂದಾಗಲಿ ಸಾಲದು. ಅದನ್ನು ಅಂತರಂಗದಲ್ಲಿ ಅನುಭವಿಸಬೇಕು. ಈ ಅನುಭವ ಸುಖದುಃಖಗಳ ಅನುಭವ ದಂತೆಯೇ. ಅದು ವಾದಕ್ಕೆ ನಿಲುಕದು; ವಾದವೂ ಅನಾವಶ್ಯಕ. ನಮ್ಮ ಅನುಭವಕ್ಕೆ ಬಂದಮೇಲೆ ವಾದವೇಕೆ? ನೀನು ಎಲ್ಲ ಚಿಂತೆಯಿಂದಲೂ ಸಂಪೂರ್ಣವಾಗಿ ಮುಕ್ತಳಾಗಿರಬೇಕೆಂಬ ಉದ್ದೇಶದಿಂದ ಇದನ್ನು ಬರೆಯು ತ್ತಿದೇನೆ.

ವಿವಿಧ ಜನಾಂಗಗಳಿಗೆ ಸಂಬಂಧಿಸಿದ ಆಟದ ಬೊಂಬೆಗಳನ್ನು ಮಕ್ಕಳಿಗೆ* ಕೊಡುವುದು ಒಳ್ಳೆಯ ಅಭಿಪ್ರಾಯ. ಹಿಂದೂ ಹುಡುಗಿಯ ಹೆಸರೇನು? ಅವಳ ಪ್ರಾಂತ ಯಾವುದು?

ಮಹಾದೇವ್ ನನ್ನೊಂದಿಗಿರುವನೆಂದು ನಿನಗೆ ನಾನು ತಿಳಿಸಿದೆನೆ?

ಮಕ್ಕಳಿಗೆ ಮುತ್ತುಗಳು.

ಯ. ಕೇಂ. ಸೆ.
೧೩-೪-೧೯೩೨

ಬಾಪೂ

## ಹೋರಾಟದ ನಡುವೆ ಶಾಂತಿ

ನನ್ನ ಪ್ರಿಯ ಮಗು,

ನೀನು ಮಾಡುತ್ತಿರುವುದೆಲ್ಲ ನನಗೆ ಅರ್ಥವಾಗಿದೆ. ಆದರೆ ನೀನು ಆತಂಕಕ್ಕೆ ಮಾತ್ರ ಒಳಗಾಗಬಾರದು. ನಾವು ಭಗವಂತನ ಸಂಕಲ್ಪ ಸಾಧಕರೆನ್ನುವುದಾದರೆ, ಒಂದು ಕ್ಷಣವೂ ಆತಂಕಗೊಳ್ಳಬಾರದು.

---

* ಎಸ್ತರಳ ಇಬ್ಬರು ಮಕ್ಕಳಿಗೆ.

ಅಂತಃಕ್ಷೋಭೆಯಿಲ್ಲದೆ ಶಾಂತಿ ಜನಿಸದು ; ಹೋರಾಟವಿಲ್ಲದೆ ಶಾಂತಿ ಬರದು. ಶಾಂತಿಯಲ್ಲಿ ಹೋರಾಟ ಅಂತರ್ಗತವಾಗಿದೆ. ಹೋರಾಟವಿಲ್ಲದೆ ಶಾಂತಿ ಅರ್ಥವಾಗದು. ಅಂತರಂಗದಲ್ಲಿಯೂ ಬಹಿರಂಗದಲ್ಲಿಯೂ ಬಾಳು ಒಂದು ನಿರಂತರ ಹೋರಾಟ. ಆದುದರಿಂದಲೇ ಹೋರಾಟದ ನಡುವೆ ಶಾಂತಿಯನ್ನು ಕಂಡುಕೊಳ್ಳಬೇಕಾದ ಆವಶ್ಯಕತೆ.

ಈ ವರ್ಷ ಪೂನಾದಲ್ಲಿ ವಿಪರೀತ ಸೆಕೆ. ಸಾಮಾನ್ಯವಾಗಿ ಪೂನಾದಲ್ಲಿ ಇಷ್ಟು ಸೆಕೆಯಿರುವುದಿಲ್ಲ. ಆದರೆ ಈಗ ಮಳೆಗಾಲ ಆರಂಭವಾಗಿದೆ. ಸೂರ್ಯಾಸ್ತ ಬಹಳ ಸೊಗಸಾಗಿರುತ್ತದೆ. ಹಕ್ಕಿಗಳ ಇಂಚರವು ಕೇಳಿ ಬರುತ್ತದೆ.

ನೀನು ಮತ್ತೊಮ್ಮೆ ಆ ರೋಗಿಯನ್ನು† ನೋಡಿದ್ದೆಯಾ ?

ಮಹಾದೇವ್ ನನ್ನೊಂದಿಗೆ ಇದಾನೆಂದು ನಿನಗೆ ತಿಳಿಸಿದೇನೆ. ಅವನು ದಿನವೂ ೧ ಘಂಟೆ ವೇಳೆಯನ್ನು ಹಂಜಿ ಮಾಡುವುದರಲ್ಲಿಯೂ, ನೂಲುವುದರಲ್ಲಿಯೂ ಕಳೆಯುತ್ತಾನೆ. ಈಗ ಬಹಳ ಸೊಗಸಾದ ನೂಲನ್ನು ತೆಗೆಯುತ್ತಾನೆ. ನನ್ನ ಕೈಗಳ ಅಶಕ್ತತೆಯಿಂದ ನಾನು ಹೆಚ್ಚಾಗಿ ತೆಗೆಯಲಾರೆ. ನೀನು ಕ್ಷೇಮವೆಂದು ನಂಬಿದೇನೆ.

ನಮ್ಮೆಲ್ಲರ ಪ್ರೀತಿ, ಮಕ್ಕಳಿಗೆ ಮುತ್ತು.

ಯ. ಮಂ.* ಬಾಪೂ

೨೨–೫–೧೯೩೨

## ಮೂಲವೇ ಕಲುಷಿತವಾದರೆ....

ನನ್ನ ಪ್ರಿಯ ಮಗು,

ಈಗ ಮೌನ. ನಿನ್ನ ಸ್ವಲ್ಪ ದೀರ್ಘವಾದ ಪತ್ರ. ಆದರೆ ನನಗೆ ಇದೇನೂ ಅತಿದೀರ್ಘವಲ್ಲ. ನೀನು ಕಳಿಸಿದ ಪುಸ್ತಕ ನನಗೆ ತಲಪಿವೆ ಎಂದು ಕಳೆದ ಪತ್ರದಲ್ಲಿ ಬರೆಯಲು ಮರೆತೆ. ಅದಷ್ಟು ಕ್ಷಿಪ್ರದಲ್ಲಿ

---

† ಹಿಂದೆ ಹೇಳಿರುವ ಬಡ ಆಂಗ್ಲ ಹುಡುಗಿ.

* ಯರವಡಾ ಮಂದಿರ.

ಅದನ್ನು ಓದುತ್ತೇನೆ. ಪ್ರತಿ ನಿಮಿಷವೂ ಮುಂಚಿತವಾಗಿಯೇ ಮೀಸಲಾಗಿರುತ್ತದೆ. ಆದುದರಿಂದ ಏನಾದರೂ ಹೊಸದಾಗಿ ಓದಬೇಕಾದರೆ ಅಥವಾ ಹೊಸ ಕೆಲಸ ಮಾಡಬೇಕಾದರೆ ಅದಕ್ಕೆ ಸರದಿ ಕಾಯಬೇಕು. ಅದು ಅತ್ಯಂತ ಮುಖ್ಯವಾಗಿದ್ದರೆ ಮಾತ್ರ ಸದ್ಯದ ಕೆಲಸವನ್ನು ನಿಲ್ಲಿಸಲಾಗುವುದು.

ಹೃದಯ ಅನುಭವಪ್ರಧಾನವಾದುದು. ಅದನ್ನು ಪರಿಶುದ್ಧವಾಗಿ ಇಟ್ಟುಕೊಂಡ ಹೊರತು ನಾವು ಮಾರ್ಗ ತಪ್ಪುವುದು ಸುಲಭ. ಮನೆಯನ್ನೂ ಮತ್ತು ಅದರಲ್ಲಿ ಇರುವ ಎಲ್ಲವನ್ನೂ ರಕ್ಷಿಸಿದಂತೆ ಅದು. ಹೃದಯದ ಮೂಲದಿಂದಲೇ ದೇವರ ಜ್ಞಾನ ಸ್ಫುರಿಸುತ್ತದೆ. ಮೂಲವೇ ಕಲುಷಿತವಾದರೆ ಎಲ್ಲ ಪರಿಹಾರವೂ ನಿರರ್ಥಕ. ಪರಿಶುದ್ಧತೆಯೊಂದು ಮಾತ್ರ ಇದ್ದರೆ ಬೇರೆ ಏನೂ ಬೇಡ.

ಇದನ್ನು ಬಲಗೈಯಿಂದ ಬರೆದಿದೇನೆ, ಏಕೆಂದರೆ, ಎಡಗೈ ಬಲಗೈಗಿಂತ ಹದಗೆಟ್ಟದೆ. ಚಿಂತೆಗೆ ಕಾರಣವಿಲ್ಲ. ಅದಕ್ಕೆ ಪೂರ್ಣ ವಿಶ್ರಾಂತಿ ಬೇಕು ಅಷ್ಟೆ, ಆದುದರಿಂದ ಕಾಲಿನಿಂದ ತುಳಿಯುವ ರಾಟೆಯಲ್ಲಿ ನೂಲುತ್ತೇನೆ, ಬಲಗೈಯಿಂದ ನೂಲನ್ನು ತೆಗೆಯುತ್ತೇನೆ.

ನಮ್ಮೆಲ್ಲರ ಪ್ರೇಮ, ಮಕ್ಕಳಿಗೆ ಮುತ್ತು.

ಯು. ಕೇಂ. ಸೆ. **ಬಾಪೂ**

೨೯–೫–೧೯೩೨

## ಶ್ರಮವಿಭಜನೆ

ನನ್ನ ಪ್ರಿಯ ಮಗು,

ನಿನ್ನ ಪತ್ರ. ನೀನು ನಿರೀಕ್ಷಿಸಿದ ಕಾಲಕ್ಕೆ ನನ್ನಿಂದ ಪತ್ರ ಬರದಿದ್ದರೆ ಸಿಟ್ಟಾಗಬೇಡ. ನನ್ನ ಪತ್ರವ್ಯವಹಾರಕಾರ್ಯ ಸ್ವಲ್ಪ ಅಸ್ತವ್ಯಸ್ತವಾಗಿದೆ. ಅದು ಜಾಗ್ರತೆ ಸರಿಯಾಗುವುದೆಂದು ನಂಬಿದೇನೆ. ಹೇಗಾದರೂ ಸೆರೆಯಾಳು ತನ್ನ ಸಹಜಸಿದ್ಧವಾದ ಆರೋಗ್ಯಕರವಾದ ಆಸೆಗಳು ತೃಪ್ತಿಯಾಗುವ ಸೌಕರ್ಯಗಳಿಂದ ಸಮಾಧಾನಹೊಂದಬೇಕು.

ನೀನು ಅಶಕ್ತಳಾದ ಭಗಿನಿಯನ್ನು† ಭೇಟಿಯಾದಾಗ ನಾನು ಆಗಾಗ ಅವಳ ಬಗೆಗೆ ಚಿಂತಿಸುತ್ತೇನೆಂದು ತಿಳಿಸು. ನಿನ್ನ ಮೊಹಲ್ಲಾದಲ್ಲಿರುವ ಅಂಗವಿಕಲರ ಪುಟ್ಟ ಶಾಲೆಗೆ* ನೀನು ಆಗಾಗ ಹೋಗುವೆಯೋ ಹೇಗೋ ಕಾಣೆ. ಆ ಪಾಠಶಾಲೆಗೆ ಒಳ್ಳೆ ಆಸಕ್ತಿಯಿಂದ ಕೂಡಿದ ಕಾರ್ಯಕರ್ತರಿದ್ದಾರೆಂದು ಭಾವಿಸಿದ್ದೆ. ನಿನಗೆ ವಿರಾಮವಿರುವುದಾದರೆ ಆ ಸಂಸ್ಥೆಯ ವಿಷಯವನ್ನೂ ಅದರ ಮೇಲ್ವಿಚಾರಕರ ವಿಷಯವನ್ನೂ ಹೆಚ್ಚು ಪರಿಚಯ ಮಾಡಿಕೊಂಡು ಅದು ಹೇಗೆ ಪ್ರಗತಿಹೊಂದುತ್ತಿದೆಯೆಂಬುದನ್ನು ನನಗೆ ತಿಳಿಸು.

ಮಹಿಳೆಯೊಬ್ಬಳ ಅಭಾವದಿಂದ 'ಬಿ'ರವರ ಗೃಹ ಎಷ್ಟು ಶೂನ್ಯವಾಗಿ ಕಂಡುಬರುತ್ತದೆಂದು ನೀನು ತಿಳಿಸಿದೇಯೆ. ಸ್ತ್ರೀಪುರುಷರ ಶ್ರಮ ವಿಭಜನೆಯ ಬಗೆಗೆ ತಪ್ಪು ಅಭಿಪ್ರಾಯದಿಂದ ಇಂಥ ಪರಿಣಾಮವಾಗುತ್ತದೆಂದು ನಾನು ಯಾವಾಗಲೂ ಪರಿಗಣಿಸಿದೇನೆ. ವಿಭಜನೆಯೇನೋ ಇರಬೇಕು. ಪುರುಷನೇ ಗೃಹವನ್ನು ನೋಡಿಕೊಳ್ಳಬೇಕಾದ ಪರಿಸ್ಥಿತಿ ಬಂದಾಗಲೂ ಅಥವಾ ಸ್ತ್ರೀಯೇ ನೋಡಿಕೊಳ್ಳಬೇಕಾದ ಪರಿಸ್ಥಿತಿ ಬಂದಾಗಲೂ ಈ ಬಗೆಯ ನಿಸ್ಸಹಾಯತೆಯನ್ನು ಅನುಭವಿಸುವುದು ಪಾಶ್ಚಾತ್ಯ ದೇಶಗಳಿಗಿಂತಲೂ ಇಲ್ಲಿ ಹೆಚ್ಚು. ಸ್ತ್ರೀಪುರುಷರ ತಪ್ಪು ಬೆಳೆವಣಿಗೆಯೇ ಇದಕ್ಕೆ ಕಾರಣ. ಸ್ತ್ರೀ ಇಲ್ಲದಾಗ ಮನೆಯನ್ನು ಚೆನ್ನಾಗಿ ಇಟ್ಟುಕೊಳ್ಳಲು ಪುರುಷನೇಕೆ ಬೇಜಾರುಪಡಬೇಕು ಅಥವಾ ಪುರುಷನ ರಕ್ಷಣೆಯನ್ನೇ ಸ್ತ್ರೀ ಏಕೆ ಅಪೇಕ್ಷಿಸಬೇಕು? ಸ್ತ್ರೀ ಯಾವಾಗಲೂ ಮನೆಯನ್ನು ನೋಡಿಕೊಳ್ಳುವುದಕ್ಕೆ ಇರುವಳೆಂದೂ, ಯಾವಾಗಲೂ ಪುರುಷನ ರಕ್ಷಣೆಯನ್ನು ಅಪೇಕ್ಷೆ ಮಾಡುವಂತೆ ಮೃದು ಜೀವನ ನಡೆಸಿ ಅಶಕ್ತಳೆಂದು ಭಾವಿಸಬೇಕೆಂದೂ ಇರುವ ಒಂದು ಅಭ್ಯಾಸ ಈ ಬಗೆಯ ಆಭಾಸಕ್ಕೆ ಕಾರಣವೆಂದು ನನಗೆ ಕಂಡುಬರುತ್ತದೆ. ನಾವು ಆಶ್ರಮದಲ್ಲಿ ಇದರಿಂದ ಭಿನ್ನವಾದ ಸನ್ನಿವೇಶ

† ಕಾಯಿಲೆಯಾದ ಆಂಗ್ಲ ಹುಡುಗಿ.

* ಗಾಂಧೀಜೀ ಇಂಗ್ಲೆಂಡಿಗೆ ಹೋಗಿದ್ದಾಗ ಆ ಶಾಲೆಗೆ ಭೇಟಿಕೊಟ್ಟಿದ್ದರು.

ವನ್ನು ಸೃಷ್ಟಿಸುತ್ತಿದೇವೆ. ಇದೇನೋ ಕಷ್ಟದ ಕೆಲಸ. ಆದರೂ ಮಾಡಲು ಯೋಗ್ಯವಾದುದು.

ಶ್ರೀಮತಿ ಡಬ್ಲ್ಯೂ ಅವರಿಗೆ ನೀನು ಬರೆಯುವಾಗ ನನ್ನನ್ನೂ ಮಹಾದೇವನನ್ನೂ ನೆನಪು ಕೊಡು.

ಮಕ್ಕಳಿಗೆ ಮುತ್ತು.

ಯ. ಕೇಂ. ಸೆ.
೧೮–೭–೧೯೩೨

ಪ್ರೀತಿ,
ಬಾಪೂ

## ಅಗ್ನಿಪರೀಕ್ಷೆಯಿಂದಲೇ ಭಗವಂತನ ದರ್ಶನ

ನನ್ನ ಪ್ರಿಯ ಮಗು,

ಇಷ್ಟೊಂದು ದೂರದಿಂದಲೂ ನಿನ್ನ ಪರಿತಾಪವನ್ನು† ನಾನು ಅರಿಯಬಲ್ಲೆ. ಆದರೆ ದೇವರು ನಮಗೆ ಅಗ್ನಿಪರೀಕ್ಷೆಯ ಹೊರತು ಬೇರೆ ವಿಧಾನದಿಂದ ದರ್ಶನವೀಯುವುದಿಲ್ಲ. ಇಂಥ ಪಾವನಕರ ಪರಿತಾಪ ದಲ್ಲಿಯೂ ಗಾಢವಾದ, ಅಗೋಚರವಾದ ಆನಂದವಡಗಿದೆ. ಈ ನನ್ನ ಪರೀಕ್ಷೆಯ ವೇಳೆಯಲ್ಲಿ ನೀನೂ ಈ ಆನಂದದಲ್ಲಿ ಪಾಲುಗೊಳ್ಳುವೆಯೆಂದು ನಂಬಿದೇನೆ. ಇಂಗ್ಲೆಂಡಿನಿಂದ ನನಗೆ ಬಂದ ಪ್ರೇಮಮಯ ಸಂದೇಶಗಳಲ್ಲಿ ಹೊರೇಸ್ ಆಲೆಗ್ಸಾಂಡರ್* ಮತ್ತು ಆಂಡ್ರೂಸ್§ ಇವರ ಹೆಸರುಗಳ ಜೊತೆಗೆ ನಿನ್ನ ಹೆಸರನ್ನೂ ನಾನು ಕೇಳಿದೆ. ನಾನು ದಿನ ಕಳೆದಂತೆ ಶಕ್ತ ನಾಗುತ್ತಿದೇನೆ.

---

† ಗಾಂಧೀಜೀ ಕೈಗೊಂಡಿದ್ದ ಅಸ್ಪೃಶ್ಯತಾ ನಿವಾರಣೆಯ ಉಪವಾಸ ಕ್ಕೋಸ್ಕರ ಪರಿತಾಪ.

* ಇವರು ಕ್ವೇಕರ್ ಕ್ರೈಸ್ತ ಪಂಥದವರು. ಗಾಂಧೀಜೀಯ ಬಗೆಗೆ ಗೌರವಹೊಂದಿದವರು.

§ ಸಿ. ಎಫ್. ಆಂಡ್ರೂಸ್.

ಇಂದು ನೀನು ನನ್ನಿಂದ ದೀರ್ಘಪತ್ರ ನಿರೀಕ್ಷಿಸಲಾರೆ. ನನ್ನಲ್ಲಿ ಇರಬಹುದಾದ ಶಕ್ತಿಯನ್ನು ಇಂಗ್ಲೆಂಡಿನ ಗೆಳೆಯರಿಗೆ ಪ್ರೇಮಪುರಸ್ಸರ ಪತ್ರ ಬರೆಯಲು ವಿನಿಯೋಗಿಸುತ್ತಿದೇನೆ.

ನಿನಗೆ ಪ್ರೀತಿ, ಮಕ್ಕಳಿಗೆ ಮುತ್ತು.

ಯ. ಕೇಂ. ಸೆ. ಬಾಪೂ
೩೦-೯-೧೯೩೨

## ಪರಿತಾಪ ಹಾಗೂ ಆಂತರಿಕ ಆನಂದದ ದಿನಗಳು

ಯರವಡಾ ಕೇಂದ್ರ ಸೆರೆಮನೆ
(ಪೂನಾ)

ನನ್ನ ಪ್ರಿಯ ಮಗು,

ಸೆಪ್ಟೆಂಬರ್ ೪ರಂದು ನೀನು ಬರೆದ ದೀರ್ಘಪತ್ರ ತಲುಪಿದೆ. ಅದೊಂದು ಕಳೆದುಹೋದ ಯುಗ.

ಉಪವಾಸ ಮುಗಿದಮೇಲೆ ನನಗೊಂದು ಹೊಸ ಜನ್ಮವೇ. ನಾನು ತೀವ್ರವಾಗಿಯೇ ಶಕ್ತಿಗಳಿಸುತ್ತಿದೇನೆ. ನಾನು ಕಳೆದುಕೊಂಡಿದ್ದ ತೂಕ ಬಹಳಮಟ್ಟಿಗೆ ಕೂಡಿಕೊಂಡಿದೆ. ನಾನು ಕಳೆದುಕೊಂಡ ಶಕ್ತಿಗೂಡಲು ಇನ್ನೂ ಸ್ವಲ್ಪ ಕಾಲ ಬೇಕಾದೀತು. ಆ ಪರಿತಾಪದ ದಿನಗಳು ಆಂತರಿಕ ಆನಂದದ ದಿನಗಳೂ ಆಗಿದ್ದವು. ಲಕ್ಷೋಪಲಕ್ಷ ಜನ ತಮ್ಮ ದೇಶಬಾಂಧವರನ್ನು ಅಸ್ಪೃಶ್ಯರೆಂದು ಪರಿಗಣಿಸಿದ ಮಹಾಪಾಪಕ್ಕೆ ಅದೊಂದು ಸಣ್ಣ ತಪಸ್ಸು. ಈ ವೇಳೆಗೆ ನಿನಗೆ ಎಲ್ಲ ಗೊತ್ತಿದೆ.

ಆವಿಯ ಸ್ನಾನ, ಪಿಷ್ಟಾಂಶವಿಲ್ಲದ ಆಹಾರ ಮತ್ತು ಹೇರಳವಾಗಿ ಹೊಸ ಹಣ್ಣುಗಳ ಉಪಯೋಗ ಇವುಗಳಿಂದ ನಿನ್ನ ವಾಯುನೋವನ್ನು ಕಳೆದುಕೊಳ್ಳಲು ಯತ್ನಿಸಬೇಕು.

ಡೆನ್ಮಾರ್ಕಿನಿಂದ ನನಗೊಂದು ಹುಟ್ಟುಹಬ್ಬದ ಶುಭಾಶಯವು ಬಂದಿತ್ತು. ಅದನ್ನು ಕಳಿಸಿದವರ ಹೆಸರು ಇರಲಿಲ್ಲ.

ಈ ದಿನ ಇನ್ನು ಹೆಚ್ಚಿಗೆ ಇಲ್ಲ.

ನಮ್ಮ ಪ್ರೀತಿ, ಮಕ್ಕಳಿಗೆ ಮುತ್ತು.

೪-೧೦-೧೯೩೨ ಬಾಪೂ

## ಉಪವಾಸವು ಯುಕ್ತವಾಗಿತ್ತು.

ಯರವಡಾ ಕೇಂದ್ರ ಸೆರೆಮನೆ
(ಪೂನಾ)

ನನ್ನ ಪ್ರಿಯ ಮಗು,

ನಿನ್ನ ಇತ್ತೀಚಿನ ಪತ್ರ. ಆನಂದದ ಭರದಲ್ಲಿ ನೀನು ತಂತೀ ಕಾರ್ಯಾಲಯಕ್ಕೆ ಓಡಿಹೋಗಿ ನನಗೆ ಸುದ್ದಿ ಕಳಿಸಲು ಸಿದ್ಧವಿದ್ದೆಯೆಂದೂ ಆದರೆ ಅನಂತರ ಬಡವರಾದ ನಾವು, ದೇವರ ಸೇವೆಗಾಗಿ ನಮ್ಮಲ್ಲಿರುವ ಹಣವನ್ನು ಆ ರೀತಿ ವೆಚ್ಚಮಾಡುವುದು ತಪ್ಪಾದೀತೆಂದೂ ಅರಿತುಕೊಂಡು ಸುಮ್ಮನಾದೆಯೆಂದೂ ತಿಳಿಸಿದೀಯೆ. ಆಶ್ರಮದ ವಿಳಾಸಕ್ಕೆ ನೀನು ಬರೆದಿದ್ದ ದೀರ್ಘವಾದ ಪ್ರೇಮಪುರಸ್ಸರವಾದ ಪತ್ರವೂ ತಲಪಿತು.

'ಎ' ಅವರು ಹೊಗೆ ಸೇದುವುದನ್ನು ಬಿಡಿಸುವುದಕ್ಕಾದರೂ ನಿನ್ನ ಉಪವಾಸ ಯುಕ್ತವಾಗಿತ್ತು. ಆತನನ್ನು ಹಿಡಿದಿದ್ದ ಆ ಪದ್ಧತಿಯನ್ನು ಬಿಡಿಸುವುದಾದರೂ ಒಳ್ಳೆಯ ಪುರುಷಾರ್ಥವೇ. ಅನೇಕ ಯುವಕ-ಯುವತಿಯರು, ವಯಸ್ಸಾದ ಸ್ತ್ರೀಪುರುಷರೂ ಆ ನನ್ನ ಉಪವಾಸದ ಕಾಲದಲ್ಲಿ ಅಷ್ಟುಮಟ್ಟಿನ ಸಂಯಮ ಮತ್ತು ಆತ್ಮನಿರಾಕರಣೆಯನ್ನಾದರೂ ಮಾಡಿಕೊಳ್ಳುವಂತಾಯಿತು. ಆದುದರಿಂದಲೇ ಆ ಉಪವಾಸ ಭಗವಂತನಿಂದ ಪ್ರೇರಿತ ಎಂದು ತೋರಿಸುತ್ತದೆ.

ಆಂಡ್ರೂಸ್ ಇರುವ ಸಾಮೂಹಿಕ ಛಾಯಾ ಚಿತ್ರವನ್ನು ನಾನು ನೋಡಿದೆ. ನಾವೆಲ್ಲ ಅದನ್ನು ಮೆಚ್ಚಿದೆವು. ಅದು ಬಹಳ ಚೆನ್ನಾಗಿತ್ತು. ತಂಗ್ಯೆ* ಬರಿಮೈಯಲ್ಲಿ ಇದಾಳೆ. ಅವಳು ಒಳ್ಳೆ ಪೂರ್ಣ ಚಿತ್ರವಾಗಿ ಕಾಣುತ್ತಾಳೆ.

ನಿನ್ನ ಮುಂದಿನ ಪತ್ರದಲ್ಲಿ ಕಾಲವಾದ ಭಗಿನಿಯ ಭೇಟಿಯ ಬಗ್ಗೆ ನೀನು ಬರೆಯುವೆಯೆಂದು ನಿರೀಕ್ಷಿಸುತ್ತೇನೆ.

ನೀನು ನಿನ್ನ ಶರೀರಕ್ಕೆ ಹೊಂದದಿರುವ ವಸ್ತುಗಳನ್ನು ಉಪಯೋಗಿಸಿ ಶರೀರವನ್ನು ಅಸಡ್ಡೆಯಿಂದ ಕಾಣಬಾರದು. ದ್ವಿದಳಧಾನ್ಯಗಳಿಂದ ನಿನ್ನ

---

* ಎಸ್ತರಳ ಎರಡನೆಯ ಮಗು.

ಶರೀರವನ್ನು ಬೆಳೆಸಿಕೊಳ್ಳಲಾರೆ. ಅವು ನಿನಗೆ ಅನಾವಶ್ಯಕ. ನಿನ್ನ ಆಹಾರ ಮುಖ್ಯವಾಗಿ ಹಾಲು, ಮೊಟ್ಟೆಗಳು (ನೀನು ಅದನ್ನು ಉಪಯೋಗಿಸು ವುದರಿಂದ), ಪೂರ್ಣ ಗೋಧಿ, ಹಣ್ಣು, ತರಕಾರಿ, ರಸಾಯನ, ಟೊಮಾಟೊ ಇತ್ಯಾದಿಗಳಿಂದ ಕೂಡಿರಬೇಕು. ಸೈನಿಕನೊಬ್ಬ ತನ್ನ ಆಯುಧಗಳನ್ನು ಶುಭ್ರವಾಗಿ ಇಟ್ಟಿರುವಂತೆ ನಾವೂ ನಮ್ಮ ಈ ಆಯುಧವನ್ನು (ದೇವರು ಕೊಟ್ಟ ಶರೀರವನ್ನು) ಶುಭ್ರವಾಗಿಯೂ ಉತ್ತಮ ಸ್ಥಿತಿಯಲ್ಲಿಯೂ ಇಟ್ಟಿರಬೇಕು.

ನನ್ನ ಶಕ್ತಿ ಬಹಳ ಮಟ್ಟಿಗೆ ಕೂಡಿಬಂದಿದೆ. ನಾನು ಸಾಮಾನ್ಯ ಆಹಾರವನ್ನು ತೆಗೆದುಕೊಳ್ಳುತ್ತಿದೇನೆ. 'ಎಂ' ಪ್ರತಿವಾರವೂ ತಪ್ಪದೆ ಬರೆಯುತ್ತಾನೆ. ಅವನು ಆರೋಗ್ಯವಾಗಿದಾನೆ. ದೇವದಾಸ್ ಬಹಳ ಉತ್ತಮವಾಗಿದಾನೆ, ಆದರೆ ಮಿತಿಮೀರಿ ಕೆಲಸ ಮಾಡುತ್ತಾನೆ. 'ಸಿ' ಸಹ ಹಾಗೆಯೇ. ಮಹಾದೇವ್ ನನ್ನೊಂದಿಗೆ ಇದಾನೆ. 'ಇ' ಆಶ್ರಮದಲ್ಲಿ ಇದಾನೆ. ಅವನ ದೇಹ ಬಲವಾಗಿಲ್ಲ.

ಡೆನ್ಮಾರ್ಕಿನ ಗೆಳೆಯನಿಗೆ ಒಂದು ಪತ್ರವನ್ನು ಇದರೊಂದಿಗೆ ಇಟ್ಟಿದೇನೆ. 'ಬಾ' ಆಶ್ರಮದಲ್ಲಿ ಇದಾಳೆ. ಅವಳು ನನಗಿಂತ ವಯಸ್ಸಾಗಿರುವಂತೆ ಕಂಡರೂ ತುಂಬ ಚಟುವಟಿಕೆಯಿಂದ ಕೂಡಿದಾಳೆ. ಅವಳ ಮನಸ್ಸು ಜಾಗ್ರತೆ ಸುಸ್ತಾಗುತ್ತದೆ. ಆವಳು ತುಂಬ ಚಿಂತಿಸುತ್ತಾಳೆ.

ನಿಮಗೆಲ್ಲ ಪ್ರೀತಿ, ಜೊತೆಗೆ ಮಕ್ಕಳಿಗೆ ಮುತ್ತು.

೧೧-೧೧-೧೯೩೨ ಬಾಪೂ

## ನಿಜ ಜೀವನ ನಿರಂತರ ಯಜ್ಞ

ಮೇಲ್ವಿಚಾರಕ
ಯರವಡಾ ಕೇಂದ್ರ ಸೆರೆಮನೆ
(ಪೂನಾ)

ನನ್ನ ಪ್ರಿಯ ಮಗು,

ಬರಲಿರುವ ಎರಡನೆಯ ಉಪವಾಸಕ್ಕಾಗಿ ನೀನು ಚಿಂತಿಸಬೇಕಾಗಿಲ್ಲ. ಅದು ಬರದೆಯೇ ಇರಬಹುದು. ಒಂದುವೇಳೆ ಸಂಭವಿಸಿದರೆ ಅದಕ್ಕಾಗಿ

ನೀನು ಆನಂದಿಸಬೇಕು, ಏಕೆಂದರೆ ನಿಜ ಜೀವನ ಒಂದು ನಿರಂತರ ಯಜ್ಞ. ಆನಂತರ ಭೋಗ ಬರಲಾರದು. ತ್ಯಾಗವೇ ಭೋಗ. ಎಲ್ಲ ಬಗೆಯ ಸ್ವೀಕಾರವೂ ಅಧಿಕವಾಗಿ ಕೊಡುವುದಕ್ಕೇ ಆಗಬೇಕು. ಇದು ನನಗೆ ಬಹಳ ಸ್ಪಷ್ಟವಾಗುತ್ತಿದೆ. ಆದುದರಿಂದ ನಡೆಯುತ್ತಿರುವುದನ್ನೂ ನಡೆಯುವುದನ್ನೂ ನೀನು ಸಮಾಧಾನದಿಂದಲೂ ಹರ್ಷದಿಂದಲೂ ಮತ್ತು ಪ್ರಾರ್ಥನೆಯಿಂದಲೂ ನಿರೀಕ್ಷಿಸಬೇಕು.

ನಾನು ಇನ್ನು ಹೆಚ್ಚು ಹೇಳಿ ಕೊಡಲಾರೆ. ಅಸ್ಪೃಶ್ಯತಾಕಾರ್ಯ 'ಪ್ರೇಮಪತ್ರ'ಗಳನ್ನು ಬರೆಯಲು ಅವಕಾಶವನ್ನೇ ಕೊಡದು.

ನಿಮಗೆಲ್ಲ ಪ್ರೀತಿ, ಮಕ್ಕಳಿಗೆ ಮುತ್ತು.

೨೫-೧೧-೧೯೩೨ **ಬಾಪೂ**

## ನೂತನ ವರ್ಷದ ಶುಭಾಶಯ

ಯರವಡಾ ಕೇಂದ್ರ ಸೆರೆಮನೆ
ಜನವರಿ ೫, ೧೯೩೩

ನನ್ನ ಪ್ರಿಯ ಮಗು,

ಅಸ್ಪೃಶ್ಯತಾನಿವಾರಣೆಯ ಕಾರ್ಯದ ಜೊತೆಜೊತೆಗೆ ನನ್ನ ಪತ್ರವ್ಯವಹಾರವನ್ನೂ ನಾನು ಸಾಗಿಸಿಕೊಂಡು ಹೋಗಬೇಕಾದರೆ ಪತ್ರಗಳನ್ನು ಬಹಳ ಮಟ್ಟಿಗೆ ಹೇಳಿ ಬರೆಸಬೇಕು ; ಅದು ಸಂಕ್ಷೇಪವಾಗಿರಬೇಕು. ನನಗೆ ಈ ಸೌಕರ್ಯ ದೊರೆತಿರುವುದೊಂದು ಅದೃಷ್ಟವೇ* ಸರಿ. 'ವಿ' ಮತ್ತು 'ಎಂ' ಅವರಿಂದ ನನಗೆ ನೆರವು ದೊರೆತರೂ ಅಸ್ಪೃಶ್ಯತಾನಿವಾರಣೆಯ ಕಾರ್ಯ ನನ್ನ ಶಕ್ತಿಮೀರಿ ಹೋಗುತ್ತಿತ್ತು. ನಿನ್ನ ದೀರ್ಘವಾದ ಪ್ರೇಮಮಯ ಪತ್ರಕ್ಕೆ ನಾನು ನ್ಯಾಯ ಸಲ್ಲಿಸಬೇಕೆಂದು ಅಪೇಕ್ಷಿಸುತ್ತೇನೆ. ಆದರೂ ನಾನು ಅಷ್ಟು ದೀರ್ಘವಾದ ಪತ್ರ ಬರೆಯಲು ಸಾಧ್ಯವಿಲ್ಲ. ಆಂಡ್ರೂಸ್ ವುಡ್‌ಬ್ರೂಕ್‌ನಲ್ಲಿ† ನೆಲೆಸುವರೆಂದು ಕಂಡುಬರುತ್ತದೆ. ಆದುದರಿಂದ ನೀನು ಅಪೇಕ್ಷಿಸಿದಾಗೆಲ್ಲ ಅವರ ನೆರವನ್ನು ಹೊಂದಬಹುದು.

---

* ಸೆರೆಮನೆಯಲ್ಲಿ ಯಾವುದಕ್ಕೂ ಅವಕಾಶವಿರಲಿಲ್ಲ.

† ಇಂಗ್ಲೆಂಡಿನಲ್ಲಿ ಒಂದು ಸ್ಥಳ.

ನೀನು ನಕಲು ಮಾಡಿ ಕಳಿಸಿರುವ ಷೆಲ್ಲಿಯ* ಸುಂದರ ಕವನವನ್ನು ನೋಡಿದೆ. ನೀನು ಆರೋಗ್ಯವಾಗಿದೀಯೆಂದೂ ಹೊಸ ವರ್ಷ ನಿನಗೆ ಎಂದೂ ಇದ್ದ ಆನಂದಕ್ಕಿಂತ ಹೆಚ್ಚಿನ ಆಂತರಿಕ ಆನಂದವನ್ನೂ ಶಾಂತಿಯನ್ನೂ ತರುತ್ತದೆಂದೂ ನಂಬಿದೇನೆ.

ಕಾಯಿಲೆಯಿಂದ ನರಳುತ್ತಿರುವ ತಂಗಿ§ ಬರೆದ ಪತ್ರ ನೋಡಿ ಹರ್ಷವಾಯಿತು. ಅವಳಿಗೆ ನನ್ನ ಉತ್ತರವನ್ನು ಇದರೊಂದಿಗೆ ಇಟ್ಟಿದೇನೆ. ಅವಳು ತನ್ನ ವಿಳಾಸವನ್ನು ಕೊಟ್ಟಿದ್ದರೂ ಹೆಸರೇ ನನಗೆ ಗೊತ್ತಾಗುವುದಿಲ್ಲ. ಆದುದರಿಂದ ನಿನ್ನ ಮೂಲಕವಾಗಿ ಕಳಿಸಿದೇನೆ.

ನಮ್ಮ ಪ್ರೀತಿ, ಮಕ್ಕಳಿಗೆ ಮುತ್ತು. ಅವರಿಗೆ ಬೇರೆ ಪೋಸ್ಟ್‌ಕಾರ್ಡ್ ಬರೆದಿದೇನೆ.

ಮಹಾದೇವ್, ತಂಗೈ ಮತ್ತು ನ್ಯಾನ್ ಇಬ್ಬರಿಗೂ ಕ್ರಿಸ್‌ಮಸ್ ಕೊಡುಗೆಯನ್ನು ಕಳಿಸಿದಾನೆ. ಅದು ಅವರಿಗೆ ತಲುಪಿರಬೇಕು.

ಬಾಪೂ

## ಹರಿಜನ ಪತ್ರಿಕೆ

ಯರವಡಾ ಕೇಂದ್ರ ಸೆರೆಮನೆ
ಫೆಬ್ರವರಿ ೧೦, ೧೯೩೩

ನನ್ನ ಪ್ರಿಯ ತಂಗಿ,

ಈ ಸಲ ನೀನು ಕೆಲವು ವಾರಗಳವರೆಗೆ ನನಗೆ ಪತ್ರ ಬರೆದಿಲ್ಲ. ಏಕೆ ಎಂದು ನಾನು ಆಶ್ಚರ್ಯಪಡುತ್ತಿದ್ದೆ. ನಾನು ನಿನಗೆ ದೀರ್ಘ ಪತ್ರ ಬರೆಯಲಾರೆ. ಎಲ್ಲಕ್ಕಿಂತ ಹೆಚ್ಚಾಗಿ ಹರಿಜನ ಪತ್ರಿಕೆಗೇ° ನನ್ನ ಕಾಲವೆಲ್ಲ

---

* ಇಂಗ್ಲೆಂಡಿನಲ್ಲಿ ಒಬ್ಬ ಪ್ರಸಿದ್ಧ ಕವಿ. ಇವನ ಭಾವಗೀತೆಗಳು ಮನೋಹರವಾದುವು.

§ ಈ ವಿಚಾರ ಹಿಂದೆ ಬಂದಿದೆ; ಆಂಗ್ಲ ಹುಡುಗಿ.

° ಆ ಪತ್ರಿಕೆ ಆಗಲೇ ಆರಂಭವಾದುದು.

ವಿನಿಯೋಗವಾಗುತ್ತಿದೆ. ಈ ಪತ್ರವೂ ಆ ಪತ್ರಿಕೆಯ ಒಂದು ಪ್ರತಿಯೂ ನಿನಗೆ ಏಕಕಾಲದಲ್ಲಿ ತಲಪುವುವು.

ಆಂಡ್ರೂಸ್ ನಿಮ್ಮ ಜೊತೆಯಲ್ಲಿರುವುದರಿಂದ ನಿನಗೂ ಮಕ್ಕಳಿಗೂ ಎಷ್ಟು ಹರ್ಷವಾಗಿದೆಯೆಂದು ನಾನು ಭಾವಿಸಬಲ್ಲೆ. ಅವರು ನಿಮ್ಮೊಂದಿಗೆ ಇರುವುದರಿಂದ ನಿನ್ನ ಬಗೆಗೆ ನನ್ನ ಆತಂಕವೂ ಕಡಿಮೆಯಾಗಿದೆ.

ನಿಮಗೆ ನಮ್ಮೆಲ್ಲರ ಪ್ರೀತಿ.

ಬಾಪೂ

## ದೇವರ ಅರಿಯಲಾಗದ ಮಾರ್ಗಗಳು

ಯರವಡಾ ಕೇಂದ್ರ ಸೆರೆಮನೆ
ಫೆಬ್ರವರಿ ೧೭, ೧೯೩೩

ನನ್ನ ಪ್ರಿಯ ಮಗು,

ಈಗ ನನ್ನ ಸಮಯವೆಲ್ಲ ಪೂರ್ಣವಾಗಿ ಕೆಲಸದಿಂದ ತುಂಬಿದೆ. ಯಾವ ಕೆಲಸವಿದ್ದರೂ ಬಿಟ್ಟು, ಹರಿಜನ ಪತ್ರಿಕೆಗೆ ಪೂರ್ತಿ ಎರಡು ದಿವಸಗಳನ್ನು ಮೀಸಲಿಡಬೇಕು. ನನ್ನ ಪ್ರೇಮಪತ್ರಗಳು ಮೊದಲೇ ಸಂಕ್ಷೇಪವಾಗಿದ್ದವು. ಅವು ಈಗ ಇನ್ನೂ ಸಂಕ್ಷೇಪವಾಗಬೇಕು. ಆದರೆ ಹರಿಜನದಲ್ಲಿ ಬರುವ ನನ್ನ ಸಾಮಾನ್ಯ ಪತ್ರದ ರೂಪದಿಂದ ನಿನಗೆ ಪರಿಹಾರ ದೊರಕುತ್ತದೆ.

ನಾನು ಲಂಡನ್ನಿಗೆ ಭೇಟಿಕೊಟ್ಟುದು ನಿನಗೆ ಎಷ್ಟು ಮಹತ್ವದ್ದಾಗಿತ್ತೆಂದು ನನಗೆ ಗೊತ್ತು. ನಮಗೆ ದೇವರ ಮಾರ್ಗಗಳು ಅರಿವಾಗಲಾರವು. ನಾವು ಅವನಿಗೇ ಶರಣುಹೋದರೆ, ನಮಗೇ ಅರಿವಿಲ್ಲದಂತೆ ಅನೇಕ ಕಾರ್ಯಗಳನ್ನು ಮಾಡಿಸುತ್ತಾನೆ. ನೀನು ಎಂದಿಗೂ ನಿರಾಶೆಯ ಮಡುವಿನಲ್ಲಿ ಇಲ್ಲವಾದರೆ ನನಗೆ ಅದು ಮಹಾ ಹರ್ಷ. ಏಕೆಂದರೆ ಒಂದು ನಿಮಿಷ ನಿರಾಶೆಗೆ ಸಿಲುಕಿದರೂ ಅದು ಭಗವಂತನಲ್ಲಿ ನಂಬಿಕೆಯಿಲ್ಲವೆಂಬುದನ್ನು ತೋರಿಸುತ್ತದೆ.

ಜಾನ್ ಹಾಯ್‌ಲ್ಯಾಂಡ್* ಅವರಿಗೆ ಒಂದು ಪತ್ರವನ್ನು ಇಟ್ಟಿದೇನೆ ಇದರೊಂದಿಗೆ.

ತಂಗ್ಯೆ ಬರೆದ ಪ್ರೀತಿಪತ್ರದಿಂದ ಮಹಾದೇವನಿಗೆ ಸಂತಸವಾಗಿದೆ.

ಪ್ರೀತಿ,

**ಬಾಪೂ**

## ಸಾವಿರ ಮುತ್ತುಗಳು

ಯರವಡಾ ಕೇಂದ್ರ ಸೆರೆಮನೆ
ಮಾರ್ಚ್ ೨, ೧೯೩೩

ನನ್ನ ಪ್ರಿಯ ಮಗು,

ನಿನ್ನ ಪತ್ರ. ಅದನ್ನು ಮೇರೀಗೆ ಕಳಿಸುತ್ತೇನೆ. ಇದರಿಂದ ಅವಳಿಗೆ ಹರ್ಷವಾಗುವುದೆಂದು ನನಗೆ ಗೊತ್ತು. ನನಗೆ ಬರೆದಾಗಲೇ ನೀನು ಅವಳಿಗೂ ಬರೆದಿರಬೇಕು. ಏನಾದರೂ ನೀನು ಶೀಘ್ರವಾಗಿಯೇ ಅವಳನ್ನು ಸೇರುವೆ ಎಂಬ ವಾರ್ತೆ ನೀರಸವಾಗಲಾರದು.

ಕಳೆದ ವಾರ ತಂಗ್ಯೆಗೆ ಒಂದು ಪತ್ರ ಬರೆದು ನಿನಗೆ ಒಂದು ಪಂಕ್ತಿಯನ್ನು ಮಾತ್ರ ಸೇರಿಸಿದ್ದೆ. ಅವಳಿಗಾಗಿಯೇ ಬರೆಯಲ್ಪಟ್ಟು, ಪ್ರತ್ಯೇಕವಾಗಿ ಅವಳ ವಿಳಾಸಕ್ಕೇ ಒಂದು ಪತ್ರ ತಲಪಿದಾಗ ಅವಳು ಬಹಳ ಹೆಮ್ಮೆಪಟ್ಟಿರಬೇಕು. ಆ ಪತ್ರ ಅವಳಿಗೆ ತಲಪಿದ ಕೂಡಲೇ ನನಗೆ ಸಾವಿರ ಮುತ್ತುಗಳನ್ನು ಕಳುಹಿಸಿರಬೇಕು.

ಹರಿಜನ ಪತ್ರಿಕೆಯ ಮೂಲಕ ನಾನು ನನ್ನ ಹೃದಯವನ್ನೇ ಧಾರೆ ಎರೆಯುತ್ತಿರುವುದರಿಂದ ಇನ್ನೇನೂ ಹೆಚ್ಚಿಗೆ ಹೇಳಬೇಕಾದುದಿಲ್ಲ.

ನಮ್ಮೆಲ್ಲರ ಪ್ರೀತಿ ಮತ್ತು ಮುತ್ತುಗಳು.

**ಬಾಪೂ**

---

* ಇವರು ಬರ್ಮಿಂಗ್‌ಹ್ಯಾಮಿನ ಸೆಲ್ಲಿ ಓಕ್, ವುಡ್‌ಬ್ರೋಕ್ ವಸಾಹತುವಿನಲ್ಲಿ ಎಸ್ತರ್ ಮೆನನ್ ಅವರ ಜೊತೆಯಲ್ಲಿ ಇದ್ದವರು. ಗಾಂಧೀಜೀಯ ಸತ್ಯಾಗ್ರಹವನ್ನು ಬಹಳ ಮೆಚ್ಚಿಕೊಂಡಿದ್ದರು.

## ಶಿಲುಬೆ ಸಾರ್ವತ್ರಿಕ ಆಕರ್ಷಣೆಯಿಂದ ಕೂಡಿದೆ.

ಯರವಡಾ ಕೇಂದ್ರ ಸೆರೆಮನೆ
ನನ್ನ ಪ್ರಿಯ ಮಗು, ಮಾರ್ಚ್ ೨೪, ೧೯೩೩

ಸ್ವಲ್ಪ ಕಾಲ ಕಾದ ತರುವಾಯ ನಿನ್ನ ದೀರ್ಘ ಪತ್ರ ಬಂದಿತು. ನಿನ್ನ ಭೇಟಿಯ ವಿವರ ಆಕರ್ಷಕವಾಗಿದೆ. ನಿನ್ನ ಮಾತುಗಳಿಗೆ ನೀನು ಕೊಟ್ಟಿರುವ ಆಸಕ್ತಿ ಮತ್ತು ಶಕ್ತಿಯಿಂದ ನೀನು ಪ್ರಭಾವ ಬೀರದಿರಲು ಸಾಧ್ಯವೇ ಇಲ್ಲ.

ಶಿಲುಬೆಗೆ ಸಾಮಾನ್ಯವಾಗಿ ಕೊಡುವ ಸಂಕುಚಿತ ಅರ್ಥವನ್ನು ಬಿಟ್ಟು ಅದಕ್ಕೆ ವಿಶಾಲವಾದ ಅರ್ಥವನ್ನು ಕೊಟ್ಟ ಕೂಡಲೇ ಅದು ಸಾರ್ವತ್ರಿಕ ಆಕರ್ಷಣೆಯನ್ನು ಹೊಂದುತ್ತದೆ. ಆದಕ್ಕೆ ನೀನು ಹೇಳುವಂತೆ ಅದನ್ನು ಪರಿಭಾವಿಸಲು ಆತ್ಮಚಕ್ಷುಸ್ಸು ಆವಶ್ಯಕ.

ಹೈದರಾಬಾದಿನಿಂದ ಬಂದಿರುವ ಮುಸ್ಲಿಂ ಹುಡುಗನಿಗೆ ನೀನು ತಾಯಿಯಂತೆ ಇದೀಯೆಂದು ಕೇಳಿ ನನಗೆ ಹರ್ಷವಾಯಿತು. ಅವಳ ವಿಷಯ ನಿನಗೆ ಹೆಚ್ಚಾಗಿ ಗೊತ್ತಾದಂತೆ ನನಗೆ ತಿಳಿಸು.

ಇಂಗ್ಲೆಂಡಿನಲ್ಲಿ ಜನ ತಮ್ಮ ತಲೆಯ ಮೇಲೆ ಎಂದೂ ಭಾರವನ್ನು ಹೊರುವರೆಂದು ನನಗೆ ಗೊತ್ತಿರಲಿಲ್ಲ. ನೀನು ಕಂಡುದು ನಿಮ್ಮ ಭಾಗದ ಇಂಗ್ಲೆಂಡಿನಲ್ಲಿ ಸಾಮಾನ್ಯ ಪದ್ಧತಿಯೆ? ತೂಕ ಎಷ್ಟಿರಬಹುದು? ತೂಕ ಹೊರುವ ಪಾತ್ರೆಗಳಾದರೂ ಎಂಥವು? ಎಷ್ಟು ದೂರ ಹೊರಬೇಕು? ಅದರಲ್ಲಿ ಸಾಮಾನ್ಯ ಮನೆಯ ಕಸವನ್ನು ಹೊರುತ್ತಾರೆಯೆ?

ಹ್ಯಾನ್ಸ್* ತನ್ನ ಪ್ರಾರ್ಥನೆಗೆ ಉತ್ತರವನ್ನು ಪಡೆದಿರಬೇಕು.

ನೀನು ಬರುವೆಯೆಂಬ ವಾರ್ತೆ ಕೇಳಿ ಬಹಳ ಹರ್ಷವಾಯಿತೆಂದು ಮೇರಿಯಾ ಬರೆದಿದಾಳೆ. ಅವಳು ದೈಹಿಕವಾಗಿಯೂ ಮಾನಸಿಕವಾಗಿಯೂ ಆಯಾಸಹೊಂದಿದಾಳೆ. ಅವಳು ಪೂರ್ಣವಾಗಿ ಶಿಥಿಲಳಾಗುವ

---

* ಸೆಲ್ಲಿ ಓಕ್‌ನಲ್ಲಿ ಮೆನನ್ ಕುಟುಂಬದೊಂದಿಗೆ ವಾಸಮಾಡುತ್ತಿದ್ದ ಒಬ್ಬ ಜರ್ಮನ್ ಹುಡುಗ.

ಸ್ಥಿತಿಯಲ್ಲಿದಾಳೆ. ಆದಕ್ಕೆ ಮುಂಚೆ ಅವಳು ಕಾಶ್ಮೀರಕ್ಕೆ ಹೋಗಿ ದೇಹಕ್ಕೂ ಮನಸ್ಸಿಗೂ ವಿಶ್ರಾಂತಿಯನ್ನು ಪಡೆಯುವುದು ಅತ್ಯಂತ ಆವಶ್ಯಕ.

ನಮ್ಮೆಲ್ಲರ ಪ್ರೀತಿ ಮತ್ತು ಮಕ್ಕಳಿಗೆ ಮುತ್ತುಗಳು.

ಬಾಪೂ

ಯರವಡಾ ಕೇಂದ್ರ ಸೆರೆಮನೆ
೭-೫-೧೯೩೩

ನನ್ನ ಪ್ರಿಯ ಮಗು,

ನಿನಗೆ ಎಷ್ಟೊಂದು ದುಃಖವಾಗಿದೆಯೆಂದು ನನಗೆ ಗೊತ್ತು. ಮುಂಬರುವ ಉಪವಾಸವನ್ನು ಭಗವಂತನ ಅತ್ಯಂತ ಸಂಪತ್ತಿನ ಕೊಡುಗೆ ಯೆಂದು ನಾನು ಭಾವಿಸುತ್ತೇನೆ. ಇನ್ನು ಹೆಚ್ಚಿಗೆ ಬರೆಯಬಾರದು. ಪರಿಣಾಮ ಏನಾದರೂ ಎಲ್ಲ ಒಳ್ಳೆಯದೆಂದೇ ಭಾವಿಸಬೇಕು.

ನಿಮಗೆ ಪ್ರೀತಿ, ಮಕ್ಕಳಿಗೆ ಮುತ್ತುಗಳು.

ಬಾಪೂ

## ನಾವೆಲ್ಲ ಭಗವಂತನ ಹಸ್ತದಲ್ಲಿ

ನನ್ನ ಪ್ರಿಯ ಮಗು,

ನಿನ್ನ ಹೃದಯಸ್ಪರ್ಶಿ ಪತ್ರ ತಲಪಿತು. ನಿನ್ನ ದೈಹಿಕ ಮತ್ತು ಮಾನಸಿಕ ಕ್ಲೇಶವಿದ್ದರೂ ಹರ್ಷದಿಂದಿರಬೇಕು. ಈಗ ಯಾವುದು ನಿನ್ನ ಅಂತರ್ವಾಣಿಯನ್ನು ತೃಪ್ತಿಪಡಿಸುವುದೋ ಅದನ್ನೇ ಮಾಡಬೇಕು. ಅಂತ್ಯ ದಲ್ಲಿ ಎಲ್ಲ ಸರಿಯಾಗುತ್ತದೆ. ಆದರೆ ನಾವೆಲ್ಲ ಭಗವಂತನ ಹಸ್ತದಲ್ಲಿ. ಅವನ ಆಜ್ಞೆಯಿಲ್ಲದೆ ಒಂದು ಹುಲ್ಲುಗರಿಕೆಯು ಕೊನೆಯೂ ಚಲಿಸದು. ನಮ್ಮ ಇಷ್ಟದಂತೆ ಎಲ್ಲ ನಡೆಸುವಂತಾದರೆ ಪ್ರಪಂಚ ಚೂರುಚೂರಾದೀತು. ಆದುದರಿಂದಲೇ ಆಗಾಗ ನಮ್ಮ ಆಸೆ ನಿರಾಶೆಯಾಗುವುದು ಒಳ್ಳೆಯದು. ಅದು ಭಗವಂತನಲ್ಲಿ ನಮಗಿರುವ ನಿಷ್ಠೆಯನ್ನು ಪರೀಕ್ಷಿಸಿದಂತೆ. ಅವನು ನಮ್ಮ ಇಚ್ಛೆಗಳನ್ನು ಪೂರೈಸದಿದ್ದರೂ ಅವನನ್ನು ನಂಬುತ್ತೇವೆಯೆ ಎಂಬುದರ ಪರೀಕ್ಷೆ. ಆದುದರಿಂದ ಎಲ್ಲ ಹದಗೆಡುವಂತೆ ಕಂಡುಬಂದರೂ ನೀನು ಪೂರ್ಣ ಶಾಂತಿಯನ್ನು ಅನುಭವಿಸಬೇಕೆಂಬುದು ನನ್ನ ಇಚ್ಛೆ.

ನನ್ನ ಪ್ರಾರ್ಥನೆ, ನನ್ನ ಚಿಂತನೆ, ನನ್ನ ಪ್ರೀತಿ ಎಲ್ಲ ನಿನ್ನ ಕಡೆಗಿವೆ. ಉಳಿದುದಕ್ಕೆ ಹರಿಜನ ಪತ್ರಿಕೆಯಲ್ಲಿ ನನ್ನ ವಾರದ ಪತ್ರವಿದೆ. ಅದು ನಿನಗೂ, ನಿನ್ನಂಥ ಅನೇಕ ಗೆಳೆಯರಿಗೂ ಸಂಗಾತಿಗಳಿಗೂ ಆವಶ್ಯಕವಾದುದು.

೧೫-೧೨-೧೯೩೩ ಬಾಪೂ

ನನ್ನ ಪ್ರಿಯ ಮಗು,

ಈ ವೇಳೆಗೆ ತಂಗ್ಯೆ ಪೂರ್ತಿ ಜ್ವರದಿಂದ ಮುಕ್ತಳಾಗಿರುವಳೆಂದು ನಂಬಿದೇನೆ.* ಕೊನೆಗೂ ನಿನಗೆ ಪಾಂಡಿಚೇರಿಯಲ್ಲಿ ಜೇನುತುಪ್ಪ ಸಿಗಲಿಲ್ಲ. ನಿನ್ನೆಯ ದಿವಸ ಒಂದು ಬುಟ್ಟಿ ಹಣ್ಣನ್ನೂ ಜೇನನ್ನೂ ಕಳಿಸಿದೆ. ಮಿಸ್ ಲೆಸ್ಟರ್† ಈಗ ನನ್ನೊಂದಿಗೆ ಇದಾಳೆ. ಅಗಾಥಾ ಹ್ಯಾರಿಸನ್§ ಮಾರ್ಚ್ ಎರಡರಂದು ಹೊರಡುವವಳಿದಾಳೆ.

ನಿಮಗೆಲ್ಲ ಪ್ರೀತಿ.

೨೦-೨-೧೯೩೪ ಬಾಪೂ

ನನ್ನ ಪ್ರಿಯ ಮಗು,

ನಿನ್ನ ಪತ್ರ. ಹಣ್ಣು ನಿನಗೆ ಸುರಕ್ಷಿತವಾಗಿ ಸೇರಿತೆಂದು ಕೇಳಿ ಹರ್ಷವಾಯಿತು. ಮತ್ತೊಂದು ಬುಟ್ಟಿ ಕಳಿಸಿದೆ. ಅಗತ್ಯ ಬಿದ್ದಾಗ ಇನ್ನೂ ಹೆಚ್ಚಿಗೆ ಕೇಳಲು ಹಿಂದೆಗೆಯಬೇಡ.

ನೀನು ಮಾತಿಗೆ ತಪ್ಪಿದೆಯೆಂಬ ತಪ್ಪನ್ನು ಹೊರಿಸಿ ನನ್ನನ್ನೂ ನಿನ್ನೊಂದಿಗೆ ' ಎಂ ' ಸೇರಿಸಿದಾನೆ. ಅದಕ್ಕೆ ನಾನು ಅಚ್ಚರಿಪಡುವುದಿಲ್ಲ. ನನ್ನ ಆತ್ಮ ಶುದ್ಧವಾಗಿದೆ. ಮಕ್ಕಳಿಗೆ ಆಡಿದ ಮಾತಿಗೆ ತಪ್ಪಿದ ಪ್ರಸಂಗ

---

* ಈ ವೇಳೆಗೆ ಮೆನನ್ ದಂಪತಿಗಳು ಇಂಗ್ಲೆಂಡಿನಿಂದ ಹಿಂದಕ್ಕೆ ಬಂದಿದ್ದರು. ಗಾಂಧೀಜೀಯೂ ಸೆರೆಮನೆಯಿಂದ ಬಿಡುಗಡೆಯಾಗಿದ್ದರು.

† ಮ್ಯೂರಿಯಲ್ ಲೆಸ್ಟರ್.

§ ಮತ್ತೊಬ್ಬ ಆಂಗ್ಲ ಮಹಿಳೆ.

ಇದ್ದಿದ್ದರೆ ನೀನು ನನ್ನೊಂದಿಗೆ ಇರಲು ಸಹಿಸುತ್ತಿರಲಿಲ್ಲ. ಆದರೆ 'ಎಂ' ಬರೆದ ಪತ್ರದಿಂದ ನನ್ನ ಮೇಲೂ ಗಾಢವೂ ವಿಶಾಲವೂ ಆದ ತಪ್ಪನ್ನು ಹೊರಿಸಿದ್ದಾಳೆ. ಅವಳೇ ಎಲ್ಲವನ್ನೂ ನಿನ್ನೊಂದಿಗೆ ಚರ್ಚಿಸಿದರೆ ಚೆನ್ನ. ಒಂದುವೇಳೆ ಆ ರೀತಿ ಮಾಡದಿದ್ದರೆ ನೀನೇನೂ ದುಃಖಪಡಬೇಕಾದುದಿಲ್ಲ. ನಾನೂ ಅವಳಿಗೆ ದೀರ್ಘವಾಗಿ ಬರೆದಿದ್ದೇನೆ. ಇಲ್ಲಿಗೆ ಬಂದು ಎಲ್ಲವನ್ನೂ ಪೂರ್ಣವಾಗಿ ಮನಬಿಚ್ಚಿ ಮಾತನಾಡೆಂದು ಆಹ್ವಾನಿಸಿದ್ದೇನೆ.

ಪ್ರೀತಿ,

೨೫–೨–೧೯೩೪ **ಬಾಪೂ**

## ಆತ್ಮತ್ಯಾಗ ಹರ್ಷ ತರಬೇಕು

ನನ್ನ ಪ್ರಿಯ ಮಗು,

ನಿನ್ನ ಎರಡು ಪತ್ರಗಳು. ಈಗ ಮಧ್ಯರಾತ್ರಿ ೧೨–೧೫ರ ಸಮಯ. ಇದನ್ನು ಮೋತೀಹಾರಿಯಿಂದ ಬರೆಯುತ್ತಿದ್ದೇನೆ. ೩ ಘಂಟೆ ಇರಬೇಕೆಂದು ಎದ್ದೆ. ಸರಿರಾತ್ರಿ ೧೨. ನನ್ನ ಮುಂದೆ ರಾಶಿರಾಶಿ ಪತ್ರಗಳಿದ್ದು ಅವುಗಳಿಗೆ ಉತ್ತರ ಬರೆಯದೆ ನಿದ್ದೆ ಬರಲಿಲ್ಲ.

ಈಗ ನಿನ್ನ ಮಕ್ಕಳೆಲ್ಲ ಆರೋಗ್ಯವಾಗಿರಬೇಕು. ನೀನು ಅವುಗಳನ್ನು ಬೇಸಗೆಯಲ್ಲಿ ಅಗತ್ಯವಾಗಿ ಪರ್ವತಧಾಮಕ್ಕೆ ಕರೆದುಕೊಂಡು ಹೋಗಬೇಕು.

ಭಾಷೆ ಕೊಟ್ಟ ವಿಷಯದಲ್ಲಿ* ನೀನು ಹೇಳುವುದು ನನಗೆ ಅರ್ಥವಾಗುತ್ತದೆ. ನೀನು ಮಾತಿಗೆ ತಪ್ಪಿದೆಯೋ ಇಲ್ಲವೋ ಎಂಬುದನ್ನು ನೀನೇ ನಿರ್ಣಯಿಸಿಕೊಳ್ಳಬೇಕು. ನಾನು ಹೋಗದಿದ್ದುದರಿಂದ 'ಎಂ'ಗೆ ಸಿಟ್ಟು ಬಂದಿದೆಯೆಂದು ಕೇಳಿ ದುಃಖವಾಯಿತು. ಅವಳು ನನ್ನ ಆತ್ಮತ್ಯಾಗವನ್ನು ಅರ್ಥಮಾಡಿಕೊಂಡಿದ್ದೇನೆಂದು ತಿಳಿಸಿದಳು. ಅದು ಇಬ್ಬರಿಗೂ ಪರಸ್ಪರ ತ್ಯಾಗವೇ. ಆದರೆ ನಿಜ ಆತ್ಮತ್ಯಾಗ ಎಂದಿಗೂ ದುಃಖವನ್ನಾಗಲೀ ಸಿಟ್ಟನ್ನಾಗಲೀ ಉಂಟುಮಾಡಬಾರದು ; ಅದು ಹರ್ಷವನ್ನೇ ತರಬೇಕು.

ಎಲ್ಲರಿಗೂ ಪ್ರೀತಿ. **ಬಾಪೂ**

---

* ಇದು ಏನೋ ಸ್ಪಷ್ಟವಾಗಿಲ್ಲ.

## ಸಾಕು ನನಗೊಂದು ಹೆಜ್ಜೆ

ಪಾಟ್ನಾ

ನನ್ನ ಪ್ರಿಯ ಮಗು, ಮಾರ್ಚ್ ೩೧, ೧೯೩೪

ನನ್ನನ್ನು ಬಹಳ ಕಾಲ ಕಾಯಿಸಿದ ತರುವಾಯ ನೀನು ಬರೆದ ದೀರ್ಘ ಪತ್ರ ತಲಪಿದೆ. ನಿನ್ನ ಪತ್ರದಲ್ಲಿ ಸಾಕಷ್ಟು ಸತ್ಯಶೋಧನೆಯಿಲ್ಲ —ಎಂದರೆ, ಭಗವಂತನ ಸಂಕಲ್ಪವನ್ನು ಅರಿವುಮಾಡಿಕೊಳ್ಳುವ ಪ್ರಯತ್ನ ಇಲ್ಲ. ದೇವರೇ ಗುಹ್ಯಾತಿಗುಹ್ಯವಾಗಿರುವಾಗ ಅವನ ಯಾವ ಕ್ರಿಯೆ ಯಾದರೂ ನಮಗೇಕೆ ಗೊಂದಲವನ್ನುಂಟುಮಾಡಬೇಕು ? ನಮ್ಮ ಅಪೇಕ್ಷೆ ಯಂತೆ ಅವನು ನಡೆದರೆ ಅಥವಾ ಅವನು ನಮ್ಮಂತೆಯೇ ನಡೆದರೆ ನಾವು ಅವನಿಂದ ಸೃಷ್ಟಿಯಾದವರೂ ಅಲ್ಲ, ಅವನು ನಮ್ಮ ಸೃಷ್ಟಿಕರ್ತನೂ ಅಲ್ಲ. ನಮ್ಮ ಸುತ್ತ ಅಗಾಧವಾಗಿ ಆವರಿಸಿರುವ ಕತ್ತಲು ನಮಗೊಂದು ಶಾಪವಲ್ಲ, ಅದೊಂದು ವರ. ನಾವು ನಮ್ಮ ಮುಂದಿನ ಹೆಜ್ಜೆಯನ್ನು ಕಂಡುಕೊಳ್ಳಲು ಅವನು ಶಕ್ತಿಯನ್ನು ನೀಡಿದಾನೆ. ಸ್ವರ್ಗದ ದಿವ್ಯ ಬೆಳಕು ನಮಗೆ ಆ ಹೆಜ್ಜೆಯನ್ನು ತೋರಿಸಿದರೆ ಸಾಕು. ಆಗ ನಾವು ನ್ಯೂಮನ್‌ನೊಡನೆ* 'ಸಾಕು ನನಗೊಂದು ಹೆಜ್ಜೆ' ಎಂದು ಗಾಯನಮಾಡಬಹುದು. ನಮ್ಮ ಹಿಂದಿನ ಅನುಭವದಿಂದ ಮುಂದಿನ ಹೆಜ್ಜೆ ಯಾವಾಗಲೂ ದೃಷ್ಟಿಗೆ ಗೋಚರವಾಗುವುದೆಂದು ನಾವು ನೆಚ್ಚಿರಬಹುದು. ಯಾವುದನ್ನು ನಾವು ಅಗಾಧವಾದ ಕತ್ತಲೆಂದು ಭಾವಿಸಿರುವೆವೋ ಅದು ಆ ರೀತಿ ಇಲ್ಲದಿರುವುದು ನಮಗೆ ಭಾಸವಾಗುತ್ತದೆ. ಆದರೆ ತಾಳ್ಮೆತಪ್ಪಿ ಆ ಒಂದು ಹೆಜ್ಜೆಗಿಂತ ಮುಂದೆ ನೋಡಲು ನಾವು ಯತ್ನಿಸಿದರೆ ಆಗ ಅದು ಅಗಾಧವಾಗಿಯೇ ಕಾಣುತ್ತದೆ. ಆದರೆ ದೇವರು ಪ್ರೇಮಮಯನಾಗಿರುವುದರಿಂದ ಅವನು ಆಗೊಮ್ಮೆ ಈಗೊಮ್ಮೆ ಕಳಿಸುವ ಭೌತಿಕ ದುರಂತಗಳೂ ಅಗೋಚರವಾಗಿ

---

* ಕಾರ್ಡಿನಲ್ ನ್ಯೂಮನ್ ; 'Lead Kindly Light'—'ಕರುಣಾಳು ಬಾ ಬೆಳಕೆ' ಎಂಬ ಹೃದಯಸ್ಪರ್ಶಿ ಗೀತೆಯನ್ನು ಬರೆದಿದಾನೆ. 'ಸಾಕು ನನಗೊಂದು ಹೆಜ್ಜೆ' ಎನ್ನುವುದು ಅದರಲ್ಲಿ ಬರುತ್ತದೆ. ಇದು ಗಾಂಧೀಜೀಗೆ ಬಹಳ ಪ್ರಿಯವಾಗಿತ್ತು.

ವರವಾಗಿ ಪರಿಣಮಿಸುತ್ತವೆ, ಅವುಗಳನ್ನು ಆತ್ಮಪರಿಶೀಲನೆಗೂ ಮತ್ತು ಆತ್ಮಶುದ್ಧಿಗೂ ಒಂದು ಎಚ್ಚರಿಕೆಯೆಂದು ಭಾವಿಸುವವರಿಗೆ.

ಮಕ್ಕಳ ವಿಷಯವಾಗಿ ನೀನು ಹೇಳುವುದು ನನಗೆ ಅರ್ಥವಾಗುತ್ತದೆ. ನೀನು ಅವುಗಳೊಂದಿಗೆ ಕೊಡೈಕೆನಾಲ್‌ನಲ್ಲಿರುವುದು† ನನಗೆ ಹರ್ಷವಾಗಿದೆ. ಅಗಾಥಾ ಹ್ಯಾರಿಸನ್ ನನ್ನೊಡನೆ ಇದ್ದಾಳೆ. ಭಾರತೀಯ ಜೀವನಕ್ಕೆ ಹೊಂದಿಕೊಂಡಿಲ್ಲವಾದ್ದರಿಂದ ಅವಳಿಗೆ ಒಳ್ಳೆ ಪರೀಕ್ಷಾಸಮಯವಾಗಿದೆ. ಆದರೆ ಅದಷ್ಟು ಸ್ವಲ್ಪ ಕಾಲದಲ್ಲಿ ಅವಳು ಎಲ್ಲವನ್ನೂ ಕಲಿಯಬೇಕೆಂದು ಅಪೇಕ್ಷಿಸುವುದರಿಂದ ಎಲ್ಲವನ್ನೂ ಧೈರ್ಯವಾಗಿ ಎದುರಿಸುತ್ತಿದ್ದಾಳೆ. ಮ್ಯೂರಿಯಲ್ ಲೆಸ್ಟರ್‌ಳನ್ನು ನಾನು ಪೂನಾದಲ್ಲಿ ಬಿಟ್ಟೆ. ಅವಳು ಆರೋಗ್ಯವಾಗಿದ್ದಳು. ನಾನು ಏಪ್ರಿಲ್ ೪ರಂದು ಪಾಟ್ನಾಕ್ಕೆ ಮತ್ತೆ ಹೋಗಿ, ಅಲ್ಲಿಂದ ಅಸ್ಸಾಮಿಗೆ ೭ರಂದು ಹೊರಡುತ್ತೇನೆ. ೨೫ರಂದು ಬೀಹಾರಕ್ಕೆ ಮರಳಿ ಹೋಗಿ ಒಂದು ವಾರ ಇದ್ದು, ಒರಿಸ್ಸಾಕ್ಕೆ ಹೋಗಿ ತರುವಾಯ ಪುನಃ ಬಿಹಾರಿಗೆ ಹೋಗುತ್ತೇನೆ. ನೀನು ವರ್ಧಾ ವಿಳಾಸಕ್ಕೆ ಬರೆಯುತ್ತಿರು.

ನಿನಗೆ ಪ್ರೀತಿ, ಮಕ್ಕಳಿಗೆ ಮುತ್ತು. ಅವಕ್ಕೆ ಇಂದು ಬರೆಯಲಾರೆ.

**ಬಾಪೂ**

ನನ್ನ ಪ್ರಿಯ ಮಗು,

ನಾನು ಬೆಳಗಿನ ಜಾವ ೨ ಘಂಟೆಗೆ ಎದ್ದರೂ ಪತ್ರವ್ಯವಹಾರ ಮುಗಿಸಲು ಸಾಧ್ಯವಾಗಿಲ್ಲ. ನಿನ್ನ ಹುಟ್ಟುಹಬ್ಬದ ದಿವಸ ಕೇವಲ ಒಂದು ಪೋಸ್ಟ್ ಕಾರ್ಡನ್ನು ಬರೆಯುವಷ್ಟು ಮಾತ್ರ ವೇಳೆ ಇದೆ. ಮಕ್ಕಳಿಗೆ ಪೆಟ್ಟಿಗೆ ಚರಕಾವನ್ನು ನಾನಿನ್ನೂ ಕಳಿಸಬೇಕಾಗಿದೆ. ಅವಕ್ಕೆ ನನ್ನ ಪ್ರೀತಿ ಮತ್ತು ಮುತ್ತುಗಳು. ಮೀರಾ ಹೊರಡಬೇಕೆಂದು ತತ್‌ಕ್ಷಣ ನಿರ್ಧರಿಸಿ ಹೊರಟೇಬಿಟ್ಟಳು.§

೩೦-೪-೧೯೩೪ ಪ್ರೀತಿ,

**ಬಾಪೂ**

---

† ಒಂದು ಆರೋಗ್ಯಧಾಮ.

§ ಇಂಗ್ಲೆಂಡಿಗೆ.

ವರ್ಧಾ
ನನ್ನ ಪ್ರಿಯ ಮಗು, ಸೆಪ್ಟೆಂಬರ್ ೬, ೧೯೩೪

ನಿನ್ನ ಪತ್ರಕ್ಕೆ ನಾನೇ ಉತ್ತರ ಬರೆಯಲು ಸಾಧ್ಯವಾದೀತೆಂದುಕೊಂಡು ಈವರೆಗೂ ತಾಳಿದೆ. ಆದರೆ ಆ ಹರ್ಷವನ್ನು ತ್ಯಜಿಸಿ, ಈ ಪತ್ರವನ್ನು ನಾನು ಹೇಳಿ ಬರೆಯಿಸುತ್ತಿದೇನೆ. ಉತ್ತರ ಬರೆಯದೆ ನಿಂತಿರುವುದು ಬೇಕಾದಷ್ಟಿದೆ.

ನಿದರ್ಶನ ಬೇಕೆನ್ನುವುದಾದರೆ, ದೇವರು ದಿನವೂ ನನಗೆ ಅವನ ಹಿರಿತನವನ್ನೂ ಒಳ್ಳೆಯತನವನ್ನೂ ತೋರಿಸುತ್ತಿದಾನೆ. ಈ ಗೀತೆಯನ್ನು ನೆನಪಿಗೆ ತಂದುಕೋ: 'ನಿನಗೆ ದೊರಕಿರುವ ಅನೇಕ ವರಗಳನ್ನು ಎಣಿಕೆ ಮಾಡು.' ಅದು ಮೂಡಿ ಮತ್ತು ಸ್ಯಾಂಕಿಯವರ ಪ್ರಾರ್ಥನಾಗೀತೆಗಳ ಪುಸ್ತಕದಲ್ಲಿವೆಯೆಂದು ನೆನಪಿದೆ. ನಾನು ವರಗಳನ್ನೂ ಎಣಿಸಲಾರೆ; ಅವು ಅನಂತ. ದೇವರು ಕೊಡುವ ದುಃಖಗಳೂ ತಾಪಗಳೂ ವರವಾಗಿ ಪರಿಣಮಿಸುತ್ತವೆ. ನಮಗೆ ಅವನ ಪ್ರೇಮ ಪರಿಚಯವಾದರೆ ತನ್ನ ಸೃಷ್ಟಿಗೆ ವರಗಳನ್ನಲ್ಲದೆ ಎಂದಿಗೂ ಶಾಪವನ್ನು ಕೊಡುವುದಿಲ್ಲವೆಂದು ಗೊತ್ತಾಗುತ್ತದೆ.

ತಂಗ್ಯೆ ಈಗ ಪೂರ್ಣ ಆರೋಗ್ಯವಾಗಿರಬೇಕು. ಮಕ್ಕಳು ಚೆನ್ನಾಗಿ ಬೆಳೆಯುತ್ತಿರಬೇಕು. ಈ ವೇಳೆಗೆ ಚರಕಾ ತಲಪಿರಬೇಕು.

ನಾನು ಉತ್ತಮಗೊಳ್ಳುತ್ತಿದೇನೆ. ನನ್ನ ತೂಕ ೯೪ ಪೌಂಡು ಗಳಿಂದ ೧೦೧ ಪೌಂಡುಗಳಿಗೆ ಬಂದಿದೆ. ಸಾಕಷ್ಟು ಕೆಲಸ ಮಾಡುತ್ತಿದೇನೆ. ತಪ್ಪದೆ ವ್ಯಾಯಾಮ ಮಾಡುತ್ತೇನೆ.

ಮೀರಾ ಲಂಡನ್ನಿನಲ್ಲಿ ಚೆನ್ನಾಗಿ ಕೆಲಸ ಮಾಡುತ್ತಿದಾಳೆ. ಅವಳು ಅಕ್ಟೋಬರ್ ಮಾಹೆಯಲ್ಲಿ ಹಿಂತಿರುಗುವ ನಿರೀಕ್ಷೆಯಿದೆ. ಆಂಡ್ರೂಸ್ ಇಲ್ಲಿ ಒಂದು ವಾರವಿದ್ದು ಈಗ ಸಿಮ್ಲಾಕ್ಕೆ ಹೋಗಿದಾನೆ. ಅವನು ಇಂಗ್ಲೆಂಡಿಗೆ ಪ್ರಯಾಣ ಬೆಳೆಸುವ ಮುನ್ನ ವರ್ಧಾಕ್ಕೆ ಬಂದು ಹೋಗು ತ್ತಾನೆ. ಅವನು ಚೆನ್ನಾಗಿ ಆರೋಗ್ಯವಾಗಿದ್ದನು. ದಕ್ಷಿಣ ಆಫ್ರಿಕಾದಿಂದ ಒಬ್ಬ ವೆಲ್ಸ್ ಕಮ್ಮಾರನನ್ನು ತನ್ನೊಂದಿಗೆ ಕರೆತಂದಿದಾನೆ. ಅವನ ಹೆಸರು

ಮಿ. ಜೋನ್ಸ್; ಈಚೆಗೆ ಆಕ್ಸ್‌ಫರ್ಡ್ ಚಳುವಳಿಯನ್ನು* ಸೇರಿದಾನೆ. ತಾನೊಬ್ಬ ಪರಿವರ್ತನೆಹೊಂದಿದವನೆಂಬುದಾಗಿ ಭಾವಿಸುತ್ತಾನೆ. ನಾವೆಲ್ಲ ಅವನನ್ನು ಬಹಳ ಮೆಚ್ಚಿದೆವು. ಆಂಡ್ರೂಸ್ ಇಂಗ್ಲೆಂಡಿಗೆ ಹೋದಾಗ ಅವನು ದಕ್ಷಿಣ ಆಫ್ರಿಕಾಕ್ಕೆ ಹಿಂದಿರುಗುತ್ತಾನೆ.

'ಪಿ' ಮತ್ತು 'ಎಂ' ಇಲ್ಲಿದಾರೆ. 'ಬಾ' ರಾಮದಾಸನೊಡನೆ ಸಾಬರಮತಿಗೆ ಹೋಗಿದಾಳೆ. ರಾಮದಾಸನಿಗೆ ವಿಶ್ರಾಂತಿ ಮತ್ತು ಚಿಕಿತ್ಸೆ ಆವಶ್ಯಕವಾಗಿದೆ. 'ಡಿ' ಇಲ್ಲಿ ಕೆಲವು ದಿವಸ ಇದ್ದರು. ಅವರು ನಿನ್ನೆ ಬೊಂಬಾಯಿಗೆ ಪ್ರಯಾಣ ಬೆಳೆಸಿದರು. ೮ರಂದು ನಡೆಯುವ ಕಾಂಗ್ರೆಸ್ ಕಾರ್ಯಕಾರೀ ಸಮಿತಿಗೆ ಅವರು ಬರಬಹುದು. ಇದು ನಮ್ಮ ಕುಟುಂಬದ ಆಯವ್ಯಯವೆಂದು ನೀನು ಒಪ್ಪುವೆ. ಈವರೆಗೆ ಮಾಡಿದುದಕ್ಕಿಂತಲೂ ಹೆಚ್ಚು ಕ್ರಮವಾಗಿ ನೀನು ಬರೆಯಬೇಕು. ಸ್ವಲ್ಪ ಕಾಲದವರೆಗೆ ನಾನು ವರ್ಧಾ ಬಿಟ್ಟು ಹೋಗುವುದಿಲ್ಲ.

ನಿಮಗೆಲ್ಲ ಪ್ರೀತಿ.

ಬಾಪೂ

ವರ್ಧಾ

ಸೆಪ್ಟೆಂಬರ್ ೨೩, ೧೯೩೪

ನನ್ನ ಪ್ರಿಯ ಮಗು,

ನಿನ್ನ ಕಾಗದವೂ, ಈಗತಾನೆ ಮಕ್ಕಳಿಂದಲೂ ಬಂದಿವೆ. ಅವರು ಸ್ಥಳವನ್ನು ಪ್ರೀತಿಸುವುದು ಸಂತೋಷಕರ. ನೀನು ನಿನ್ನ ಭವನಕ್ಕೆ 'Vision Bungalow' (ಭವನದರ್ಶಿನೀ) ಎಂದು ಕರೆದಿರುವುದು ಚೆನ್ನಾಗಿಯೂ ಅರ್ಥಪೂರ್ಣವಾಗಿಯೂ ಇದೆ.

ಒಂದು ವಾರದ ಹಿಂದೆ ಆಂಡ್ರೂಸ್ ಇಲ್ಲಿಯೇ ಇದ್ದ. ಮಂಗಳವಾರ ಶಾಂತಿನಿಕೇತನದಿಂದ ಹಿಂದಕ್ಕೆ ಬರುತ್ತಾನೆ. ಕಾಂಗ್ರೆಸ್ ಅಧಿವೇಶನದ ವೇಳೆಗೆ ಮೀರಾ ಬೊಂಬಾಯಿಯಲ್ಲಿರಲು ನಿರೀಕ್ಷಿಸುತ್ತಾಳೆ.

ರಾಮದಾಸನಿಗೆ ಜ್ವರ ಬಂದು ನಿಶ್ಶಕ್ತಿಯಾಗಿತ್ತು. ಈಗ ಉತ್ತಮ ವಾಗಿದಾನೆ.

---

* ಇದೊಂದು ಅಸಹಕಾರ ಮಾದರಿಯ ಚಳುವಳಿ.

ರಾಟೆಯನ್ನು ನಿನಗೆ ಕಳಿಸಲಾಗಿತ್ತು. ಅದು ತಲಪಿದೆಯೆಂದು ನಂಬಿದೇನೆ. ನೀನು ಅದರ ಮೇಲೆ ಎಷ್ಟು ಕಲಿತಿದೀಯೆಂಬುದನ್ನು ತಿಳಿಯ ಬಯಸುತ್ತೇನೆ.

ಈ ಸಮಯದಲ್ಲಿ ನೀನು ಇಲ್ಲಿದ್ದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು. ವಾತಾವರಣ ಬಹಳ ಸೊಗಸಾಗಿದೆ—ತುಂಬ ಚಳಿ, ಅಧಿಕವಾದ ಸೂರ್ಯ ರಶ್ಮಿಯಿಲ್ಲದಿದ್ದರೂ ಸಾಕಷ್ಟಿದೆ.

ನಿಮಗೆಲ್ಲ ಪ್ರೀತಿ, ಮಕ್ಕಳಿಗೆ ಮುತ್ತುಗಳು.

ಬಾಪೂ

ವರ್ಧಾ
ನವೆಂಬರ್ ೧೪, ೧೯೩೪

ನನ್ನ ಪ್ರಿಯ ಮಗು,

ನಿನ್ನ ಪತ್ರ. ನ್ಯಾನ್ ಆರೋಗ್ಯವಂತಳಾಗಿದಾಳೆಂದೂ ಅವಳು ಡೆನ್ಮಾರ್ಕಿಗೆ ಹೋಗಬೇಕಾಗಿಲ್ಲವೆಂದೂ ಕೇಳಿ ಹರ್ಷವಾಯಿತು. ಮಗುವಿಗೆ ತಾಯಿಮಡಿಲಿಗಿಂತ ಉತ್ತಮವಾದ ಜಾಗ ಮತ್ತೊಂದಿಲ್ಲ. ಆದರೆ ಅದೊಂದು ಆದರ್ಶ ಸ್ಥಿತಿ. ನಾವೆಲ್ಲ ಅದಕ್ಕಾಗಿ ಶ್ರಮಿಸಬೇಕು, ಅದು ದೊರಕುವುದು ವಿಫಲವಾದರೂ ಚಿಂತೆಯಿಲ್ಲ.

ಮೇರಿಯಾ ವಿಚಾರ ಕೇಳಿ ವ್ಯಸನವಾಯಿತು. ನಿನ್ನ ಹೊರತು ಬೇರೆ ಯಾರು ಅವಳ ಶಾಲೆಯಲ್ಲಿ ಕೆಲಸ ಮಾಡಬಲ್ಲರು? ಸದ್ಯಕ್ಕಂತೂ ನಿನ್ನ ಪ್ರಶ್ನೆಯೇ ಇಲ್ಲ. ಅವಳು ಡೆನ್ಮಾರ್ಕಿಗೆ ಹೋಗಿ ತನ್ನ ಆರೋಗ್ಯವನ್ನು ಉತ್ತಮಪಡಿಸಿಕೊಳ್ಳಲು ಸಾಧ್ಯವಾಗಿದ್ದರೆ ಚೆನ್ನಾಗಿತ್ತು.

ಹರಿಜನ ದೇವಾಲಯ ಮಸೂದೆಯ ವಿಷಯವಾಗಿ ನಿನ್ನಿಂದ ಪತ್ರ ನನಗೆ ಬಂದುದು ಅರಿವಿಲ್ಲ. ನಾನು ವರ್ಧಾಕ್ಕೆ ಬಂದಮೇಲೆ ಅದನ್ನು ಕಳಿಸಿದ್ದೆಯಾ? ನೀನು ವಿಚಾರಸರಣಿಯನ್ನು ನೆನಪಿನಿಂದ ಕೊಡುವೆಯಾದರೆ ನಾನು ಉತ್ತರವೀಯಲು ಯತ್ನಿಸುತ್ತೇನೆ.

ಜಾಕ್ ಹಾಯ್‌ಲ್ಯಾಂಡ್ ಅವರ ಮಗನ ಮರಣವಾರ್ತೆಯನ್ನು ನಾನು ಕೇಳಿದ್ದೆ. ಆಗ ಆಂಡ್ರೂಸ್ ಇಲ್ಲಿಯೇ ಇದ್ದ. ನಾವಿಬ್ಬರೂ ಜೊತೆ

ಕೂಡಿ ನಮ್ಮ ವ್ಯಸನ ಸೂಚಿಸುವ ಸಮುದ್ರದ ತಾರನ್ನು ಕಳಿಸಿದೆವು. ಜಾಕ್ ಹಾಯ್‌ಲ್ಯಾಂಡ್‌ರಿಂದ ಮರಣದ ಪೂರ್ಣ ವೃತ್ತಾಂತ ತಿಳಿಯಿತು. ಅದೊಂದು ದುಃಖಕರ ಸಂಗತಿ.

ಮೀರಾ ೨೨ರಂದು ಬರುತ್ತಾಳೆ. ಅವಳೊಂದಿಗೆ ಲಂಡನ್ನಿನಲ್ಲಿ ವ್ಯಾಸಂಗ ಮಾಡುತ್ತಿರುವ ' ಕೆ. ಎಸ್.'ರವರ ಮಗಳನ್ನೂ ಕರೆದುಕೊಂಡು ಬರುತ್ತಾಳೆ. ಮೇರಿಯೊಬಾರ್* ತನ್ನ ಗ್ರಾಮದಿಂದ ಇಲ್ಲಿಗೆ ಬಂದಿದ್ದಾಳೆ. ಇಂಗ್ಲೆಂಡಿನಿಂದ ಬಂದಿರುವ ಅವಳ ಸಂಗಾತಿಯೊಬ್ಬರೂ ಇದ್ದಾರೆ. ಆಶ್ರಮ ಜೀವನ ಮೇರಿಗೆ ಬಹಳ ಚೆನ್ನಾಗಿ ಹೊಂದಿಬಿಟ್ಟಿದೆ. ಈಗ ಇಲ್ಲಿಯ ವಾತಾವರಣ ಅತ್ಯಂತ ಸೊಗಸಾಗಿದೆ. ನಾಲ್ಕೈದು ದಿವಸಗಳ ಹಿಂದೆ ' ಬಾ ' ಜೊತೆಗೂಡಿ ರಾಮದಾಸ್ ಹಿಂದಿರುಗಿದ. ಅವನು ಬಹಳ ನಿಶ್ಶಕ್ತನಾಗಿದ್ದಾನೆ. ಆದರೆ ಅವನು ಇಲ್ಲಿ ಶಕ್ತಿಗೂಡಿಕೊಂಡಾನೆಂದು ನನಗೆ ನಂಬಿಕೆ. ಡಿಸೆಂಬರ್ ತಿಂಗಳಲ್ಲಿ ಒಂದು ಪಕ್ಷಕಾಲ ಆಂಡ್ರೂಸ್ ಇಲ್ಲಿರುವ ನಿರೀಕ್ಷೆಯಿದೆ.

ನಿಮಗೆಲ್ಲ ಪ್ರೀತಿ.

ಬಾಪೂ

ನನ್ನ ಪ್ರಿಯ ಮಗು,

ಈ ಪತ್ರ ಸದಾಶಯವನ್ನು ಗಾಢಗೊಳಿಸುವುದಾದರೆ ಇದು ನಿನ್ನ ಸವಾಲುಗಳಿಗೆ ಪ್ರತಿಕ್ರಿಯೆ. ಇಲ್ಲಿ ಕೊರೆಯುವ ಚಳಿ. ೪ ಘಂಟೆಯ ಪ್ರಾರ್ಥನೆಗೆ ಸೂಚನೆ ಆಗಿದೆ.

ಹರಿಜನರ ಅಧ್ಯಾತ್ಮತೃಪ್ತಿಗೆ ಕೇವಲ ದೇವಾಲಯ ಪ್ರವೇಶಕ್ಕಿಂತ ಇನ್ನೂ ಹೆಚ್ಚು ಅಂಶಗಳು ಅಗತ್ಯ. ದೇವಾಲಯ ಪ್ರವೇಶ ದರ್ಪದಿಂದ ಕೂಡಿದ ಸವರ್ಣ ಹಿಂದೂಗಳ ಕೊಡುಗೆಯೇ ಹೊರತು ಅವರ ಅಧ್ಯಾತ್ಮ ಅವಶ್ಯಕತೆಯಲ್ಲ. ಸವರ್ಣ ಹಿಂದೂಗಳು ದೇವಾಲಯದಲ್ಲಿ ಪೂಜೆ ಮಾಡಲು ಯಾವ ಹಕ್ಕನ್ನು ಹೊಂದಿರುವರೋ ಅದನ್ನು ತಮ್ಮಂತೆಯೇ

* ಅಸ್ಸಾಮಿನ ಗಿರಿಜನರೊಂದಿಗೆ ಸೇವೆಮಾಡುತ್ತಿದ್ದ ಒಬ್ಬ ಆಂಗ್ಲ ಮಹಿಳೆ.

ಮಾನವರೇ ಆದ ಹರಿಜನರಿಗೆ ಕೊಟ್ಟ ಹೊರತು ಅವರ ಅಧ್ಯಾತ್ಮಕ್ಕೆ ಗಾಂಭೀರ್ಯವಿಲ್ಲ. ಇದು ಸುಸ್ಪಷ್ಟವಲ್ಲವೆ?

ಪ್ರೀತಿ ಮತ್ತು ಮಕ್ಕಳಿಗೆ ಮುತ್ತುಗಳು.

ನಿನ್ನ,
**ಬಾಪೂ**

ಡಿಲ್ಲಿಯಲ್ಲಿ ೨೦ರವರೆಗೂ ಇದ್ದೇನು; ಬಹಳ ಹೆಚ್ಚಿದರೆ ೨೮ರವರೆಗೆ. ಅನಂತರ ವರ್ಧಾ.

ಡಿಲ್ಲಿ
ನನ್ನ ಪ್ರಿಯ ಮಗು, ಜನವರಿ ೧೭, ೧೯೩೫

ನೀನೂ ಮಕ್ಕಳೂ ಬರೆದ ಪತ್ರಗಳು ತಲಪಿದವು. ತಂಗ್ಯೆ ಜಾಣ ಹುಡುಗಿ. ಆದುದರಿಂದ ಬಂದ ದುಃಖವನ್ನೆಲ್ಲ† ದೇವರಿಗೆ ಅರ್ಪಿಸುವ ಬುದ್ಧಿ ಕಲಿತಿದಾಳೆ. ನಮಗೆ ಅರಿವಿರುವ ತಪ್ಪಿನಿಂದಲೇ ಜನಿಸುವ ದುಃಖದಿಂದ ಬರುವ ತ್ಯಾಗಬುದ್ಧಿ ಕೆಟ್ಟದು; ಅವು ನಮಗೆ ಅರಿವಿಲ್ಲದಂತೆ ಬಂದು, ಅವಕ್ಕೆ ಕಾರಣವನ್ನೂ ನಾವು ಅರಿಯಲಾರೆವಾದರೆ, ಅಂಥ ತ್ಯಾಗ ಬುದ್ಧಿ ಒಳ್ಳೆಯದು. ಸತತ ಪ್ರಯತ್ನ ಹಾಗೂ ಭಗವಂತನ ಸಂಕಲ್ಪಕ್ಕೆ ಶರಣಾಗುವುದು ಎರಡೂ ಜೊತೆಜೊತೆಯಲ್ಲೇ ನಡೆಯಬೇಕು.

ನಾನು ನಡೆದಾಡಲು ನನ್ನ ಪಾದಗಳು ಅವಕಾಶವೀಯವು, ಏಕೆಂದರೆ ಸ್ವಲ್ಪ ಪ್ರಯತ್ನ ಮಾಡಿದ ಕೂಡಲೇ ಬಿರುಕು ಬಿಡುತ್ತವೆ.

ಸಿ. ಎಫ್. ಎ.ಗೆ ವಿರಾಮವೇ ಇರಲಿಲ್ಲವಾದ್ದರಿಂದ ಅವನು ನಿನಗೆ ಬರೆಯಲಾಗಲಿಲ್ಲ. ಅವನು ಬಂದದ್ದೂ ಹೊರಟದ್ದೇ. ಜಹಜು ಸಿಕ್ಕಿತೋ ಹೇಗೋ.

ಎ.ಐ.ಎಸ್.ಎ.§ ಮತ್ತು ಎ.ಐ.ವಿ.ಐ.ಎ.§ ಈ ಎರಡೂ ಸಂಸ್ಥೆಗಳು ಪೂರ್ಣ ರಾಜನೀತಿಯಿಂದ ದೂರವಾದ ಸಂಸ್ಥೆಗಳು.

---

† ತಂಗ್ಯೆ ಆರೋಗ್ಯ ಬಹಳ ಕೆಟ್ಟಿತ್ತು.

§ ಅಖಿಲ ಭಾರತ ನೂಲುವವರ ಸಂಘ ಮತ್ತು ಅಖಿಲ ಭಾರತ ಗ್ರಾಮೋದ್ಯೋಗ ಸಂಘ.

ಎಂದಾದರೂ ನೀನು ವರ್ಧಾಕ್ಕೆ ಬರಬೇಕು. ನಿನಗೆ ಡಿಲ್ಲಿ ಬಹಳ ದೂರವಿದೆ. ನಾನು ೨೮ನೇ ತಾರೀಖಾದರೂ ಇಲ್ಲಿಂದ ಹೊರಡುತ್ತೇನೆ. ಇಲ್ಲಿ ಅತ್ಯಂತ ಚಳಿಯನ್ನು ಅನುಭವಿಸುತ್ತಿದೇನೆ.

ಪ್ರೀತಿ,

ಬಾಪೂ

ನನ್ನ ಪ್ರಿಯ ಮಗು,

ನಿನ್ನ ಪತ್ರ. ಅದು ದೀರ್ಘವಾಯಿತೆಂದು ಕ್ಷಮೆ ಏಕೆ ಕೇಳುವೆ? ನೀನೇನು ಬಹಳ ಆಗಾಗ ಬರೆಯುವುದಿಲ್ಲವಲ್ಲ.

ಶ್ರೀಮತಿ 'ಎಸ್' ಇಲ್ಲಿದಾಳೆ. ಆಕೆ ಒಳ್ಳೆಯವರು, ಸದ್ಭಾವನೆಯವರು. ನಿನ್ನ ಸಂಗಡ ಇದ್ದುದಾಗಿ ನನಗೆ ಹೇಳಿದರು.

ನಿನ್ನ ಮಕ್ಕಳು ಆರೋಗ್ಯದ ಸಲುವಾಗಿ ಕೊಡೈನಲ್ಲಿಯೇ* ಇರಬೇಕು. ಮೇರಿಯಾ ಅಂತೂ ಸ್ವದೇಶಕ್ಕೆ† ಹೋಗಲಾರಳು. ಹೃತ್ಪೂರ್ವಕವಾಗಿ ಭಾರತವನ್ನು ಪ್ರೀತಿಸುವುದು ಸುಲಭ ಕಾರ್ಯವಲ್ಲ.

'ಎನ್'ಗೆ ನೀನು ಬರೆಯುವಾಗ ನನ್ನ ಪ್ರೀತಿ ತಿಳಿಸು.

ಸಿ.ಎಫ್.ಎ. ದಕ್ಷಿಣ ಆಫ್ರಿಕಾದಲ್ಲಿದಾನೆ. ಅವನು ಏಪ್ರಿಲ್ ತಿಂಗಳಲ್ಲಿ ಭಾರತಕ್ಕೆ ಬರುವ ನಿರೀಕ್ಷೆಯಿದೆ.

ಮೀರಾ ಒಂದು ಮೋಟಾರ್‌ಕಾರ್ ಅಪಘಾತಕ್ಕೆ ಸಿಕ್ಕಿ ದೈವವಶಾತ್ ಪಾರಾದಳು. ಈಗ ಆರೋಗ್ಯವಾಗಿದಾಳೆ.

ನಮ್ಮೆಲ್ಲರ ಪ್ರೀತಿ.

ವರ್ಧಾ ಬಾಪೂ

೨೫–೨–೧೯೩೫

ನನ್ನ ಪ್ರಿಯ ಮಗು,

ನಿನ್ನ ಅಮೂಲ್ಯ ಪತ್ರವನ್ನು ಓದಿ ಈಗತಾನೆ ಮುಗಿಸಿದೇನೆ. ಅದನ್ನು ಓದುತ್ತಿದ್ದಾಗ ನನ್ನ ಹೃದಯ ವ್ಯಸನಭರಿತವಾಗಿತ್ತು. 'ದಿಕ್ಕೆಟ್ರ

---

* ಕೊಡೈಕೆನಾಲ್—ಆರೋಗ್ಯಧಾಮ.

† ಡೆನ್ಮಾರ್ಕ್.

ವಾನುಕ್ಕು ದೈವಮೇ ತುಣೈ '—ಎಂಬ ತಮಿಳು ಗಾದೆ ನಿನಗೆ ಗೊತ್ತೆ ? 'ದಿಕ್ಕೆಟ್ಟವರಿಗೆ ದೇವರೇ ಗತಿ' ಎಂದು ಅದರ ಅರ್ಥ. ಅವನೇ ನಿನಗೆ ಸಹಾಯಮಾಡಿ, ಸುಖ ನೀಡುವನು. ಅವನ ದಯೆಯಲ್ಲಿಯೂ ಮತ್ತು ದುಃಖಪರಿಹಾರಕ ಶಕ್ತಿಯಲ್ಲಿಯೂ ನೀನು ನಂಬಿಕೆ ತಪ್ಪಬಾರದು.

ನೀನು ಇನ್ನೂ ಎಷ್ಟೋ ಮುಂಚೆ ಬರೆಯಬೇಕಾಗಿತ್ತು. ಇಲ್ಲದೆ ಇರುವುದಕ್ಕಿಂತ ತಡವಾದರೂ ಚಿಂತೆಯಿಲ್ಲ.

ನೀನೂ ನಿನ್ನ ಮಕ್ಕಳೂ ನನ್ನೊಂದಿಗೆ ಇರುವುದು ನನಗೆ ಪ್ರಿಯವೇ. ಬಹುಶಃ ಅವರಿಗೆ ಹವಾ ಮತ್ತು ಸನ್ನಿವೇಶ ಹೊಂದಲಾರದು. ನಿನಗೆ ಬರೆಯಬೇಕೆನಿಸಿದಾಗಲೆಲ್ಲ ಬರೆಯಲು ಶಂಕೆಪಡಬೇಡ. ನಿನ್ನ ಪತ್ರಗಳಿಗೆ ಗಮನ ಕೊಡುವಷ್ಟು ನಾನು ಆರೋಗ್ಯವಾಗಿದೇನೆ.

ಯಾವ ವಿಷಯಕ್ಕೇ ಆಗಲಿ ನೀನು ಆತಂಕಗೊಳ್ಳಬಾರದು. ನಾವು ದೇವರನ್ನು ನಂಬಿದರೆ ಅವನು ತನ್ನ ವಿಶಾಲ ಬಾಹುಗಳಲ್ಲಿ ನಮ್ಮೆಲ್ಲ ದುಃಖದ ಹೊರೆಯನ್ನೂ ಹೊತ್ತುಕೊಳ್ಳುವನೆಂದು ನೆನಪಿಡು. ಇದು ನಾನು ಬರೆಯುತ್ತಿರುವುದು ಎಷ್ಟು ಸತ್ಯವೋ ಅಷ್ಟೇ ಸತ್ಯ. ಆದರೆ ಅವನ ಮಾರ್ಗ ಮಾತ್ರ ನಮ್ಮ ಮಾರ್ಗವಲ್ಲ. ಅವನ ಬಾಹುಗಳು ನಮ್ಮ ಬಾಹುಗಳಂತಲ್ಲ. ಆದರೂ ಅವನ ಸಂಕಲ್ಪವೇ ಈಡೇರಲೆನ್ನುವುದರಲ್ಲಿ ಮಹಾ ಸೊಗಸು.

ಪ್ರೀತಿ,

**ಬಾಪೂ**

ನನ್ನ ಪ್ರಿಯ ಮಗು,

ನಿನ್ನ ದೀರ್ಘ ಪತ್ರ. ಅದನ್ನು ಅತ್ಯಂತ ಆಸಕ್ತಿಯಿಂದ ಓದಿದೇನೆ. ನಿನ್ನ ಮುಂದೆ ಒಳ್ಳೆ ಗಡುಸಾದ ಸಮಸ್ಯೆಯಿದೆ. ನಿನಗೆ ಸಾಧ್ಯವಾಗುವುದಾದರೆ ನನ್ನನ್ನು ನೋಡಲು ನಂದೀಬೆಟ್ಟಕ್ಕೆ ಬಾ. ಮೇ ೧೦ನೇ ತಾರೀಖು ನಾನು ಅಲ್ಲಿಗೆ ಹೋಗುತ್ತೇನೆ. ದೇವರು ನಿನಗೆ ಮಾರ್ಗದರ್ಶನ ಮಾಡುವನು. ಕಳವಳ ಬೇಡ. ಯಾವುದನ್ನು ನೀನು ಪರಿಹರಿಸಲು ಸಾಧ್ಯವಿಲ್ಲವೋ ಅದನ್ನು ಬಂದಹಾಗೆಯೇ ಸ್ವೀಕರಿಸು.

ಈ ಪತ್ರವನ್ನು ಸೇಗಾಂ* ಗ್ರಾಮದಿಂದ ಬರೆಯುತ್ತಿದೇನೆ. ಇಲ್ಲಿಯೇ ನಾನು ನೆಲೆಸಲು ಯೋಚಿಸುತ್ತಿದೇನೆ. ಮೀರಾಬಾಯಿ ಆಗಲೇ ಇಲ್ಲಿದಾಳೆ. ನಾನು ಇಲ್ಲಿ ನೆಲೆಸಿದರೆ ಅವಳು ಬೇರೆ ಹಳ್ಳಿಗೆ ಹೋಗುವಳು. ಸಾಧ್ಯವಾದರೆ ನನ್ನ ಹಳೆಯ ಸಹಕಾರ್ಯಕರ್ತರಾರೂ ನನ್ನೊಂದಿಗೆ ಇರಬಾರದೆಂಬುದು ನನ್ನ ಇಚ್ಛೆ.

ಪ್ರೀತಿ,

**ಬಾಪೂ**

ನನ್ನ ಪ್ರಿಯ ಮಗು,

ನೀನು ಒಳ್ಳೆ ತುಂಟ ಹುಡುಗಿ. ಪತ್ರದ ಎಲ್ಲ ಕಡೆಗಳಲ್ಲೂ ಬರೆದು ಬಿಡುತ್ತೀಯೆ. ಎಲ್ಲಿ ಆರಂಭಿಸಿದೆ ಎಂಬುದೂ ಗೋಚರವಾಗುವ ಸೂಚನೆ ಇಲ್ಲ. ಇನ್ನೊಂದು ಹಾಳೆಯಲ್ಲಿ ಏಕೆ ಬರೆಯಬಾರದು ? ಈಗ ಗೊಣಗಾಡಿ ಪ್ರಯೋಜನವಿಲ್ಲ. 'ಎಸ್' ಮತ್ತು 'ಕೆ' ಇಬ್ಬರನ್ನೂ ನೀನು ನೋಡಲು ಇಚ್ಛಿಸುವೆಯೆಂದು ಕಳಿಸಿಕೊಟ್ಟಿದೇನೆ.

ಇದೇನು ವಿಚಿತ್ರ ! ಈ ವಾರ ಮೇರಿಯಾಳಿಂದ ಪತ್ರ ಬಂದಿತು. ಅವಳು ನಿನ್ನ ಬಗೆಗೆ ತುಂಬ ಆತಂಕಭರಿತಳಾಗಿದಾಳೆ.

'ಕೆ'ಗೆ ಇಷ್ಟಬಂದಂತೆ ಮಾಡಲು ಹಣಾಭಾವವಿರುವುದರಿಂದ ಬಹಳ ನರಕಯಾತನೆಯಾಗಿರಬೇಕು. ಆದರೆ ಯಾವುದನ್ನು ನಾವು ಶ್ರೇಷ್ಠವೆಂದು ಬಯಸುವೆವೋ ಅದನ್ನೇ ಯಾವಾಗಲೂ ಮಾಡಲು ದೇವರು ನಮಗೆ ಅವಕಾಶ ನೀಡುವುದಿಲ್ಲವೆಂದು ನಾವು ಸಮಾಧಾನಪಟ್ಟುಕೊಳ್ಳಬೇಕು. ಅಲ್ಲದೆ ಯಾವುದು ಶ್ರೇಷ್ಠ ಎಂಬುದೂ ನಮಗೆ ಯಾವಾಗಲೂ ಗೊತ್ತಾಗುವುದಿಲ್ಲವೆಂದು ನನ್ನ ಭಾವನೆ.

ನಿನ್ನ ಮಕ್ಕಳು ನನಗೆ ಬರೆಯುವಂತೆ ಮಾಡಬೇಡ. ಅವರು ತಮ್ಮ ಇಚ್ಛೆಬಂದಂತೆ ಬರೆಯಲಿ.

ಈ ವೇಳೆಗೆ ನೀನು ಕಾಯಿಲೆಯಿಂದ ಪೂರ್ಣ ಗುಣಹೊಂದಿದೀಯೆಂದು ನಂಬಿದೇನೆ. ನಾವು ಪ್ರಥಮ ಭೇಟಿಯಾದಾಗ ನೀನು ಎಷ್ಟು ಆರೋಗ್ಯ

---

* ವರ್ಧಾಕ್ಕೆ ೫ ಮೈಲಿ ದೂರದ ಗ್ರಾಮ. ಈಗ ಅದರ ಹೆಸರು ಸೇವಾಗ್ರಾಮ.

ವಾಗಿಯೂ ಹರ್ಷಚಿತ್ತಳಾಗಿಯೂ ಇದ್ದೆಯೋ ಅದೇ ರೀತಿ ಇರುವಂತಾದರೆ ನನಗೆ ಎಷ್ಟು ಪ್ರಿಯವಾದೀತು. ನೀನು ಆಗ ಇದ್ದ ಆರೋಗ್ಯದ ಸ್ಥಿತಿಯಿಂದ ಎಂದಿಗೂ ಕಾಯಿಲೆ ಬೀಳಲಾರೆಯೆಂದು ನಾನು ಭಾವಿಸಿದ್ದೆ.

ಪ್ರೀತಿ,
ಬಾಪೂ

ವರ್ಧಾ
೧೯........೧೯೩೭

ನನ್ನ ಪ್ರಿಯ ಮಗು,

ನಿನ್ನ ಜೀವನಧ್ಯೇಯದಂತೆ ಬಾಳಲು ನಿನಗೆ ಪೂರ್ಣ ಶಕ್ತಿಯನ್ನು ಭಗವಂತ ದಯಪಾಲಿಸಲಿ. ಅಲಾಭವನ್ನು ಲಾಭವೆಂದೂ ದುಃಖದಲ್ಲಿ ಸುಖವನ್ನೂ ಕಾಣುವುದು ಸುಲಭ ವಿಷಯವಲ್ಲ. ಹೇಗೇ ಆದರೂ, ನಿನ್ನ ಬಾಳು ನಿರರ್ಥಕವಲ್ಲವೆಂದು ನನ್ನ ನಂಬಿಕೆ. ನೀನು ನನ್ನ ಬಳಿಗೆ ಬರದಿರುವುದು ಸರಿಯೆ. ದೇವರ ಸಂಕಲ್ಪ ಬಂದಾಗ ನೀನೇ ಬರುತ್ತೀಯೆ.

ತಂಗ್ಯೆ ಈಗ ಪೂರ್ತಿ ಆರೋಗ್ಯವಾಗಿರಬೇಕು. ಮಕ್ಕಳಿಗೆ ಮುತ್ತು. ಅವರು ನನಗೆ ಬರೆದಾರೊ ಹೇಗೋ ನೋಡು. ಅವರಿಗೆ ಒಂದು ಸಣ್ಣ ಪತ್ರವಿದೆ ಇದರೊಂದಿಗೆ.

ಅವರು ಬರೆಯುವಂತೆ ಪ್ರೇರೇಪಿಸಬೇಡ.

ಪ್ರೀತಿ,
ಬಾಪೂ

ನಂದೀಬೆಟ್ಟ
೧೪–೫–೧೯೩೭

ನನ್ನ ಪ್ರಿಯ ಮಗು,

ನಿನ್ನ ಪರೀಕ್ಷೆಯಾಗುತ್ತಿದೆ. ಕೊಡೈಕೆನಾಲ್‌ನಂಥ ಶೀತ ಜಾಗದಲ್ಲಿಯೂ ನಿನಗೇಕೆ 'ಫ್ಲೂ' ಬರಬೇಕು? ಎಂಥ ಯಾತನೆಗಳ ನಡುವೆಯೂ ನೀನು ಶಾಂತಳಾಗಿರುವೆಯೆಂದೂ ನಿನ್ನ ಧ್ಯೇಯಕ್ಕೆ ತಕ್ಕಂತೆ ನಡೆಯುವೆಯೆಂದೂ ನಾನು ಬಲ್ಲೆ. ನಿನಗೆ ಯಾವಾಗ ಬಿಡುವು? ತಿಳಿಸು. ನನ್ನ ಪ್ರಾರ್ಥನೆ, ಪ್ರೀತಿ ಎರಡೂ ನಿನಗೆ.

ನಂದೀಬೆಟ್ಟ
೧೮–೫–೧೯೩೭

ಬಾಪೂ

## ದೇವರು ನಿನ್ನ ಮಾರ್ಗದರ್ಶಕನೆಂದು ನಂಬು.

ವರ್ಧಾ
೨೬-೩-೧೯೪೦

ನನ್ನ ಪ್ರಿಯ ಮಗು,

ನಿನ್ನಿಂದ ಸುದ್ದಿ ಬಂದು ಯುಗಗಳು* ಕಳೆದಂತಿವೆ. ಆದುದರಿಂದ ನೀನು ಚಾರ್ಲಿ ಆಂಡ್ರೂಸನಿಗೆ ಬರೆದ ಪತ್ರ ನೋಡಿ ನನಗೆ ಹರ್ಷವಾಯಿತು. ಅವನು ಆ ಪತ್ರವನ್ನು ನನಗೆ ಕಳಿಸಿದಾನೆ. ನೀನು ನನಗೇಕೆ ಬರೆಯುತ್ತಿಲ್ಲ? ನನ್ನ ಕಾಲದ ವಿಷಯದಲ್ಲಿ ನೀನು ಎಚ್ಚರಿಕೆಯಿಂದ ಇರುವೆಯೆಂದು ನನಗೆ ಗೊತ್ತು. ಆದರೆ ಆಗೊಮ್ಮೆ ಈಗೊಮ್ಮೆಯಾದರೂ ನಿನ್ನಿಂದ ಒಂದು ಪಂಕ್ತಿಯನ್ನು ಬಯಸುತ್ತೇನೆ.

ಹುಡುಗಿಯರದೇ† ನನಗೆ ಅತ್ಯಂತ ದೊಡ್ಡ ಸಮಸ್ಯೆ. ಆದರೆ ಆ ವಿಷಯದಲ್ಲಿಯೂ ದೇವರೇ ನಿನ್ನ ಮಾರ್ಗದರ್ಶಕನೆಂದು ನೀನು ನಂಬಬೇಕು. ನಮ್ಮಿಂದ ಪರಿಹರಿಸಲಾಗದ ವಿಷಯವಾಗಿ ಸಿಡಿಮಿಡಿಗೊಂಡು ಪ್ರಯೋಜನವಾದರೂ ಏನು?

ನೀನು ಯಾವ ರೀತಿ ಇದೀಯೆ?

ಚಾರ್ಲಿ ಈ ಸಾರಿ ಬದುಕಿದುದೇ ಹೆಚ್ಚು. ಇನ್ನೂ ರುಗ್ಣಶಯ್ಯೆಯಲ್ಲಿದಾನೆ. ಆದರೆ ಯಾವ ಅಪಾಯವೂ ಇಲ್ಲ. ನಾನು ಕಲ್ಕತ್ತಾದಲ್ಲಿ ಇದ್ದಾಗ ಅವನನ್ನು ಆಗಾಗ ನೋಡುತ್ತಿದ್ದೆ. ಮಹಾದೇವ್ ಈಗತಾನೇ ಕಲ್ಕತ್ತಾದಿಂದ ಬಂದಿದಾನೆ. ಚಾರ್ಲಿ ನಿಧಾನವಾಗಿಯೂ ದೃಢವಾಗಿಯೂ ಪ್ರಗತಿಗೊಳ್ಳುತ್ತಿದಾನೆ.

ಇಲ್ಲಿರುವವರಲ್ಲೆಲ್ಲ ನಾನೇ ಹೆಚ್ಚು ಆರೋಗ್ಯವಾಗಿದೇನೆ. 'ಬಾ'ಗೆ ಎಡೆಬಿಡದ ಕೆಮ್ಮು—ಬಹಳ ಅಶಕ್ತಳಾಗಿದಾಳೆ. ಮಹಾದೇವ್ ಇಲ್ಲೇ

* ೧೯೩೭ರ ಮೇ ತಿಂಗಳ ತರುವಾಯ ಇದೇ ಪತ್ರವೆಂಬಂತೆ ಕಾಣುತ್ತದೆ.

† ಇಬ್ಬರು ಹೆಣ್ಣುಮಕ್ಕಳು—ನ್ಯಾನ್ ಮತ್ತು ತಂಗಿ.

ಇದಾನೆ. ಮೇರಿ ಅವಳು ಆರಿಸಿಕೊಂಡ ಗ್ರಾಮದಲ್ಲಿಯೇ ಬಂದ ಕಷ್ಟಗಳನ್ನೆಲ್ಲ ಎದುರಿಸುತ್ತಾ ಇನ್ನೂ ಅಲ್ಲೇ ಇದಾಳೆ.

'ಎಂ' ಆಗೊಮ್ಮೆ ಈಗೊಮ್ಮೆ ನನಗೆ ಬರೆಯುತ್ತಾಳೆ.

ಪ್ರೀತಿ,

**ಬಾಪೂ**

ನನ್ನ ಪ್ರಿಯ ಮಗು,

ನೀನು ದೇವರನ್ನು ನಂಬಿ ಹರ್ಷಚಿತ್ತಳಾಗಿರು. ಯೂರೋಪಿನಲ್ಲಿ ನಡೆಯುತ್ತಿರುವ ಮಹಾದುರಂತದ* ಎದುರಿಗೆ ಎಲ್ಲ ಶೂನ್ಯವೇ. ತಂಗ್ಯೆಗೆ ಏನನ್ನೂ ಮಾಡಲು ಸಾಧ್ಯವಿಲ್ಲವೆ?

ಪ್ರೀತಿ,

ವರ್ಧಾ **ಬಾಪೂ**

(ಎಸ್ತರ್ ಮೆನನ್‌ಳಿಗೆ ಎರಡು ಹೆಣ್ಣುಮಕ್ಕಳಾಗಿದ್ದವು; ನ್ಯಾನ್ ಮತ್ತು ತಂಗ್ಯೆ. ಅವರಿಗೆ ಬಾಪೂ ಬರೆದ ಪತ್ರಗಳಿವು. ಎಸ್ತರ್‌ಳನ್ನೇ ಬಾಪೂ ತಮ್ಮ ಮಗುವೆಂದು ಪರಿಗಣಿಸಿದ್ದರಿಂದ ಆ ಮಕ್ಕಳು ಮೊಮ್ಮಕ್ಕಳೇ ಸರಿ. ಒಬ್ಬ ಅಜ್ಜ ತನ್ನ ಮೊಮ್ಮಕ್ಕಳಿಗೆ ಬರೆದ ಪತ್ರದ ಧಾಟಿ—ಪ್ರೇಮ, ಮಮತೆ—ಇವು ಈ ಪತ್ರಗಳಲ್ಲಿ ಕಂಡುಬರುತ್ತವೆ.)

ಯರವಡಾ ಸೆರೆಮನೆ

ನನ್ನ ಪ್ರಿಯ ನ್ಯಾನ್,

ನನಗೆ ನೀನು ಒಂದು ಪತ್ರ ಬರೆಯಲು ಪ್ರಯತ್ನಿಸಿದುದು ಒಳ್ಳೆಯದು. ನೀನು ಎಂಥ ಜಿಂಕೆಯನ್ನು ಬರೆದು ಕಳಿಸಿದೀಯೆ? ಎಷ್ಟು ಸುಂದರವಾದ ಕೊಂಬುಗಳು! ನಾನು ಮೇಕೆಗಳೊಂದಿಗೆ§ ಆಟವಾಡು

---

* ಪ್ರಪಂಚದ ದ್ವಿತೀಯ ಮಹಾಯುದ್ಧ.

§ ಗಾಂಧೀಜೀ ಮೇಕೆಹಾಲನ್ನು ಸೇವಿಸುತ್ತಿದ್ದರು. ಆದುದರಿಂದ ಆಶ್ರಮದಲ್ಲಿ ಮೇಕೆಗಳನ್ನು ಸಾಕಿದ್ದರು. ಅದನ್ನೇ ಸೆರೆಮನೆಯಲ್ಲೂ ಉಪಯೋಗಿಸುತ್ತಿದ್ದರು.

ತ್ತಿಲ್ಲ. ಅವು ದಿನಕ್ಕೆ ಎರಡು ಸಲ ನನ್ನೆದುರಿಗೆ ಹಾಲು ಕರೆಯುವುದಕ್ಕೆ ಬಂದರೂ; ಇದಕ್ಕಾಗಿ ವ್ಯಸನಪಡುತ್ತೇನೆ. ನಾನು ಅವುಗಳೊಂದಿಗೆ ಏಕೆ ಆಟವಾಡುವುದಿಲ್ಲವೆಂದರೆ, ಅವನ್ನು ನನ್ನೆದುರಿಗೆ ಕರೆತಂದಾಗ ನಾನು ಏನಾದರೂ ಕೆಲಸಮಾಡುತ್ತಿರುತ್ತೇನೆ. ಆ ಕೆಲಸವನ್ನು ಬಿಡಲು ಸಾಧ್ಯ ಇರುವುದಿಲ್ಲ. ಹೌದು, ಎಲ್ಲೋ ಸ್ವಲ್ಪ ಹೂಗಳಿವೆ; ಅಂಥ ಹೇಳಿ ಕೊಳ್ಳುವಷ್ಟು ಏನೂ ಇಲ್ಲ. ನೆಲವೆಲ್ಲ ಕಲ್ಲುಮಯ; ಸೆರೆಮನೆಯಲ್ಲಿ ಹೂವಿನ ಪಾತಿಗಳನ್ನು ಮಾಡಲು ಯೋಗ್ಯವಿಲ್ಲ. ನೀನು ಮತ್ತೊಮ್ಮೆ ಬರೆಯಬೇಕು.

ನಿಮ್ಮಿಬ್ಬರಿಗೂ ಮುತ್ತುಗಳು.

೨೮-೨-೧೯೩೨ ಬಾಪೂ

(ಮೇಲಿನ ಪತ್ರವನ್ನು ನೋಡಿದರೆ ನ್ಯಾನ್ ಬರೆದ ಪತ್ರದಲ್ಲಿ ಆಶ್ರಮದ ಮೇಕೆಗಳು ಮತ್ತು ಸೆರೆಮನೆಯ ಹೂವಿನ ಪಾತಿಗಳ ಬಗೆಗೆ ಪ್ರಶ್ನಿಸಿರಬೇಕು.)

ಪ್ರಿಯ ನ್ಯಾನ್ ಮತ್ತು ತಂಗೈ,

ನೀವು ನನಗೆ ಪ್ರೀತಿಮಯ ಪತ್ರ ಬರೆದಿದೀರಿ.

ನೀವು ಹಕ್ಕಿಗಳೊಡನೆಯೂ ಒಂದು ಬೆಕ್ಕು ಮತ್ತು ಅದರ ಮರಿಗಳೊಂದಿಗೂ ಗೆಳೆತನ ಮಾಡಿಕೊಂಡಿರುವುದು ಕಂಡುಬರುತ್ತದೆ. ನಾನು ಬೆಕ್ಕನ್ನು ತಂಗಿ ಎಂದು ಕರೆಯುತ್ತೇನೆ. ಅದು ತನ್ನ ಮರಿಗಳಿಗೆ ತೋರಿಸುವ ಪ್ರೇಮವನ್ನು ನೋಡುವುದೇ ಒಂದು ಚೆಂದ. ಅದು ತಾನು ಮಾಡುತ್ತಾ ಮರಿಗಳಿಗೆ ಅದೇ ರೀತಿ ಮಾಡುವುದನ್ನು ಕಲಿಸುತ್ತದೆ.

ದೇವರು ನಿಮ್ಮನ್ನು ರಕ್ಷಿಸಲಿ.

ಮುತ್ತುಗಳು.

೨೨-೫-೧೯೩೨ ಬಾಪೂ

ಯರವಡಾ ಕೇಂದ್ರ ಸೆರೆಮನೆ

ಫೆಬ್ರವರಿ ೨೩, ೧೯೩೩

ನನ್ನ ಪ್ರಿಯ ತಂಗ್ಯೆ,

ನೀನೇ ಸ್ವಂತ ಬರೆಯದಿರುವ ಒಂದು ಪತ್ರವನ್ನು ನನಗೆ ಕಳಿಸಿದೀಯೆ. ಆದುದರಿಂದ ನಾನೇ ಸ್ವತಃ ಪತ್ರವನ್ನು ಬರೆಯಲಿಲ್ಲವೆಂದು† ನೀನು ದೂರಿಡುವಂತಿಲ್ಲ.

ಚಾರ್ಲಿ ಬಹಳ ಉಪ್ಪನ್ನು ತಿನ್ನುತ್ತಾನೆಂಬುದು ನನಗೆ ಗೊತ್ತು. ಆದರೆ ನೀವು ಹಿರಿಯರ ಕೆಟ್ಟ ಚಾಳಿಯನ್ನು ಅನುಕರಿಸಬಾರದು. ಹೆಚ್ಚು ಉಪ್ಪನ್ನು ತಿನ್ನಬಾರದು; ಅದು ಪದಾರ್ಥದ ಮೂಲ ರುಚಿಯನ್ನು ಕೆಡಿಸುತ್ತದೆ.

ಚಾರ್ಲಿಯಲ್ಲಿ ಇನ್ನೂ ಒಂದು ಕೆಟ್ಟ ಚಾಳಿ ಇದೆ. ಅವನು ಮಕ್ಕಳಿಗೆ ಸಿಹಿಯನ್ನು ಅತಿಯಾಗಿ ಕೊಡುತ್ತಾನೆ. ಆದುದರಿಂದ ನಾನು ನಿನ್ನ ಹಾಗೆ ಇದ್ದಿದ್ದರೆ ಅನೇಕ ಬಡ ಹುಡುಗರಿಗೆ ಸಿಹಿಯನ್ನು ಹಂಚಿ ಅದರಿಂದ ಆನಂದಪಡುತ್ತಿದ್ದೆ.

ನಮ್ಮ ಪ್ರೀತಿ ಮತ್ತು ಮುತ್ತುಗಳು.

**ಬಾಪೂ**

ನನ್ನ ಪ್ರಿಯ ಮಗು,

ಈ ಪತ್ರ ಹೇಳಿ ಬರೆಸಿದಮೇಲೆ ಇದು ತಂಗ್ಯೆಗೆ ತಲಪಬೇಕು. ಇದರಿಂದ ಹರಿಜನ ಕಾರಣಕ್ಕೆ ೨೧ ಆಣೆ ವೆಚ್ಚವಾಗುತ್ತದೆ. ನ್ಯಾನ್ ಮತ್ತು ತಂಗ್ಯೆ ಇಬ್ಬರೂ ಹರಿಜನ ಕಾರಣಕ್ಕೆ ಆಗುವ ನಷ್ಟವನ್ನು ಸಾವಿರ ಮಡಿ ತುಂಬಿಕೊಡುವರೆಂದು ಆಶಿಸೋಣ. (ಇದು ಎಸ್ತರ್‌ಗೆ ಬರೆದುದು.)

ಪ್ರಿಯ ನ್ಯಾನ್ ಮತ್ತು ತಂಗ್ಯೆ,

ನಿಮಗೆ ನನ್ನ ಪ್ರೇಮ ಮತ್ತು ಮುತ್ತುಗಳು. ಹವಾ* ನಿಮಗೆ ಒಗ್ಗಿದೆಯೆಂದೂ ನೀವಿಬ್ಬರೂ ಸುಖವಾಗಿದೀರೆಂದು ನಂಬಿದೇನೆ. ನೀವು

---

† ಒಂದು ಟೈಪ್ ಮಾಡಿದ ಪತ್ರ.

* ಕೊಡೈಕೆನಾಲಿನ ಹವಾ. ಕೊಡೈಕೆನಾಲ್ ದಕ್ಷಿಣ ಭಾರತದ ಪಳಿನೀ ಗುಡ್ಡಗಳಲ್ಲಿದೆ. ಒಳ್ಳೆ ಪರ್ವತಾರೋಗ್ಯಧಾಮ.

ಮಲಯಾಳೀ ಭಾಷೆಯನ್ನು ಕಲಿಯುತ್ತಿದೀರಾ? ನೀವು ನನಗೆ ಆಗಾಗ ಬರೆಯಬೇಕು.

ಪ್ರೀತಿ,

**ಬಾಪೂ**

ನನ್ನ ಪ್ರಿಯ ತಂಗ್ಯೆ,

ನೀನು ಕ್ಷೇಮವಾಗಿದೀಯೆಂದು ನಂಬಿದೇನೆ. ಬಿಸಿಲಿನಲ್ಲಿ ಎಂದಿಗೂ ಅಲೆದಾಡಬೇಡ. ತುಂಬ ಹಣ್ಣನ್ನು ತಿನ್ನು. ಪಿಷ್ಟಪದಾರ್ಥಗಳನ್ನು ಬಿಡು.

೨೫–೨–೧೯೩೪ **ಬಾಪೂ**

ನನ್ನ ಪ್ರಿಯ ನ್ಯಾನ್,

ನಿನ್ನ ಬಹಳ ಸೊಗಸಾದ ಪತ್ರ ತಲಪಿತು. ನೀನು ದಿನವೂ ನೂಲುತ್ತಿರುವುದು ನನಗೆ ಹರ್ಷ. ಸುವರ್ಣನಿಯಮ ನಿನಗೆ ಗೊತ್ತಿದೆ ತಾನೆ? ಏನನ್ನು ಮಾಡಿದರೂ ಚೆನ್ನಾಗಿ ಮಾಡು, ಮನಸ್ಸಿಟ್ಟು ಮಾಡು.

ಪ್ರೀತಿ ಮತ್ತು ಮುತ್ತುಗಳು.

**ಬಾಪೂ**

ಜನವರಿ ೧೩, ೧೯೩೫
ಡಿಲ್ಲಿ

ನನ್ನ ಪ್ರಿಯ ನ್ಯಾನ್,

ದೃಢವಾದ ಹಸ್ತಾಕ್ಷರದಿಂದ ಕೂಡಿದ ಒಳ್ಳೆ ಚೆನ್ನಾದ ಪತ್ರ ಬರೆದಿದೀಯೆ. ನೀನು ಡಿಸೆಂಬರ್ ೨೭ರಂದು ಬರೆದುದರಿಂದ ನನಗೆ ಹೊಸ ವರುಷದ ಶುಭಾಶಯ ಕೋರಿದುದು ಯುಕ್ತವಾದುದು. ಆದರೆ ನಾನೂ ನಿನಗೆ ಅದನ್ನು ಈಗ ಕೋರುವುದು ಯುಕ್ತವಲ್ಲ. ಏಕೆಂದರೆ ಹೊಸ ವರುಷ ಆರಂಭವಾಗಿ ಎಷ್ಟೋ ದಿವಸಗಳಾಯಿತು.

ಹೊಸ ರಾಟೆಯಿಂದ ನೀನು ನೂಲುವುದಕ್ಕೆ ಆರಂಭಿಸಿದಾಗ ನಿನಗೆ ಹೇಗೆ ಅನಿಸಿತು ತಿಳಿಸು. ತಕಲಿಯ ಮೇಲೆ ನೂಲಲು ನಿನಗೆ ಬರುತ್ತದೆಯೆ ?

ಪ್ರೀತಿ ಮತ್ತು ಮುತ್ತುಗಳು.

ಬಾಪೂ

ಡಿಲ್ಲಿ
ಜನವರಿ ೧೭, ೧೯೩೫

ನನ್ನ ಪ್ರಿಯ ತಂಗ್ಯೆ,

ನೀನು ಒಳ್ಳೆ ಧೈರ್ಯದ ಹುಡುಗಿ. ನಿನಗೆ ಆಗಾಗ ಬರುವ ಕಾಯಿಲೆಯನ್ನು ಸಂತೋಷದಿಂದ ಸಹಿಸುತ್ತೀಯೆ. ನೀನು ನಿಮ್ಮ ತಂದೆಯನ್ನು* ಈ ಪ್ರಶ್ನೆ ಕೇಳಬೇಕು. 'ನೀವೇ ವೈದ್ಯರಾಗಿರುವಾಗ ನನಗೇಕೆ ಆಗಾಗ ಈ ಕಾಯಿಲೆ ಬರುತ್ತದೆ? ನೀವು ನನಗೆ ನೆರವಾಗುವ ಮಾರ್ಗವನ್ನು ಕಂಡುಹಿಡಿಯಬೇಕು.' ಈಗ ನೀನು ಬಹಳ ಉತ್ತಮವಾಗಿದೀಯೆಂದು ನಂಬಿದೇನೆ.

ಪ್ರೀತಿ ಮತ್ತು ಮುತ್ತುಗಳು.

ಬಾಪೂ

ಪ್ರೀತಿಯ ಮಕ್ಕಳೆ,

ನೀವು ನನಗೆ ಪತ್ರ ಬರೆಯುತ್ತಿದ್ದ ಕಾಲವೊಂದಿತ್ತು. ಅದು ನಿಮಗೆ ನೆನಪಿದೆಯೆ ? ಈಗ ನೀವು ವಯಸ್ಸಿನಲ್ಲಿಯೂ ತಿಳಿವಳಿಕೆಯಲ್ಲಿಯೂ ಬೆಳೆದಿರುವುದರಿಂದ ಪತ್ರವನ್ನು ಬರೆಯಬಾರದೆ ? ತಂಗ್ಯೆ

---

* ಡಾಕ್ಟರ್ ಮೆನನ್

ಆರೋಗ್ಯವಾಗಿಲ್ಲವೆಂದು ಕೇಳಿ ದುಃಖವಾಯಿತು. ನಿನ್ನಂಥ ಸೂಕ್ಷ್ಮವಾದ ಮಕ್ಕಳಿಗೆ ' ಹ್ಯಾಟ್ ' ಆವಶ್ಯಕವಾಗಿ ಉಪಯೋಗಿಸಬೇಕಾದ ವಸ್ತು.

ಬಾಪೂನ ಪ್ರೀತಿ ಮತ್ತು ಮುತ್ತುಗಳು.

ನಂದೀಬೆಟ್ಟ
೧೪-೫-೧೯೩೬

ಈಗ ನಾನು ಎಲ್ಲಿದೇನೆಂಬುದನ್ನು ಎಸ್ತರ್ ನಿಮಗೆ ತಿಳಿಸುತ್ತಾಳೆ.

ನನ್ನ ಪ್ರಿಯ ನ್ಯಾನ್,

ನಾನು ನಿನಗೆ ಒಂದು ದೀರ್ಘವಾದ ಪತ್ರವನ್ನು ಬರೆಯಬೇಕೆಂದು ಕೊಂಡಿದ್ದೆ. ಆದರೆ ವೇಳೆಯೇ ದೊರೆಯಲಿಲ್ಲ. ಈಗ ಎಸ್ತರ್ ಜ್ಞಾಪಿಸಿ ದಾಳೆ. ನನಗೆ ಬರೆಯಲು ಸಾಧ್ಯವಿಲ್ಲದಿದ್ದರೂ ನಾನು ನಿಮ್ಮನ್ನು ಮರೆಯ ಲಾರೆನೆಂಬುದಕ್ಕೆ ಈ ಪತ್ರ. ನೀವಿಬ್ಬರೂ ಎಂದಿಗಿಂತ ಹೆಚ್ಚಾಗಿ ಹರ್ಷ ವಾಗಿದೀರೆಂದು ನಂಬಿದೇನೆ.

ನಿಮ್ಮಿಬ್ಬರಿಗೂ ಪ್ರೀತಿ ಮತ್ತು ಮುತ್ತುಗಳು.

ಬಾಪೂ

ಸೇಗಾಂ
೨೬-೬-೧೯೩೬

## ೮. ಯೋಗಾಭ್ಯಾಸದಲ್ಲಿ ಗಾಂಧೀಜೀಯ ಆಸಕ್ತಿ

(ಗಾಂಧೀಜೀ, ಭಾರತೀಯ ಹಠಯೋಗಪ್ರವೀಣರೊಬ್ಬರಿಗೆ ಬರೆದ ಈ ನಾಲ್ಕು ಪತ್ರಗಳು ಅದರಲ್ಲಿ ರಕ್ತಗತವಾಗಿದ್ದ ಪ್ರಾಯೋಗಿಕ ಮನೋಭಾವವನ್ನು ತೋರಿಸುತ್ತವೆ. ವಿಶ್ರಾಂತಿಯಿಲ್ಲದ ಪ್ರವಾಸ, ಮೇರೆಮೀರಿದ ದುಡಿತ—ಇವುಗಳ ಪರಿಣಾಮವಾಗಿ ಅವರ ರಕ್ತದ ಒತ್ತಡ ಕಳವಳವನ್ನುಂಟುಮಾಡಿದ್ದ ಒಂದು ಕಾಲಕ್ಕೆ ಇದು ಸಂಬಂಧಿಸಿದೆ. ನಂದಿಯ ಪರ್ವತಾರಾಮದಲ್ಲಿ ಆರೋಗ್ಯವನ್ನು ಸರಿಪಡಿಸಿ ಕೊಳ್ಳುತ್ತಿದ್ದ ಕಾಲದಲ್ಲಿ ಮೂರು ಪತ್ರಗಳನ್ನೂ ಕೊನೆಯದನ್ನು ಸಾಬರಮತಿ ಆಶ್ರಮದಿಂದಲೂ ಅವರು ಬರೆದರು.)

ನಂದೀಬೆಟ್ಟ, ಮೈಸೂರು
ಏಪ್ರಿಲ್ ೧೯, ೧೯೨೭

ಪ್ರಿಯ ಬಂಧು,

........ವಿದ್ಯಾರ್ಥಿಗಳಲ್ಲಿ ಬೆಳೆಯುತ್ತಿರುವ ಮುಷ್ಟಿಮೈಥುನ ದುಷ್ಟ ಪದ್ಧತಿಗೆ ಯೋಗಾಸನಗಳು ಪರಿಹಾರವಾಗಬಲ್ಲವೆ ಎಂಬ ಅಂಶ ನನ್ನ ಗಮನವನ್ನು ಸೆಳೆದಿದೆ. ಆಸನಗಳನ್ನು ಕುರಿತು ನಾನು ವ್ಯಾಸಂಗಮಾಡಿದಾಗ ಅವು ಇನ್ನೂ ಅನೇಕ ಕೆಟ್ಟ ಪದ್ಧತಿಗಳನ್ನು ಪರಿಹಾರ ಮಾಡಲು ಸೂಚಿತವಾಗಿದ್ದುದು ನನ್ನ ದೃಷ್ಟಿಗೆ ಗೋಚರವಾಯಿತು. ನಾನು ಕಾಯಿಲೆ ಆಗಿದ್ದಾಗ ಪಂಡಿತ ಸಾತ್ವಲೇಕರರ ಬರೆಹಗಳನ್ನು ಓದಿದೆ. ನಾನೇ ಏಕೆ ಪ್ರಯೋಗ ಮಾಡಬಾರದೆನ್ನಿಸಿತು. ಶೀರ್ಷಾಸನದ ಬಗೆಗೆ ಬಹಳ ಶ್ಲಾಘನೆ ಮಾಡಿ ಬರೆದಿದ್ದುದು ನನ್ನ ಮನಸ್ಸನ್ನು ಸೆಳೆಯಿತು. ಕಳೆದ ಐದು ದಿವಸಗಳಿಂದ ಪ್ರತಿಸಲವೂ ಕೆಲವು ಸೆಕೆಂಡುಗಳವರೆಗೆ ನಾನು ಶೀರ್ಷಾಸನವನ್ನು ಪ್ರಯೋಗ ಮಾಡುತ್ತಿದೇನೆ. ಬೆಳಗ್ಗೆ ಊಟಕ್ಕೆ ಮುಂಚೆ ಮಾಡುತ್ತೇನೆ. ಎರಡು ನಿಮಿಷಗಳ ಅಂತರ ಕೊಟ್ಟು ಎರಡು ಸಲ ಮಾಡುತ್ತೇನೆ. ಇದಕ್ಕೆ ಮುಂಚೆ ಮೂಗನ್ನು 'ನೇತಿ'ಯ ಮೂಲಕ ಎಂದರೆ, ಚೂರು ಬಟ್ಟೆಯನ್ನು ಮೂಗಿನೊಳಕ್ಕೆ ಹೊಗಿಸುವುದರ ಮೂಲಕ ಅದನ್ನು ಶುದ್ಧಮಾಡುತ್ತೇನೆ. ಆಸನವನ್ನು ಮಾಡುವಾಗ ಪೂರ್ಣ

ನಿಷ್ಕ್ರಿಯೆಯಿಂದ ಇರುತ್ತೇನೆ. ಶ್ರೀ....ಅವರು ಶರೀರವನ್ನು ಮೇಲಕ್ಕೆತ್ತಿ ತಲೆಯ ಮೇಲೆ ನಿಲ್ಲಿಸಲು ನೆರವಾಗುತ್ತಾರೆ. ರಾತ್ರಿ ೮ ಘಂಟೆಗೆ ಮಲಗುವ ಮುನ್ನ ಇದೇ ರೀತಿ ಮಾಡುತ್ತೇನೆ. ಸಂಜೆ ೫ಕ್ಕೆ ನನ್ನ ಆಹಾರ—ಹಾಲು-ಹಣ್ಣು—ತೆಗೆದುಕೊಳ್ಳುತ್ತೇನೆ. ನನಗೆ ಯಾವ ಕೆಟ್ಟ ಪರಿಣಾಮವೂ ಕಂಡುಬಂದಿಲ್ಲ. ಇದಕ್ಕೆ ಪ್ರತಿಯಾಗಿ ನನಗೆ ಹೆಚ್ಚು ಪ್ರಸನ್ನತೆಯೂ ಹೆಚ್ಚು ಶಕ್ತಿಯೂ ಕಂಡುಬಂದು ಸ್ವಲ್ಪ ದೂರ ನಡೆಯುತ್ತೇನೆ. ನನ್ನ ಹಸಿವು ಉತ್ತಮವಾಗಿದೆ. ಹೀಗೆ ನಿಷ್ಕ್ರಿಯೆಯಿಂದ ಶೀರ್ಷಾಸನವನ್ನು ಮಾಡುವುದರಿಂದ ರಕ್ತದ ಒತ್ತಡ ಕಡಿಮೆಯಾಗುವುದೋ ಕಡಿಮೆ ಆಗದೋ ಎಂಬುದೇ ಪ್ರಶ್ನೆ. ನೀತಿಯಿಂದಲಂತೂ ಏನೂ ಕೆಡುಕಾಗುವು ದಿಲ್ಲವೆಂದು ನನ್ನ ನಂಬಿಕೆ. ಈಗ ನನ್ನ ಶ್ವಾಸಕೋಶದ ಮಿಡಿತದಿಂದ ರಕ್ತದ ಒತ್ತಡ ೧೮೦ ಇದೆ. ಈ ಐದು ದಿವಸಗಳಿಂದಲೂ ಒತ್ತಡ ಹೆಚ್ಚಿಲ್ಲ. ಯೋಗಾಭ್ಯಾಸವನ್ನು ಮುಂದುವರಿಸಲೆ ಅಥವಾ ನೀವು ಬರುವ ವರೆಗೆ ಇದನ್ನು ನಿಲ್ಲಿಸಲೆ? ಸಲಹೆಮಾಡಿ. ನಾನು ನಿಲ್ಲಿಸಬೇಕೆಂಬುದು ನಿಮ್ಮ ಅಭಿಪ್ರಾಯವಾದರೆ ದಯಮಾಡಿ ತಂತಿಯ ಮೂಲಕ ತಿಳಿಸಿ. ನನ್ನ ಯಾವ ಬಗೆಯ ಅವಸರದ ಕ್ರಿಯೆಯಿಂದಲೂ ಆಸನಗಳಿಗೆ ಕೆಟ್ಟ ಹೆಸರು ಬರಬಾರದು.

ನಿಮ್ಮ ವಿಶ್ವಾಸಿ,
**ಮೋ. ಕ. ಗಾಂಧೀ**

'ಕುಮಾರಾ ಪಾರ್ಕ್', ಬೆಂಗಳೂರು
ಜೂನ್ ೧೭, ೧೯೨೭

ಪ್ರಿಯ ಬಂಧು,

ನೀವು ಹೇಳುವ, ಹೊಟ್ಟೆ ಮತ್ತು ಹೃದಯಗಳ ಮೇಲೆ ಉಜ್ಜುವಿಕೆ ಈಗ ನನಗೆ ಅರ್ಥವಾಗುತ್ತದೆ. ನಿಮಗೆ ನಾನು ಬರೆದಾಗಿನಿಂದಲೂ ಇದನ್ನು ಮುಂದುವರಿಸಿದೇನೆ. ನನಗೆ ಅರ್ಥವಾಗದಿದ್ದುದನ್ನು ತಿಳಿದುಕೊಳ್ಳಲು ಯತ್ನಿಸಿದೆ. ಈ ದೈಹಿಕ ಅಭ್ಯಾಸವನ್ನು ಮಾಡುವುದರಲ್ಲಿ ನಿಮ್ಮಲ್ಲಿ ಪೂರ್ಣ ನಂಬಿಕೆಯಿಂದ ನಾನು ನಡೆಯುವೆನೆಂದು ಹೇಳಿದೇನೆ. ನಿಮ್ಮ

ವಿವರಗಳು ನನಗೆ ಅರ್ಥವಾಗದಿರುವಾಗ ನಿಮಗೆ ನನ್ನ ಸಂಶಯವನ್ನು ತಿಳಿಸಿದರೂ ಅವು ನನಗೆ ಅಂತಿಮ ನಿರ್ಣಯವಾಗಿರುತ್ತವೆ.

ಈ ಯೋಗಾಭ್ಯಾಸಕ್ಕೆ ನಾನು ಪೂರ್ಣ ಪ್ರಯೋಗ ಕೊಡಲು ಬಯಸುತ್ತೇನೆ. ಏಕೆಂದರೆ, ಎಲ್ಲ ವೈದ್ಯಚಿಕಿತ್ಸಾಪದ್ಧತಿಗಿಂತಲೂ ಇದು ಅಪಾಯದಿಂದ ಪೂರ್ಣ ಮುಕ್ತವಾದುದು.

೮ನೆಯ ತಾರೀಖು ನಿಮಗೆ ಪತ್ರ ಬರೆದ ತರುವಾಯ ನಾನೊಂದು ಹೆಜ್ಜೆ ಮುಂದಿಟ್ಟೆ. ಅದನ್ನು ನೀವು ಅವಸರವೆನ್ನಲಾರಿರೆಂದು ಭಾವಿಸಿದೇನೆ. ನಿಮ್ಮ ಟಿಪ್ಪಣಿ ಓದಿ, ನಾನು ೩೦ ಡಿಗ್ರಿ ಕೋನದವರೆಗೆ ಹೋಗಬಹುದೆಂದು ನೀವು ನಿರೀಕ್ಷಿಸಿದ್ದುದನ್ನು ಕಂಡೆ. ಆದುದರಿಂದ ನಿಮಗೆ ಬರೆದು ಈ ಕೋನವನ್ನು ವಿಶಾಲಗೊಳಿಸಿದೆ. ಆದರೆ ಸೂಚನೆಗನುಗುಣವಾಗಿ ಕಾಲವನ್ನು ಐದು ನಿಮಿಷಕ್ಕೆ ಮಿತಿಗೊಳಿಸಿದೆ. ಕೋನ ೩೦° ಇದ್ದೀತೋ ಎಂಬ ಬಗೆಗೆ ಸಂಶಯದಿಂದ ಕೂಡಿದೇನೆ, ಏಕೆಂದರೆ ಸರಿಯಾಗಿ ಅಳತೆ ಮಾಡುವ ಯಂತ್ರ ನನಗೆ ದೊರಕಿಲ್ಲ. ಮಂಚವನ್ನು ಏರಿಸುವುದರಿಂದ ತೃಪ್ತನಾಗದೆ ಒಂದು ಹಲಗೆಗಾಗಿ ಹುಡುಕಿದೆ. ಅದು ಈಗ ಸಿಕ್ಕಿದೆ. ಮಂಚಕ್ಕೆ ಮರದ ಮೈಯಿದೆ. ಆದರ ಮೇಲೆ ಚಾಪೆಯನ್ನು ಹರಡುವುದಕ್ಕೆ ಬದಲಾಗಿ ಒಂದು ಮೆತ್ತೆಯನ್ನೂ ಉಪಯೋಗಿಸುತ್ತೇನೆ. ಆದರ ಮೇಲೆ ಸರ್ವಾಂಗಾಸನ ಮಾಡುತ್ತೇನೆ. ಈಗ ಅದು ಹಿಂದಿನ ಇತರ ಅಭ್ಯಾಸಗಳಿಗಿಂತ ಬಹಳ ಉತ್ತಮ. ಮಹಾದೇವ್ ಅಳತೆಮಾಡುತ್ತಾನೆ. ನಾನು ಮಾಡುವ ಕೋನ ೩೦°ಗಿಂತಲೂ ೫೦° ಸಮೀಪವಾದುದೆಂದು ಭಾವಿಸುತ್ತಾನೆ. ಅದು ೫೦° ಇರುವುದರಿಂದ ನನಗೆ ತೃಪ್ತಿಯಿಲ್ಲ. ಅದು ಹೇಗೇ ಇರಲಿ. ನನಗೇನೂ ಕಿರಿಕಿರಿಯಾಗುತ್ತಿಲ್ಲ. ಇವತ್ತು ನಾಲ್ಕನೆಯ ದಿವಸ. ಅಭ್ಯಾಸದ ಕಾಲ ಕೇವಲ ೫ ನಿಮಿಷ. ಪ್ರತಿ ಭಾನುವಾರವೂ ರಕ್ತದ ಒತ್ತಡವನ್ನು ಅಳೆಯಲಾಗುವುದು. ಆದರೆ ಒತ್ತಡ ಏನಾದರೂ ಏರಿದುದು ಕಂಡುಬಂದರೆ ಅದಕ್ಕೆ ಕೋನವೇ ಕಾರಣವೆಂದು ಭಾವಿಸಿ, ನಿಮ್ಮಿಂದ ಇದಕ್ಕೆ ಉತ್ತರ ಬರುವವರೆಗೂ ಅಭ್ಯಾಸವನ್ನು ನಿಲ್ಲಿಸಿಬಿಡುತ್ತೇನೆ. ನಾನು ಬಹಳ ಮುಂದುವರಿದೆನೆಂದು ನೀವೂ ಭಾವಿಸುವುದಾದರೆ ನಿಲ್ಲಿಸಿಬಿಡುತ್ತೇನೆ.

ನಾನು ತೆಗೆದುಕೊಳ್ಳುತ್ತಿರುವ ಇನ್ನೂ ಒಂದು ವ್ಯಾಯಾಮವಿದೆ. ಅದನ್ನು ಬಹಳ ಕ್ರಮವಾಗಿಯಲ್ಲದೆ ಇದ್ದರೂ ಸಾಕಷ್ಟು ಕ್ರಮವಾಗಿ ತೆಗೆದುಕೊಳ್ಳುತ್ತಿದೇನೆ. ಅತಿಸಾರದ ಪರಿಣಾಮವಾಗಿ ನಾನು ಗುಣಮುಖನಾಗುತ್ತಿದ್ದಾಗ ಮತ್ತು ಇಂದಿನಷ್ಟು ದೈಹಿಕವಾಗಿ ಎಷ್ಟೋ ಅಶಕ್ತನಾಗಿ ಇದ್ದಾಗಲೂ ಅದನ್ನು ಮಾಡುತ್ತಿದ್ದೆ. ಕಾಲುಗಳನ್ನು ಸೊಂಟಕ್ಕೆ ಸರಿಯಾಗಿ ಸಮಕೋನಕ್ಕೆ ಎತ್ತಿ ಅದನ್ನು ಹಾಗೆಯೇ ಎರಡು ಅಥವಾ ಮೂರು ನಿಮಿಷಗಳವರೆಗೆ ನಿಲ್ಲಿಸುವುದು; ಸಂಚಾರದಿಂದೇನಾದರೂ ಆಯಾಸವಾಗಿದ್ದರೆ ಅದನ್ನು ಹೋಗಲಾಡಿಸುವುದಕ್ಕಾಗಿ; ಮತ್ತು ಸೊಂಟವು ಹಾಗೆಯೇ ಹಾಸಿಗೆಯ ಮೇಲಿರುವಾಗ ಯಾವ ನೋವೂ ಇಲ್ಲದಂತೆ ಕಾಲುಗಳನ್ನು ತಲೆಯ ಕಡೆಗೆ ಆದಷ್ಟು ನೇರವಾಗಿ ಚಾಚುವುದು. ಕಬ್ಬುಹೊಟ್ಟೆಯ ಮಾಂಸಖಂಡಗಳನ್ನು ಬಲಪಡಿಸಲು ಇದನ್ನು ಮಾಡುತ್ತೇನೆ. ಇದು ನಿನಗೆ ಹೇಳಿಕೊಡಲ್ಪಟ್ಟಿದೆಂದು ನಾನು ನಿಮಗೆ ತಿಳಿಸಿರಬೇಕು. ಅವರು ಈ ವ್ಯಾಯಾಮವನ್ನು ಮಾಡಲೇಬೇಕೆಂದು ನನಗೆ ಬರೆಯುತ್ತಿದಾರೆ. ಈ ಎರಡೂ, ಎಂದರೆ ಕಾಲುಗಳನ್ನು ನೇರವಾಗಿ ಚಾಚಿ ಸೊಂಟಕ್ಕೆ ಸಮಕೋನದಲ್ಲಿ ಅದನ್ನು ಇಟ್ಟುಕೊಳ್ಳುವುದು ಮತ್ತು ಕಾಲುಗಳನ್ನು ನಿಧಾನವಾಗಿ ತಲೆಯ ಕಡೆಗೆ ಬಗ್ಗಿಸುವುದು ಇದರಿಂದ ನನಗೆ ಒಳ್ಳೆಯದಾದಂತೆ ಕಂಡು ಬರುತ್ತದೆ. ಆಯಾಸವಾಗುವುದಿಲ್ಲ. ಈ ಬಗ್ಗಿಸುವ ವ್ಯಾಯಾಮದಿಂದ ಪ್ರವೃತ್ತಿ ಮುಂದುವರಿಯುತ್ತದೆ.

ಬೆಳಗಿನ ವೇಳೆಯಲ್ಲಿ ನಾನು ಇನ್ನೂ ನೀರು ಮತ್ತು ಉಪ್ಪನ್ನು ಉಪಯೋಗಿಸುತ್ತಿಲ್ಲ; ಎನಿಮಾ (ಜಲಚಿಕಿತ್ಸೆ) ಮುಂದುವರಿಯುತ್ತಿದೆ. ನಾನು ಈಗ ನೀರನ್ನು ಅರ್ಧ ಘಂಟೆಯವರೆಗೂ ಇಟ್ಟುಕೊಳ್ಳಬಲ್ಲೆ. ಆದರೆ ಮೂಗಿನ ಮೂಲಕ ನಾನು ಒಂದು ಬಟ್ಟಲು ನೀರನ್ನು ತೆಗೆದುಕೊಳ್ಳುತ್ತೇನೆ. ಅರ್ಧಕ್ಕಿಂತ ಕಡಿಮೆ ಭಾಗ ಮೂಗಿನಿಂದ ತೆಗೆದುಕೊಳ್ಳುವಾಗಲೇ ಬಿದ್ದುಹೋಗುತ್ತದೆ. ಬಾಯಿ ಮುಕ್ಕಳಿಸಿದಮೇಲೆ ಹೀಗೆ ನಾಲ್ಕು ಔಂಸು ನೀರನ್ನು ತೆಗೆದುಕೊಳ್ಳುತ್ತೇನೆಂದು ತೋರುತ್ತದೆ.

ಬೆಳಗ್ಗೆ ಮತ್ತು ಸಂಜೆ ಪ್ರತಿಸಲವೂ ನಾಲ್ವತ್ತು ನಿಮಿಷಗಳವರೆಗೆ ಸಂಚಾರ ಮಾಡುತ್ತೇನೆ. ನಡೆಯುವ ದೂರ ನಾನು ಬೆಂಗಳೂರಿಗೆ ಬಂದಾಗ

ಇದ್ದುದಕ್ಕಿಂತಲೂ ಹೆಚ್ಚಿದೆ. ಪ್ರತಿಸಲವೂ ಎರಡು ಮೈಲಿಗೆ ಕಡಿಮೆ ಏನಿಲ್ಲ.

ಎರಡು ಟೀ ಚಮಚಕ್ಕಿಂತ ಹೆಚ್ಚಾಗಿ ಕಾಯಿಸಿದ ಬೆಣ್ಣೆಯನ್ನು ನಾನು ಸೇವಿಸುವ ಸಾಹಸ ಇನ್ನೂ ಮಾಡಿಲ್ಲ. ಹಾಲಿನ ಪ್ರಮಾಣ ಹೆಚ್ಚಿದೆ, ನಾಲ್ವತ್ತರಿಂದ ಐವತ್ತು ಔಂಸುಗಳಿಗೆ; ಭಕರಿ ಅಥವಾ ಓಟ್ಸ್‌ಮೀಲ್ (ತೋಕೆಗೋಧಿಯಿಂದ ಮಾಡಿದುದು) ಎರಡು ಔಂಸು ತೆಗೆದುಕೊಳ್ಳುತ್ತೇನೆ.

ನಿಮ್ಮ ಮೂಲ ಟಿಪ್ಪಣಿಯನ್ನು ಇದರೊಂದಿಗೆ ಇಟ್ಟಿದೇನೆ. ಇದನ್ನು ನೀವು ಹಿಂದಕ್ಕೆ ಕಳಿಸಬೇಕಾಗಿಲ್ಲ. ಏಕೆಂದರೆ ಎಲ್ಲವನ್ನೂ ನಾನು ನೆನಪಿನಲ್ಲಿಟ್ಟುಕೊಳ್ಳಬಲ್ಲೆ. ಆವಶ್ಯಕವೆನಿಸಿದ ಇನ್ನೂ ಹೆಚ್ಚಿನ ಸೂಚನೆಗಳಿದ್ದರೆ ದಯೆಮಾಡಿ ತಿಳಿಸಿ.

ನಿಮ್ಮ ವಿಶ್ವಾಸಿ,
**ಮೋ. ಕ. ಗಾಂಧೀ**

'ಕುಮಾರಾ ಪಾರ್ಕ್', ಬೆಂಗಳೂರು
ಜೂನ್ ೨೯, ೧೯೨೭

ಪ್ರಿಯ ಬಂಧು,

ನಿಮ್ಮ ಪತ್ರ. ವಂದನೆಗಳು. ಕಳೆದ ಭಾನುವಾರ ತೆಗೆದುಕೊಂಡ ರಕ್ತದ ಒತ್ತಡ ಅಳತೆ ೧೫೦ರಿಂದ ೧೬೦ಕ್ಕೇರಿದುದು ಕಂಡುಬಂದುದನ್ನು ನಿಮಗೆ ತಿಳಿಸಲು ವ್ಯಸನವಾಗುತ್ತದೆ. ಹೀಗೆ ಏರಲು ಕಾರಣವೇನೆಂಬುದು ವೈದ್ಯರಿಗೆ ಗೊತ್ತಾಗಲಿಲ್ಲ. ನಾನು ಮಾಡುತ್ತಿದ್ದ ಸರ್ವಾಂಗಾಸನ ಮತ್ತು ಹಲಾಸನಗಳ ವಿವರವನ್ನು ಅವರಿಗೆ ಬಾಯಿಮಾತಿನಲ್ಲಿ ತಿಳಿಸಿದೆ. ಸದ್ಯಕ್ಕೆ ಇವೆರಡನ್ನೂ ತಾತ್ಕಾಲಿಕವಾಗಿ ನಿಲ್ಲಿಸಬೇಕೆಂದು ಅವರು ಒತ್ತಾಯಮಾಡಿದರು. ಆದುದರಿಂದ ನಾನು ನಿಲ್ಲಿಸಿದೆ. ಇಲ್ಲದಿದ್ದರೂ, ನನ್ನ ಹಿಂದಿನ ಪತ್ರದಲ್ಲಿ ನಿಮಗೆ ತಿಳಿಸಿದಂತೆ, ಒತ್ತಡ ಹೆಚ್ಚಾಗಿದ್ದರೆ ನಿಮ್ಮ ಸಲಹೆ ಬರುವವರೆಗೂ ನಾನು ಸರ್ವಾಂಗಾಸನವನ್ನು ನಿಲ್ಲಿಸುತ್ತಿದ್ದೆ. ಕಳೆದ ಭಾನುವಾರ ಒತ್ತಡವನ್ನು ಪರೀಕ್ಷಿಸಲಾಯಿತು. ಅದು ೫° ಹೆಚ್ಚಾಗಿದ್ದುದು ಕಂಡು

ಬಂದಿತು. ಆದುದರಿಂದ ಈ ಎರಡೂ ಅಭ್ಯಾಸಗಳನ್ನು ಸ್ವಲ್ಪ ಕಾಲದ ವರೆಗೆ ನಿಲ್ಲಿಸುವುದು ಉತ್ತಮವೆಂದು ನಾನು ಭಾವಿಸುತ್ತೇನೆ. ಹೇಗಾದರೂ ನಿಮ್ಮಿಂದ ಪತ್ರ ಬರುವವರೆಗೆ ಅವನ್ನು ನಿಲ್ಲಿಸುತ್ತೇನೆ.

ಮಿಕ್ಕುದೆಲ್ಲ ಎಂದರೆ ಸಂಚಾರ, ದೀರ್ಘ ಶ್ವಾಸೋಚ್ಛ್ವಾಸ, ಶವಾಸನ* ಮತ್ತು ಮೈಕೈ ಉಜ್ಜುವುದು ಇವೆಲ್ಲ ಮುಂದುವರಿಯುತ್ತವೆ. ಏನೂ ತೊಂದರೆಯಿಲ್ಲದೆ ನಾನು ಬೆಣ್ಣೆಯನ್ನೂ ಸೇವಿಸಬಲ್ಲೆ. ಈಗ ಅದನ್ನು ಮೂರು ಟೀ ಚಮಚಗಳಷ್ಟಕ್ಕೆ ಹೆಚ್ಚಿಸಲಾಗಿದೆ. ನೀವು ಈ ಪ್ರಮಾಣವನ್ನು ಹೆಚ್ಚಿಸಬೇಕೆಂದು ಸಲಹೆಮಾಡಿದ ಹೊರತು ಈ ಮಿತಿಯನ್ನು ಮೀರಿ ಹೋಗಲಾರೆ. ಹಾಲು ೩೦ ಔನ್ಸುಗಳು. ನಾನು ತೆಗೆದುಕೊಳ್ಳುವ ಭಕರಿಯನ್ನು ತೂಕಮಾಡಲಾಗುತ್ತದೆ. ಬೇಯಿಸಿದಮೇಲೆ ೩ ಔನ್ಸುಗಳಷ್ಟು ತೂಕವಿರುತ್ತದೆ ಅದು. ಅತಿ ಸ್ವಲ್ಪ ಕೆರಳಿಕೆಯಿಂದಲೂ ರಕ್ತದ ಒತ್ತಡ ಹೆಚ್ಚುವ ಸ್ಥಿತಿ ನನ್ನ ಶರೀರದಲ್ಲಿರುವುದರಿಂದ ನಾನು ಭುಜಂಗಾಸನವನ್ನು ಮಾಡಬೇಕೆಂದು ಸಲಹೆಮಾಡುವಿರಾ ? ಈ ಅಭ್ಯಾಸಗಳಲ್ಲಿ ಯಾವುದನ್ನು ಮಾಡುವುದಕ್ಕೂ ಬೇಕಾಗುವ ಶಾರೀರಕ ಶಕ್ತಿಯ ಬಗೆಗೆ ಯಾವ ಕೊರತೆಯೂ ಇಲ್ಲ. ಈ ಆಸನಗಳಲ್ಲಿ ಕೆಲವು ಶರೀರಕ್ಕೆ ಬೇರೆ ವಿಧದಲ್ಲಿ ಅಪಾಯವನ್ನುಂಟುಮಾಡದಿದ್ದರೂ ಅದೇಕೆ ರಕ್ತದ ಒತ್ತಡವನ್ನು ಹೆಚ್ಚು ಮಾಡುವುವೋ ನನಗೆ ಅರ್ಥವಾಗುತ್ತಿಲ್ಲ. ಸಾಮಾನ್ಯವಾಗಿ ಆರೋಗ್ಯಕರವಾಗಿರುವ ವ್ಯಕ್ತಿಗಳಲ್ಲಿ ಇವು ರಕ್ತದ ಒತ್ತಡವನ್ನು ಹೆಚ್ಚಿಸುವುದಿಲ್ಲವೆಂದು ಭಾವಿಸುತ್ತೇನೆ. ಆದುದರಿಂದ ರಕ್ತದ ಒತ್ತಡಕ್ಕೆ ಸಂಬಂಧಿಸಿದಂತೆ ಯಾವ ಆಸನಗಳು ನಿಜವಾಗಿಯೂ ಅಪಾಯಕರವಲ್ಲವೆಂಬುದನ್ನು ನೀವು ತಿಳಿಸಿದರೆ ಬಹಳ ಒಳ್ಳೆಯದು.

ನಿಮ್ಮ ವಿಶ್ವಾಸಿ,

**ಮೋ. ಕ. ಗಾಂಧೀ**

---

* ನಿಶ್ಚಲವಾಗಿ ಮಲಗುವ ಒಂದು ಬಗೆಯ ಆಸನ.

ಸತ್ಯಾಗ್ರಹಾಶ್ರಮ, ಸಾಬರಮತಿ
ಪ್ರಿಯ ಬಂಧು, ಜನವರಿ ೩, ೧೯೨೮

ನಿಮ್ಮ ವಿಶ್ವಾಸದ ಪತ್ರ ಬಂದಿತು. ನಾನು ಯೋಗಾಭ್ಯಾಸವನ್ನು ಪೂರ್ತಿಯಾಗಿ ನಿಲ್ಲಿಸಿಲ್ಲ. ಶವಾಸನವನ್ನು ನಾನೇ ಸ್ವತಂತ್ರವಾಗಿ ಮಾಡುತ್ತೇನೆ. ನೀವು ಸೂಚಿಸಿದ ರೀತಿಯಲ್ಲಿ ಶ್ವಾಸೋಚ್ಛ್ವಾಸ ಮಾಡುತ್ತೇನೆ. ಆದರೆ ನನ್ನ ಆಹಾರದಲ್ಲಿ ಮೂಲಭೂತ ಬದಲಾವಣೆ ಮಾಡಿದೇನೆ. ಆಧ್ಯಾತ್ಮಿಕ ಕಾರಣಗಳಿಂದ ನಾನು ಹಾಲನ್ನು ಅಪೇಕ್ಷಿಸುವುದಿಲ್ಲವೆಂಬುದು ನಿಮಗೆ ಗೊತ್ತಿದೆ. ಎಲ್ಲಿಗೂ ಪ್ರವಾಸವಿಲ್ಲವಾದುದರಿಂದ ಹಣ್ಣು ಮತ್ತು ಕಾಯಿ ಇವನ್ನು ಸೇವಿಸಲು ಪ್ರಯತ್ನಿಸುತ್ತಿದೇನೆ. ಈಗಾಗಲೇ ಒಂದು ತಿಂಗಳು ಕಳೆದಿದೆ. ಒಂದು ತೊಲ ಬಾದಾಮಿಯನ್ನು ಅರೆದು ಕಿತ್ತಲೆ ಹಣ್ಣಿನ ರಸ ಅಥವಾ ಅರ್ಧ ಒಣಗಿದ ದ್ರಾಕ್ಷಿಯೊಂದಿಗೆ ಸೇರಿಸಿ ತೆಗೆದುಕೊಳ್ಳುತ್ತೇನೆ. ಅರ್ಧ ತೆಂಗಿನಕಾಯಿಯನ್ನು ಹಿಂಡಿ ರಸ ತೆಗೆದು ಮಾಗದೆ ಇರುವ ಪರಂಗಿ ಕಾಯನ್ನು ಬಾಡಿಸಿ ಆದರೊಂದಿಗೋ ಅಥವಾ ಮಾಗದೆ ಇರುವ ಬಾಳೆಹಣ್ಣಿನೊಂದಿಗೋ ಸೇರಿಸಿ ಸೇವಿಸುತ್ತೇನೆ. ಮಾಗದಿರುವ ಬಾಳೆಹಣ್ಣನ್ನು ಇಂದಿನಿಂದ ಸೇವಿಸಲಾರಂಭಿಸಿದೇನೆ. ಈ ಬದಲಾವಣೆ ಮಾಡಿಕೊಂಡಾಗಿನಿಂದ ಯಾವ ಔಷಧವೂ ಇಲ್ಲದೆ ನನ್ನ ಪ್ರವೃತ್ತಿ ಉತ್ತಮವಾಗಿದೆ. ಬಹುಶಃ ನೀವು ಈ ವ್ಯತ್ಯಾಸವನ್ನು ಒಪ್ಪಲಾರಿರಿ. ಆದರೆ ನನ್ನ ಬಗೆಗೆ ಸಹನೆಯಿಂದ ಕೂಡಿದವರಾಗಿ ನನಗೆ ಮಾರ್ಗದರ್ಶನ ಮಾಡುವುದಾದರೆ, ದಯೆಮಾಡಿ ಆ ರೀತಿ ಮಾಡಿ. ಬೇರೆ ಯಾವುದಾದರೂ ಅಭ್ಯಾಸಗಳನ್ನು (ವ್ಯಾಯಾಮ) ನೀವು ಸಲಹೆ ಮಾಡುವುದಿದ್ದರೆ ದಯೆ ಮಾಡಿ ತಿಳಿಸಿ. ಡಾ........ರವರ ಸಲಹೆಯ ಪ್ರಕಾರ ಒಂದು ತಿಂಗಳಿಂದ ರಕ್ತದ ಒತ್ತಡ ಪರೀಕ್ಷೆ ಮಾಡಿಸಿಕೊಂಡಿಲ್ಲ.

ನಿಮ್ಮ ವಿಶ್ವಾಸಿ,
**ಮೋ. ಕ. ಗಾಂಧೀ**

## ೯. ರಂಗನಾಥ ರಾಮಚಂದ್ರ ದಿವಾಕರರಿಗೆ

(ಕಾಂಗ್ರೆಸ್ ಸಂಸ್ಥೆಯ ಸಂವಿಧಾನಪರಿಷ್ಕರಣಕ್ಕಾಗಿ ನೇಮಕವಾಗಿದ್ದ ಸಮಿತಿ ಸದಸ್ಯರಲ್ಲೊಬ್ಬರಾಗಿದ್ದರು ಶ್ರೀ ರಂಗನಾಥ ರಾಮಚಂದ್ರ ದಿವಾಕರರು. ಆ ಸಮಿತಿ ತಯಾರಿಸಿದ್ದ ಮುಖ್ಯಾಂಶಗಳನ್ನು ಪರಿಶೀಲಿಸಿ, ತಮ್ಮ ಅಭಿಪ್ರಾಯವನ್ನು ಈ ಕೆಳಗೆ ಕಂಡ ಪತ್ರದಲ್ಲಿ ತಿಳಿಸಿದ್ದರು ಬಾಪೂ.)

ಕಾಜಿರ್‌ಖಿಲ್
ರಾಮ್‌ಗಂಜ್ (ಅಂಚೆ), ನವಖಾಲೀ ಜಿಲ್ಲಾ
ಜನವರಿ ೧೯, ೧೯೪೭

ನನ್ನ ಪ್ರಿಯ ದಿವಾಕರ,

ಕಾಂಗ್ರೆಸ್ ಸಂವಿಧಾನ ಸಮಿತಿ ಚರ್ಚಿಸಿ ತೀರ್ಮಾನಕ್ಕೆ ಬಂದ ತತ್ತ್ವಗಳನ್ನೊಳಗೊಂಡ ಮುಖ್ಯಾಂಶಗಳ ಪಟ್ಟಿಯನ್ನು — ಅಧ್ಯಕ್ಷರು ನನ್ನಲ್ಲಿ ಬಿಟ್ಟದ್ದುದು ನಾನು ಅವಸರದಲ್ಲಿಯೇ ಪರಿಶೀಲಿಸಿದೇನೆ. ನಾನು ಪರಿಶೀಲಿಸಲು ಅಪೇಕ್ಷಿಸದಿರುವ ಇತರ ಅಂಶಗಳು ಎಷ್ಟೋ ಇವೆ. ನಾನು ಮೂಲಾಧಾರವನ್ನೇ ಪರಿಶೀಲಿಸಿದೇನೆ. ಇದರೊಂದಿಗೆ ನಾನು ಇಟ್ಟಿರುವ ಪತ್ರದಲ್ಲಿ ಕಂಡುಬರುವ ಅಂಶಗಳು ಯಾರಿಗೇ ಆಗಲಿ, ಭಾವಬುದ್ಧಿಗಳ ಮೇಲೆ ತೀವ್ರ ಪರಿಣಾಮವನ್ನುಂಟುಮಾಡದಿದ್ದರೆ, ಇದಕ್ಕೆ ಸ್ವಲ್ಪವೂ ಪ್ರಾಮುಖ್ಯತೆ ಕೊಡಬೇಕಾದ ನಿರ್ಬಂಧವಿಲ್ಲ.

ಬಾಪೂನ ಆಶೀರ್ವಾದ

### ಕಾಂಗ್ರೆಸ್ ಸಂವಿಧಾನದ ಮೇಲೆ ಕೆಲವು ಚಿಂತನೆಗಳು

ಕಾಂಗ್ರೆಸ್ಸಿನ ನಾಲ್ಕು ಆಣೆ ಸದಸ್ಯತ್ವವನ್ನು ತೆಗೆದುಹಾಕಬೇಕೆಂಬ ಅಭಿಪ್ರಾಯ ನನಗೆ ಹೆಚ್ಚು ಹೆಚ್ಚು ಮನವರಿಕೆಯಾಗುತ್ತಿದೆ. ದೇಶದ ಇಡೀ ಜನಸ್ತೋಮ ಯಾವ ಪಂಥ, ಧರ್ಮ, ಪ್ರಾಂತ ಅಥವಾ ರಾಜ್ಯ ಅಥವಾ ಸ್ವತಂತ್ರಸ್ವಾಸ್ಥ್ಯ ಇವುಗಳಲ್ಲಿ ಯಾವುದಕ್ಕೇ ವ್ಯಕ್ತಿ ಸೇರಿದ್ದರೂ, ಅದರ ಪರಿಗಣನೆ ಇಲ್ಲದಂತೆ — ನಾಲ್ವತ್ತು ಕೋಟಿ ಜನಸ್ತೋಮ ಕಾಂಗ್ರೆಸ್ಸಿನ ಸದಸ್ಯರಾಗಬೇಕು. ಕಾಂಗ್ರೆಸ್ ಸಂಸ್ಥೆಯ ಮೂಲಕ ಸೇವೆಸಲ್ಲಿಸುವ

ಸಮಾನ ಅಧಿಕಾರ ಈ ಎಲ್ಲ ಸದಸ್ಯರಿಗೂ ಇರಬೇಕು. ಕಾಂಗ್ರೆಸ್ ಈ ರೀತಿ ಅಂಗೀಕಾರ ಮಾಡಿರುವ ಕಾರಣವನ್ನು ಮುಂದಿಟ್ಟುಕೊಂಡು ಈ ನಾಲ್ವತ್ತು ಕೋಟಿ ಸದಸ್ಯರು ಯಾವ ವಿಶೇಷ ಅಧಿಕಾರವನ್ನೂ ಪ್ರಯೋಗಿಸಲು ಅವಕಾಶವಿಲ್ಲ.

ಯಾರು ಸಂಸ್ಥೆಯ ಅಧಿಕಾರಸ್ಥಾನಕ್ಕೆ ಬರುವ ಮುನ್ನ ಒಂದು ವರ್ಷ ಖಾದೀಧಾರಿಗಳಾಗಿರುವರೋ, ಯಾರು ಅಸ್ಪೃಶ್ಯತೆಯನ್ನು ಅದರ ಎಲ್ಲ ರೂಪಗಳಲ್ಲಿಯೂ ತ್ಯಜಿಸಿರುವರೋ, ಯಾರು ವಿದೇಶೀವಸ್ತ್ರ ಅಥವಾ ಮಾದಕ ವಸ್ತುಗಳ ವ್ಯಾಪಾರಮಾಡುವುದಿಲ್ಲವೋ, ಯಾರಿಗೆ ಕಾಂಗ್ರೆಸ್ಸಿನ ನಿರ್ಮಾಣ ಕಾರ್ಯಕ್ರಮದಲ್ಲಿ ಪೂರ್ಣ ನಂಬಿಕೆ ಇದೆಯೋ, ಇದಕ್ಕೆ ಸೇರಿಸಿರುವ ಪರಿಶಿಷ್ಟದಲ್ಲಿ ಕಂಡ ಕೆಲಸವನ್ನು ಮಾಡಲು ಸಿದ್ಧರಾಗಿರುವರೋ ಮತ್ತು ದೃಢಸಂಕಲ್ಪ ಮಾಡಿರುವರೋ, ಇಂಥ ಕೆಲಸವನ್ನು ಮಾಡುವುದರಲ್ಲಿ ಆರು ತಿಂಗಳ ಪರೀಕ್ಷಾಕಾಲವನ್ನು ಯಶಸ್ವಿಯಾಗಿ ಮುಗಿಸಿರುವರೋ ಅಂಥವರಿಂದ ಮಾತ್ರ ಕಾಂಗ್ರೆಸ್ ಸಂಸ್ಥೆ ನಡೆಸಲ್ಪಡುವುದು.

ಮೇಲೆ ತಿಳಿಸಿರುವ ರೀತಿಯ ಕಾರ್ಯಕರ್ತರಿಂದಲೇ ಎಲ್ಲ ಸಮಿತಿಗಳೂ, ಉಪಸಮಿತಿಗಳೂ ರಚಿಸಲ್ಪಡಬೇಕು.

ಪರಿಶಿಷ್ಟವನ್ನು ನೀವು ತಯಾರಿಸಬೇಕು.

# ಗೃಹಮಾಧುರೀ

(೧೯೪೨ರಲ್ಲಿ ಸೇವಾಗ್ರಾಮದಿಂದ ಮುಂಬಾಯಿಗೆ ಹೊರಟಾಗ ಕಸ್ತೂರಬಾ ತಾನೇ ಈ ಪತ್ರಗಳನ್ನು ಮನು ಗಾಂಧೀಯ ಕೈಗೆ ಕೊಟ್ಟರು. ‘ಸರಕಾರವು ಸೇವಾಗ್ರಾಮ ಆಶ್ರಮವನ್ನು ಮುತ್ತಬಹುದು, ಬಾಪೂಜಿಯ ಕಾಗದಪತ್ರಗಳನ್ನು ಜಪ್ತಿ ಮಾಡಬಹುದು, ಆದ್ದರಿಂದ ಈ ಪತ್ರಗಳನ್ನು ಪ್ರತಿಮಾಡಿ ಜೋಪಾನವಾಗಿ ಇಡಲು ನಿನ್ನ ತಂದೆಯ ಬಳಿಗೆ ಕಳಿಸಿಬಿಡು’ ಎಂದು ಹೇಳಿ ಕೊಟ್ಟರು.)

ಬಾ,

ನಿನ್ನ ಪತ್ರ ಇವತ್ತು ಸಿಕ್ಕಿತು. ಮೌನವಾರದ ದಿನ ಇದನ್ನು ಬರೆಯುತ್ತಿದೇನೆ. ಮಣಿಲಾಲನ ಚಿಂತೆ ಮಾಡಬೇಡ. ಅವನಿಗೆ ನಿನ್ನ ಪತ್ರವನ್ನು ಕಳಿಸುತ್ತೇನೆ. ಪ್ರಾಗ್ಜೀ ಹೇಳಿದುದಕ್ಕಾಗಿ ಬೆದರಬೇಡ. ಬೆದರುವ ಕಾರಣವಿಲ್ಲ. ಇಬ್ಬರೂ ಪ್ರೌಢರು. ತಪ್ಪು ಆಗಿದ್ದರೆ ತಿದ್ದಿಕೊಳ್ಳುತ್ತಾರೆ. 'ಜಾಮೇ – ಜಮಷೇಡ್'ನ ವ್ಯವಸ್ಥೆ ಮಾಡಿದ್ದಾಗಿದೆ. ರಾಮಾಯಣ, ಭಾಗವತಗಳನ್ನು ಹುಡುಕಿಸುತ್ತಿದೇನೆ. ನೀನು ತರಿಸಬೇಕಾದ್ದಾದರೂ ಏನು? ಹಲ್ಲುಗಳನ್ನು ಉಪಯೋಗಮಾಡಲು ಸಾಧ್ಯವೆ? ಕೆಂಪು ನೀರನ್ನು ಮುಕ್ಕಳಿಸುತ್ತಿದೀಯಾ? ಇವತ್ತು ಮಾರುತಿಯ ಪತ್ರ ಬಂತು. ದಾದೂಭಾಯಿಯ ಲಕ್ಷ್ಮಿಗೆ ಆರನೆ ತಿಂಗಳು ನಡೆಯುತ್ತಿದೆ. ಇವೆಲ್ಲಾ ಸುದ್ದಿ ಕೇಳಿ ನನಗೆ ದುಃಖವೂ ಇಲ್ಲ, ಆಶ್ಚರ್ಯವೂ ಇಲ್ಲ. ಮದುವೆಯ ಫಲ ಎಲ್ಲರಿಗೂ ಇದ್ದದ್ದೇ. ಇದರಲ್ಲಿ ದುಃಖವೇನು, ಆಶ್ಚರ್ಯವೇನು? ....ನನ್ನೂ ನಾನೇನು ನಿಂದಿಸಲಿಲ್ಲ. ಇಂಥ ವಿಷಯಗಳಲ್ಲಿ ಪ್ರತಿಯೊಬ್ಬರೂ ತಮ್ಮ ತಮ್ಮ ಲೆಕ್ಕದಂತೆ ಸಂಯಮ ಕಾಯ್ದುಕೊಳ್ಳಬಹುದು. ಸಂಯಮದ ಮಾತು ತೀರಾ ಹೊಸದು. ಇಲ್ಲದಿದ್ದರೆ ಜನ ತಮ್ಮ ಇಷ್ಟಾನುಸಾರ ಭೋಗಿಸುತ್ತಿದ್ದರು.

ಈ ಸಲ ಠಕ್ಕರ್‌ಬಾಪಾ ನನ್ನ ಜೊತೆಯಲ್ಲಿಲ್ಲ. ೧೫ನೇ ತಾರೀಖಿಗೆ ಸಿಗುತ್ತಾರೆ. ಈಗ ಮಲಕಾನಿ ಇವಾರೆ ನನ್ನ ಹತ್ತಿರ. ಪೂರಾ ಕೆಲಸಮಾಡುತ್ತಾನೆ. ಉಳಿದವರೆಲ್ಲರೂ ಕೂಡ ಮಾಡುತ್ತಲೇ ಇವಾರೆ. ಆಂಧ್ರ ದೇಶದ ಯಾತ್ರೆ ೩ನೇ ತಾರೀಖಿಗೆ ಮುಗಿಯುತ್ತದೆ. ಆಮೇಲೆ ಮೈಸೂರಿಗೆ ಹೋಗಬೇಕು. ನಾನು ಎಲ್ಲಿದ್ದರೆ ಅಲ್ಲಿ ಗಡಿಬಿಡಿ, ಗೊಂದಲ ಆಗುತ್ತದೆ. ಎಲ್ಲರೂ ನನ್ನನ್ನು ಸಂಬಾಳಿಸುತ್ತಾರೆ. ಅದರಿಂದ ಗೊಂದಲ ಕಡಿಮೆಯಾಗುತ್ತದೆ. ಮೀರಾ ಬೇನ್ ತೀರಾ ಚಿಕ್ಕ ವಿಷಯದಲ್ಲೂ ಕಾಳಜಿ ವಹಿಸುತ್ತಾಳೆ.

ನನ್ನ ಮೌನ ಇಲ್ಲಿ ಭಾನುವಾರ ರಾತ್ರಿ ಪ್ರಾರಂಭವಾಗುತ್ತದೆ. ಆದ್ದರಿಂದ ಸೋಮವಾರ ರಾತ್ರಿಯವರೆಗೂ ಇರುವುದಿಲ್ಲ. ಇವತ್ತು

೯–೧೦ ಗಂಟೆಗೆಲ್ಲ ಮೌನ ಸಮಾಪ್ತಿ. ಯಾರ ಸಂಗಡ ಮಾತಾಡುವುದಕ್ಕೂ ಅವಕಾಶ ಸಿಗುವುದು ಕಷ್ಟ. ಏಕೆಂದರೆ, ರಾತ್ರಿ ಮಲಗುವ ಹೊತ್ತು ಆಗಿಬಿಡುತ್ತದೆ. ಬೆಳಗ್ಗೆ ಮೂರು ಗಂಟೆಗೆ ಏಳಬೇಕು.

ಈಗ ಪ್ರವಚನ:

ಸೇವೆಯಿಲ್ಲದೆ ಭಕ್ತಿಯಿಲ್ಲ. ಸೇವೆಮಾಡುವುದು ಹೇಗೆಂಬುದನ್ನು ಬರೆಯುತ್ತೇನೆ. ಜನರು ಆ ಪ್ರಶ್ನೆ ಕೇಳುತ್ತಾರೆ. ಇಂಥ ಸ್ಥಿತಿಯಲ್ಲಿ ಮಾತ್ರ ಸೇವೆ ಸಾಧ್ಯ ಎನ್ನುತ್ತಾನೆ ಒಬ್ಬ. ಇಂಥ ಅಭ್ಯಾಸಮಾಡಿದರೇನೆ ಸೇವೆ ಮಾಡಲು ಸಾಧ್ಯ ಎನ್ನುತ್ತಾನೆ ಒಬ್ಬ. ಇದೆಲ್ಲವೂ ಭ್ರಾಂತಿ. ಇಷ್ಟು ಹೋದ ವಾರವೇ ಬರೆದಿದ್ದೆ. ಯಾವ ಸ್ಥಿತಿಯಲ್ಲಿದ್ದರೂ ಮನುಷ್ಯ ಸೇವೆಮಾಡಬಲ್ಲ. ನಮ್ಮಲ್ಲಿರುವ ಶಕ್ತಿಯೆಲ್ಲವನ್ನೂ ಕೃಷ್ಣಾರ್ಪಣೆ ಮಾಡಿದರೆ ನಮಗೆ ಪೂರಾ ಅಂಕ ಸಿಗುತ್ತವೆ. ಕೋಟಿ ಕೊಡುವ ಶಕ್ತಿ ಇದ್ದವನು ಅರ್ಧ ಕೋಟಿ ಕೊಟ್ಟರೆ ಅವನಿಗೆ ಸಿಗುವುದು ಐವತ್ತೇ ಅಂಕ. ಆದರೆ ಒಂದೇ ಕಾಸು ಇದ್ದವನು ಕಾಸನ್ನು ಕೊಟ್ಟರೆ ಅವನಿಗೆ ನೂರಕ್ಕೆ ನೂರೂ ಅಂಕ ಸಿಗುತ್ತದೆ. ಆದ್ದರಿಂದ ಅಲ್ಲಿ ಕೂತಿರುವ ತಂಗಿಯರು ನೀವು, ನಿಮ್ಮ ಜೊತೆಗೆ ಸಂಬಂಧ ಬರುವ ತಂಗಿಯರ ಸಂಗಡ ಅಧಿಕಾರಿಗಳ ಸಂಗಡ ಒಳ್ಳೆಯ ರೀತಿಯಿಂದ ನಡೆದುಕೊಂಡರೆ, ನೀವು ಸೇವಾಧರ್ಮವನ್ನು ಚೆನ್ನಾಗಿ ಪಾಲಿಸಿದಿರಿ ಎನ್ನುತ್ತಾರೆ. ಅಧಿಕಾರಿಗಳ ಸಂಗಡ ಸೇವಾಭಾವದಿಂದ ನಡೆದುಕೊಳ್ಳುವುದು ಎಂದರೆ—ಸ್ವಲ್ಪವೂ ಕೇಡೆಣಿಸದಿರುವುದು, ವಿನಯವಾಗಿ ಅವರ ಸಂಗಡ ವ್ಯವಹರಿಸುವುದು, ಅವರಿಗೆ ಮೋಸಮಾಡದಿರುವುದು, ನಿಯಮಗಳನ್ನು ಪಾಲಿಸುವುದು. ಇದೇ ರೀತಿ ನಿಮ್ಮ ಸಂಪರ್ಕದಲ್ಲಿ ಬರುವ ತಂಗಿಯರೊಡನೆ, ಫೌಜದಾರಿ ಅಪರಾಧಗಳಿಗಾಗಿ ಶಿಕ್ಷೆ ಅನುಭವಿಸುತ್ತಿರುವ ತಂಗಿಯರೊಡನೆ, ಸ್ವಂತ ತಂಗಿಯರೊಡನೆ ಹೇಗೋ ಹಾಗೆ ನಡೆಯಿರಿ. ಅವರ ಮೇಲೆ ನಿಮ್ಮ ಪ್ರೀತಿಯನ್ನು ಕರೆಯಿರಿ. ನಿಮ್ಮ ಪಾವಿತ್ರ್ಯವನ್ನು ಗುರುತಿಸಿಕೊಂಡರೆ ಅವರು, ಅದೂ ಸೇವಾಧರ್ಮದ ಪಾಲನೆ ಎನಿಸೀತು. ಎರಡೂ ಕಡೆ ಉದ್ದೇಶ ಶುದ್ಧವಾಗಿರಬೇಕು. ಸ್ವಾರ್ಥಬುದ್ಧಿಯಿಂದ ಅಥವಾ ಹೆದರಿಕೆಯಿಂದ ಮಾಡಿದ ಶುದ್ಧ ವ್ಯವಹಾರ ಸೇವೆಯಲ್ಲಿ ಸೇರುವುದಿಲ್ಲ.

ಒಬ್ಬ ತನ್ನ ಸ್ವಾರ್ಥವನ್ನು ಸಾಧಿಸಲು ಕೆಲಸಮಾಡುತ್ತಾನೆ. ಇನ್ನೊಬ್ಬ ಪರಮಾರ್ಥ ದೃಷ್ಟಿಯಿಂದ ಮಾಡುತ್ತಾನೆ. ನಾವು ನೋಡುತ್ತೇವೆ. ಈಶ್ವರಾರ್ಪಣೆ ಇರುವ ಕಡೆ ಸ್ವಾರ್ಥಕ್ಕೆ ಸ್ಥಾನವೇ ಇಲ್ಲ. ಈ ರೀತಿ ಸೇವೆ ಮಾಡುವವನು ದಿನವೂ ತನ್ನ ಶಕ್ತಿ ಬೆಳೆಸುತ್ತಾನೆ. ಅದೂ ಸೇವಾಭಾವ ದಿಂದಲೇ. ಹೀಗೆ ಸೇವಾಪರಾಯಣನಾದವನ ನಗೆಯಲ್ಲಿ ಆಟದಲ್ಲಿ ಮಾತಿನಲ್ಲಿ ಎಲ್ಲದರಲ್ಲೂ ಸೇವಾಭಾವ ತುಂಬಿರುತ್ತದೆ. ಎಂದರೆ ಅವನ ಎಲ್ಲಾ ಕೆಲಸವೂ ನಿರ್ದೋಷವಾಗಿರುತ್ತದೆ. ಅಂಥ ಭಕ್ತರಿಗೆ ಈಶ್ವರನಿಂದ ಎಲ್ಲ ಬಗೆಯ ಶಕ್ತಿಯೂ ಸಿಕ್ಕಿರುತ್ತದೆ. ಹೆಂಗಸರ ಪ್ರಾರ್ಥನೆಯಲ್ಲಿ ಇದಕ್ಕೆ ಸಂಬಂಧಿಸಿದ ಮೂರು ಶ್ಲೋಕ ಇವೆ:

ಧರ್ಮಂ ಚರತ ಮಾಽಧರ್ಮಂ ಸತ್ಯಂ ವದತ ನಾನೃತಂ।
ಧೀರ್ಘಂ ಪಶ್ಯತ ಮಾ ಹ್ರಸ್ವಂ ಪರಂ ಪಶ್ಯತ ಮಾಽಪರಂ॥
ಶ್ರೂಯತಾಂ ಧರ್ಮಸರ್ವಸ್ವಂ ಶ್ರುತ್ವಾ ಚೈವಾವಧಾರ್ಯತಾಂ।
ಆತ್ಮನಃ ಪ್ರತಿಕೂಲಾನಿ ಪರೇಷಾಂ ನ ಸಮಾಚರೇತ್॥
ಶ್ಲೋಕಾರ್ಧೇನ ಪ್ರವಕ್ಷ್ಯಾಮಿ ಯದುಕ್ತಂ ಗ್ರಂಥಕೋಟಿಭಿಃ।
ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ॥

ನೆನಪಿರಲಿ, ನಾವು ಇದನ್ನೆಲ್ಲ ಓದುವುದು ಆಚರಣೆಯಲ್ಲಿ ತರಲಿಕ್ಕೆ.

ಎಲ್ಲರಿಗೂ ಬಾಪೂನ ಆಶೀರ್ವಾದ

[ಪೂಜ್ಯ ಬಾ ಜೈಲಿನಲ್ಲಿದ್ದಾಗ ಬಾಪೂ ಈ ಪತ್ರ ಬರೆದಿದ್ದರು. ಇದರ ಮೇಲೆ ತಾರೀಖು ಇಲ್ಲ. ಆದರೆ ೧೯೩೯ರದು ಪತ್ರ.]

೧೩–೨–೧೯೩೪

ಬಾ,

ಈ ಪತ್ರವನ್ನು ರೈಲಿನಲ್ಲಿ ಬರೆಯುತ್ತಿದ್ದೇನೆ. ನಿನ್ನ ಪತ್ರ ತಲುಪಿದೆ. ತುಂಬಾ ಕೆಲಸದಲ್ಲಿ ತೊಡಗಿದ್ದೆ. ಮಂಗಳವಾರ ಬರೆಯಲು ಆಗಲಿಲ್ಲ.

ಇವತ್ತು ಗುರುವಾರ. ನಿನ್ನ ಮನಸ್ಸಿಗೆ ಬಂದ ಕೆಲಸವನ್ನು ನನಗೆ ಹೇಳು. ಇಷ್ಟ ಬಂದ ಪ್ರಶ್ನೆ ಕೇಳು. ಎಲ್ಲವನ್ನೂ ನಾನು ನೋಡಿಕೊಳ್ಳುತ್ತೇನೆ. ಪ್ರಯತ್ನವನ್ನಂತೂ ಮಾಡಿಯೇ ಮಾಡುತ್ತೇನೆ. ನೀನು ಹೀರಾಲಾಲನ ಸಮಾಚಾರ ಕೇಳಿದೀಯೆ. ಅವನು ಪಾಂಡಿಚೇರಿಗೆ ಹೋಗಿದ್ದ. ಅಲ್ಲೂ ಹಣವನ್ನು ತಿರುಪೆ ಎತ್ತಿದ. ಪೂರಾ ಹೆಂಡ ಕುಡಿಯುತ್ತಿದ್ದ. ಸ್ವಲ್ಪ ಹಣ ಸಿಕ್ಕಿತು. ಈಗ ಎಲ್ಲಿದಾನೋ ಗೊತ್ತಿಲ್ಲ. ಅವನ ಗತಿ ಹೀಗೇ. ದೇವರು ಅವನಿಗೆ ಸದ್ಬುದ್ಧಿ ಕೊಟ್ಟಾಗಲೇ ಸೈ. ಇದರಲ್ಲಿ ನಮ್ಮ ಪಾಪ–ಪುಣ್ಯವೂ ಕೆಲಸ ಮಾಡುತ್ತದೆಯಲ್ಲವೆ. ಹೀರಾಲಾಲ್ ಬಸಿರಿನಲ್ಲಿದ್ದಾಗ ನಾನು ಎಷ್ಟು ಮೂಢನಾಗಿದ್ದೆ. ನಾನೂ ನೀನೂ ಏನು ಮಾಡಿದೆವೋ ಅದನ್ನು ಉಣ್ಣಲೇ ಬೇಕು. ಹಾಗೆ ನೋಡಿದರೆ, ಮಕ್ಕಳ ವ್ಯವಹಾರಕ್ಕೆ ತಂದೆತಾಯಿ ಹೊಣೆಗಾರರೇ. ಈಗ ನಾವು ಮಾಡಬಹುದಾದುದು ಇಷ್ಟೇ: ಸ್ವಯಂ ಶುದ್ಧರಾಗುವುದು, ಅವನು ಒಳ್ಳೆಯವನಾಗುವಂತೆ ಇಬ್ಬರೂ ಪ್ರಯತ್ನಪಡುವುದು. ಇಷ್ಟು ಮಾಡಿ ನಾವು ಸಂತೋಷಗೊಳ್ಳಬೇಕು. ಪರಿಶುದ್ಧತೆಯ ಪ್ರಭಾವ ತಿಳಿದಂತೆ ತಿಳಿಯದಂತೆ ಹೀರಾಲಾಲನ ಮೇಲೆ ಬೀಳುತ್ತಿರಬೇಕು. ಇತ್ತೀಚೆಗೆ ಮನುವಿನ ಪತ್ರ ಬಂದಿಲ್ಲ. ಆದರೆ ಜಮುನಾದಾಸ್ ಸಮಾಚಾರ ತಿಳಿಸಿದಾನೆ. ಸುಶೀಲಾಗೆ ಬರೆಯುತ್ತೇನೆ. ಪರಸೋತ್ತಮನ ಮದುವೆ ಹರಕಚಂದನ ಮಗಳ ಸಂಗಡ ಗೊತ್ತಾಗಿದೆ. ಪರಸೋತ್ತಮನ ಆರೋಗ್ಯ ಸುಧಾರಿಸಿದೆ ಎನ್ನುವಹಾಗಿಲ್ಲ ಈಗಲೂ. ರಣಛೋಡ್‌ಭಾಯಿಯ ಹೆಂಡತಿ ತೀರಿಕೊಂಡಳು. ಆದರಿಂದ ಮೋತೀಬೇನ್ ಉದಾಸೀನಳಾಗಿದಾಳೆ. ಅವರ ಜವಾಬದಾರಿ ಹೆಚ್ಚಿತ್ತು. ಅಂಬಾಲಾಲಭಾಯಿ, ಮೃದುಲಾ ಇಬ್ಬರೂ ನನಗೆ ಭೆಟ್ಟಿಯಾಗಿದ್ದರು. ಅಂಬಾಲಾಲ್, ಸರಳಾ ಇಬ್ಬರೂ ವಿಲಾಯತಿಗೆ ಹೋಗುತ್ತಾರೆ. ಮೂರು ನಾಲ್ಕು ತಿಂಗಳು ಅಲ್ಲಿರುತ್ತಾರೆ. ದೇವದಾಸ್–ಲಕ್ಷ್ಮಿ ಚೆನ್ನಾಗಿದಾರೆ. ನಿನ್ನ ಪತ್ರದ ಪ್ರತಿಯನ್ನು ಇಬ್ಬರಿಗೂ ಕಳಿಸುತ್ತೇನೆ. ವಲ್ಲಭಭಾಯಿಗೂ ಪ್ರತಿ ಕಳಿಸಿದೆ. ಅವರಿಗೂ ಕಾಳಜಿ ಇದೆ. ಮಾಧವದಾಸನ ಪ್ರತ್ಯುತ್ತರ ಇನ್ನೂ ಬಂದಿಲ್ಲ. ಮಥುರಾದಾಸ್ ನನ್ನ ಜೊತೆಯಲ್ಲಿ ಇದಾನೆ. ಒಂದೆರಡು ದಿನಗಳಲ್ಲಿ ಬೊಂಬಾಯಿಗೆ ಹೋಗುತ್ತಾನೆ. ಎಸ್ತರ್ ಮೆನನ್ ವಿಲಾಯತಿಯಿಂದ ಬಂದಿದಾಳೆ. ಬಂದು ಭೆಟ್ಟಿಯಾಗಿಹೋದಳು.

ಮಿಸ್ ಲೆಸ್ಟರ್ ಲಂಕೆಗೆ ಹೋಗಿದ್ದಾಳೆ. ನಿನ್ನೆ ಮದರಾಸಿನ ಯಾತ್ರೆಯನ್ನು ಮುಗಿಸಿದೆ. ರಾಜಾಜಿ ಬಿಡುಗಡೆಯಾದರು. ಅವರು ಡಿಲ್ಲೀಗೆ ಹೋಗುತ್ತಾರೆ. ಅಮ್ತುಸ್ಸಲಾಂ ಇನ್ನೂ ನಿಶ್ಶಕ್ತಳಾಗಿದ್ದಾಳೆ. ಆದುದರಿಂದ ಅವಳನ್ನು ಮದರಾಸಿನಲ್ಲೇ ಬಿಟ್ಟಿದ್ದೇನೆ. ರಾಜಾಜೀ ನೋಡಿಕೊಳ್ಳುತ್ತಾರೆ. ಕುಸುಮಳ ಅಣ್ಣ ಜಂಗ್‌ಬಹಾದೂರ್ ತೀರಿಕೊಂಡ. ಇದರಿಂದ ಅವಳಿಗೆ ಬಹಳ ದುಃಖವಾಗಿದೆ. ಪ್ಯಾರೇಲಾಲ್ ನಿನ್ನೆ ಬಿಡುಗಡೆಯಾಗಿಬಂದ. ಕಿಶೋರಿಲಾಲ್ ದೇವಲಾಲಿಯಲ್ಲಿ ಇದ್ದಾನೆ. ಲಕ್ಷ್ಮಿಯ ಹೆರಿಗೆ ಬಾರ್ಡೋಲಿಯಲ್ಲಿ ಆಗಬಹುದು. ಮಂಜೂ ಎಲ್ಲವನ್ನೂ ನಿರ್ವಹಿಸಿಯಾಳು. ನಾನೀಬೇನ್ ಝುವೇರಿ ಇವಳ ಆಪರೇಷನ್ ಆಗಿದೆ. ಆಶ್ರಮದ ಸಮಾಚಾರವನ್ನೆಲ್ಲಾ ಸರಿಯಾಗಿ ತಿಳಿಸಿದ್ದೇನೆ ಎನ್ನಬೇಕು. ಒಂಬತ್ತನೆಯ ತಾರೀಖು ಹೈದರಾಬಾದಿನಿಂದ ಹೊರಟು ಪಾಟ್ನಾಕ್ಕೆ ಹೋಗುತ್ತೇನೆ. ರಾಜೇಂದ್ರಬಾಬು ಅಲ್ಲಿ ಇದ್ದಾರೆ. ಪ್ರಭಾವತಿ ಅಲ್ಲೇ ಇದ್ದಾಳೆ. ಬಿಹಾರದಲ್ಲಿ ಬಹಳ ದಿನಗಳು ನಿಲ್ಲಬೇಕಾದ ಸಂಭವವೂ ಇದೆ.

ಇನ್ನು ಪ್ರವಚನ:

'ನಾಮ ತೋ ಆಧಾರ....' ಭಜನೆ ನೆನಪಿಲ್ಲದಿದ್ದರೆ ನೋಡಿಕೊಳ್ಳಬೇಕು. ಈಚೆಗೆ ಈ ವಿಷಯದಲ್ಲಿ ಮನಸ್ಸು ನೆಟ್ಟುಕೊಂಡಿರುತ್ತದೆ. ತುಲಸೀದಾಸರು ನಾಮದ ಮಹಿಮೆಯನ್ನು ತುಂಬಾ ಹೊಗಳಿದ್ದಾರೆ. ನಾಮ ಎಂದರೆ ರಾಮನಾಮ ಅಥವಾ ಭಗವಂತನ ಹೆಸರು. ಆದರೆ ರಾಮನಿಗಿಂತ ನಾಮ ದೊಡ್ಡದು ಎಂದು ದಾಸರು ಹೇಳಿದ್ದಾರೆ. ಎಂದರೆ, ರಾಮ ದೇಹಧಾರಿ. ಅವನಿಗೆ ಕೆಲವು ಮಿತಿ–ಮೇರೆ ಇದ್ದುವು. ಅವನ ದೇಹ ನಶ್ವರ. ಆದರೆ ಹೆಸರು ಅಮರ. ರಾಮನ ಹೆಸರಿನ ದೇಹಧಾರಿಯ ಗುಣಗಳಿಗೆ ಒಂದು ಮಿತಿ ಇತ್ತು. ರಾಮನ ಹೆಸರಿನ ಭಗವಂತನ ಗುಣಗಳಿಗೆ ಮಿತಿಯೇ ಇಲ್ಲ. ಎಷ್ಟು ಗುಣಗಳನ್ನು ಬೇಕಾದರೂ ಭಗವಂತನಿಗೆ ನಾವು ಆರೋಪಣೆ ಮಾಡಬಹುದು. ಏಕೆಂದರೆ ಈಶ್ವರನ ಗುಣ ಅನಂತ. ಆದ್ದರಿಂದಲೇ ಅವನು ಗುಣಾತೀತ, ಎಂದರೆ ಗುಣಗಳನ್ನು ಮೀರಿದವನು. ಎಷ್ಟೇ ಗುಣಗಳನ್ನು ಲೆಕ್ಕಹಾಕಿದರೂ ಭಗವಂತನ ಗುಣಗಳನ್ನು ಲೆಕ್ಕ

ಮಾಡಲು ಸಾಧ್ಯವಿಲ್ಲ. ಈ ಕಾರಣದಿಂದಲೇ ಅಲ್ಲವೆ, ಭಗವಂತ ಗುಣಗಳನ್ನು ಮೀರಿದವನು ಎನ್ನುವುದು. ಅಂಥ ಭಗವಂತನ ಹೆಸರನ್ನು ನಮ್ಮ ಹೃದಯದಲ್ಲಿ ನಾವು ಸ್ಥಾಪಿಸಿಕೊಂಡರೆ ಭವಸಾಗರವನ್ನು ಪಾರಾಗಬಹುದು. ಇದರಲ್ಲಿ ಸಂದೇಹವಿಲ್ಲ. ಆ ಹೆಸರನ್ನು ಹೇಳಿದರೆ ದುಃಖವೆಲ್ಲ ಓಡಿಹೋದೀತು. ಇದರ ಅರ್ಥ, ಏನೇ ಬರಲಿ ಸೈರಿಸಿಕೊಳ್ಳಬೇಕು. ನಮಗೆ ನಾಮಸ್ಮರಣೆಯು ರೂಢಿಯಾಗಿಬಿಟ್ಟರೆ ಬೇರೆ ಯಾವುದೂ ಅಗತ್ಯ ಇರಬಾರದು. ಈ ವಿಚಾರದಿಂದಲೇ ಈ ಭಜನೆ ರಚಿತವಾಗಿದೆ. ಕವಿ ಹಾಡಿದಾನೆ: ನನಗೆ ಒಂದೇ ಹೆಸರೇ ಆಧಾರ, ಉಳಿದದ್ದೆಲ್ಲಾ ಹುಸಿ. (ದೇಹೀ—ನಾ ಸ್ನೇಹೀ ಸಕಲ ಸ್ವಾರ್ಥಿಯಾ ಅಂತೇ ಅಲಗಾ ರಹೇಶೇ ರೇ — ದೇಹದ ಸ್ನೇಹಮಾಡುವವರೆಲ್ಲ ಸ್ವಾರ್ಥಿಗಳು. ಕಡೆಯಲ್ಲಿ ದೂರವಾಗಿಯೆ ಉಳಿಯುತ್ತಾರೆ.) ರಾಮನಾಮಸ್ಮರಣೆ ಮಾಡುವುದು ಗೊತ್ತಿದ್ದರೆ ಕಟ್ಟಕಡೆಗೆ ಜೊತೆಯಲ್ಲಿ ಬರುವುದು ರಾಮನಾಮವೇ.

**ಬಾಪೂನ ಆಶೀರ್ವಾದ**

ಬಾ,

ಇವತ್ತು ನಿನ್ನ ಪತ್ರ ಬರಲಿಲ್ಲ. ಆಶ್ಚರ್ಯ ಎನಿಸುತ್ತದೆ. ರಾಮದಾಸನ ಚಿಂತೆ ಮಾಡಬಾರದು. ಸುಮಿತ್ರಾ ತನ್ನ ಕಣ್ಣಿನ ಬಗ್ಗೆ ನಿನಗೆ ಬರೆಯಬಹುದು. ಅಮ್ತುಸ್ಸಲಾಂ ಮತ್ತು ವಸುಮತಿ ಅಲ್ಲಿಗೆ ಹೋಗುತ್ತಿರುತ್ತಾರೆ. ರಾಧಾಕಿಷನ್ ಇದ್ದೇ ಇದಾನೆ. ಅಮಲಾಗೆ (ಯೂರೋಪಿಯನ್ ತಂಗಿ) ಶಾಂತಿನಿಕೇತನದಲ್ಲಿ ಕೆಲಸ ಸಿಕ್ಕಿದೆ. ಅವಳಿಗೆ ಸಂತೋಷವಾಗಿದೆ. ನಿನ್ನನ್ನು ಬಹಳ ನೆನೆದುಕೊಳ್ಳುತ್ತಾಳೆ. ನೀನು ಅವಳನ್ನು ಮಗಳ ಹಾಗೆ ನೋಡಿಕೊಂಡೆ. ಕಾಕಾಸಾಹೇಬರಿಗೆ ಜ್ವರ ಬರುತ್ತಿತ್ತು. ಈಗ ಇಳಿದಿದೆ. ಅವರನ್ನು ನೋಡಿಕೊಂಡು ಬರಲು ನಾನು ನಿತ್ಯವೂ ನಡೆದುಹೋಗುತ್ತಿದೇನೆ.

ಮೊದಲು ನಾನು ನಿನಗೆ ಕೊಟ್ಟಿದ್ದ ಗಣಿತದ ಪಾಠದಲ್ಲಿ ಸ್ವಲ್ಪ ತಪ್ಪು ಇತ್ತು. ನಿನಗೆ ಪೂರ್ತಿ ಬರುವುದಿಲ್ಲವಲ್ಲ. ಆದರಿಂದ ಆ ತಪ್ಪು ಉಳಿದಿದ್ದವು. ಈಗ ಕೆಳಗೆ ಬರೆಯುವುದನ್ನು ಚೆನ್ನಾಗಿ ನೆನಪಿಡಬೇಕು.

ಒಂದು ಮಣಕ್ಕೆ ೪೦ ಸೇರು.

ಆಣೆಗಳನ್ನು ರೂಪಾಯಿ ಮಾಡಬೇಕು ಎಂದರೆ ಯಾವಾಗಲೂ ಅವನ್ನು ೧೬ರಿಂದ ಭಾಗಿಸಬೇಕು. ಏಕೆಂದರೆ ಹದಿನಾರು ಆಣೆಗೆ ಒಂದು ರೂಪಾಯಿ. ಉದಾಹಣೆಗೆ:

೧೩೦ ಆಣೆಗಳನ್ನು ರೂಪಾಯಿ ಮಾಡು ಎಂದರೆ,

೧೬ ) ೧೩೦ ( ೮
೧೨೮
――
೨

೮ ರೂಪಾಯಿ ೨ ಆಣೆ ಆಗುತ್ತದೆ.

ಇದೇ ರೀತಿ ಕಾಸುಗಳನ್ನು ಆಣೆ ಮಾಡಬೇಕಾದರೆ ೧೨ರಿಂದ ಭಾಗಿಸಬೇಕು. ಏಕೆಂದರೆ, ಒಂದು ಆಣೆಗೆ ಹನ್ನೆರಡು ಕಾಸು.

ಸೇರುಗಳನ್ನು ಮಣ ಮಾಡಬೇಕಾದರೆ ಹೀಗೇ ೪೦ರಿಂದ ಭಾಗಿಸಬೇಕು.

ಸ್ವಲ್ಪ ವ್ಯಾಕರಣದ ಚರ್ಚೆ ಮಾಡುತ್ತೇನೆ:

ಇದಕ್ಕೆ ಇದೇ ಹೆಸರು ಎಂದು ಗೊತ್ತಾಗಿರುವ ಕಡೆ ಆ ಹೆಸರನ್ನು ಸಾಮಾನ್ಯ ಹೆಸರು ಎನ್ನುವುದಿಲ್ಲ. 'ಗಾಂಧೀ' ಎಂಬುದು ಸಾಮಾನ್ಯ ನಾಮ. ಆ ಹೆಸರಿನವರು ಬಹಳ ಜನ ಇರುತ್ತಾರೆ. ಕಿರಾಣಿ ಅಂಗಡಿಯವರಿಗೂ ಅದೇ ಹೆಸರು. ಆದರೆ 'ಕಸ್ತೂರಬಾ ಗಾಂಧಿ' ಎಂದರೆ ಆ ಹೆಸರು ವಿಶಿಷ್ಟವಾಯಿತು, ಸ್ವಂತವಾಯಿತು. ಏಕೆಂದರೆ ಅದು ಒಬ್ಬರ ಹೆಸರು ಎಂದು ಗೊತ್ತಾವದ್ದು. ಎಲ್ಲರೂ ಆ ಹೆಸರು ಕೇಳಿದ ಕೂಡಲೆ ಅವರನ್ನು ಗುರುತಿಸಬಹುದು.

ಸಾಕು, ಇವತ್ತು ಬಹಳ ಹೆಚ್ಚಾಯಿತು. ಇನ್ನೂ ಹೆಚ್ಚಾದರೆ ನೀನು ಗಟ್ಟಿಮಾಡಲಾರೆ. ನಿನ್ನ ಆರೋಗ್ಯ ಹೇಗಿದೆ? ನನ್ನ ಚಿಂತೆ ಎಳ್ಳಷ್ಟೂ ಮಾಡಬಾರದು. ಹಾಗೆ, ಊಟ ಮಾಡುವಾಗ ನೀನು ಇಲ್ಲದ್ದು ಮನಸ್ಸಿಗೆ ಬಹಳ ಅನಿಸುತ್ತದೆ. ಆದರೆ ನಿನ್ನ ಹಾಗೇ ಬೇರೆಯುವರು ನನ್ನನ್ನು

ಸರಿಯಾಗಿ ವಿಚಾರಿಸಿಕೊಳ್ಳುತ್ತಿದ್ದಾರೆ. 'ಊಟ ಮಾಡುವಾಗ ಯಾರಾದರೂ ಬೀಸಣಿಗೆ ಬೀಸುತ್ತಾರೋ ಇಲ್ಲವೋ? ಹಾಲು ಎಷ್ಟು ಕುಡಿಯುತ್ತೀರಿ?' ಎಂದು ವಿಚಾರಿಸಿದೀಯೆ.

ಬೀಸಣಿಗೆ ಬೀಸಲಿಕ್ಕೆ ಒಬ್ಬರಿಗೆ ಹೇಳಿದರೆ ಹತ್ತು ಜನ ಬಂದು ನಿಂತಾರು. ಆದರೆ ಹೀಗೆ ಬೀಸಣಿಗೆ ಬೀಸಿಸಿಕೊಂಡು ಊಟಮಾಡುವ ಸುಖಭೋಜನ ನನ್ನ ಪಾಲಿಗೆ ಇಲ್ಲ. ದಿವಾನನ ಮಗನೇ ನಿಜ ನಾನು. ಆದರೆ ನಮ್ಮ ತಂದೆಯೇ ಇಂಥ ಭೋಗವನ್ನು ಭೋಗಿಸಲಿಲ್ಲ. ನೀನು ಕೇಳಿದ ಕಾರಣವೇ ಬೇರೆ. ಎಲೆಯಲ್ಲಿ ನೊಣ ಕೂಡದಿರಲಿ ಎಂಬ ಅರ್ಥದಲ್ಲಿ ನೀನು ಕೇಳಿದೀಯೆ, ನಾನು ಉತ್ತರ ಕೊಟ್ಟಿರುವುದು ಬೇರೆ ಅರ್ಥದಲ್ಲಿ.

ಎಲ್ಲಿ ಹೋದರೂ ಬಡತನವೇ ವಿನಾ ಯಾರ ಮುಖದಲ್ಲೂ ಕಾಂತಿಯಾಗಲಿ ತೇಜಸ್ಸಾಗಲಿ ಇಲ್ಲ. ದುಡ್ಡಿದ್ದವರು ಇಂಗ್ಲೀಷ್ ಸರಕಾರದ ಗುಲಾಮರಾಗಿರುವುದನ್ನು ಕಾಣುತ್ತೇನೆ. ಈ ಗುಲಾಮರ ಅವಸ್ಥೆಯನ್ನು ನೋಡುವುದಕ್ಕಿಂತ ಆ ಬಡವರನ್ನು ನೋಡುವುದೇ ಮೇಲು. ಬಡತನ ಇದ್ದರೂ ಅವರೊಳಗೆ ಆಳದಲ್ಲಿ ಆತ್ಮಬಲದ ತೇಜಸ್ಸು ಇದೆ. ಆತ್ಮಬಲ ವಿಲ್ಲದ್ದು ಬೇರೆ ಎಲ್ಲ ಬಲವೂ ವ್ಯರ್ಥ. ಈ ಆತ್ಮಬಲ ಹೆಚ್ಚಾಗಿ ಹೆಂಗಸರಲ್ಲಿ ಕಾಣಬರುತ್ತಿದೆ. ನನ್ನ–ನಿನ್ನ ಜೀವನದ ಪ್ರಬಲ ಪ್ರಮಾಣವೇ ಇದೆ. ಇಂಥವೇ ಜೋಡಿ ಲೋಕದಲ್ಲಿ ಇನ್ನೂ ಇವೆ. ನಿನ್ನ ಮೇಲೆ ನನ್ನ ಒಡೆತನವನ್ನು ಎಷ್ಟು ಸಲ ನಡೆಸಿದೆನೋ ನೆನಪಿದೆಯಲ್ಲವೆ? ಈಗ ಅದನ್ನು ಆಲೋಚಿಸಿದರೆ, ನನ್ನ ಒಡೆತನದ ಒತ್ತಾಯಕ್ಕೆ ನಿನ್ನ ಆತ್ಮಬಲದಿಂದ ನೀನು ಕೊಟ್ಟ ಉತ್ತರ ನನ್ನ ಪಾಲಿಗೆ ಒಂದು ಈಶ್ವರೀಪ್ರಸಾದವಾಯಿತು. ಈ ಕಾರಣದಿಂದ ನನಗೆ ಹೀಗೆನಿಸುತ್ತದೆ: ಹಿಂದೂಸ್ಥಾನದ ಹೆಂಗಸರಲ್ಲಿ ವಿಕಾಸವಾದರೆ, ಅವರಲ್ಲಿ ಮುದುಡಿಕೊಂಡು ಮಲಗಿರುವ ಆತ್ಮಬಲವನ್ನು ಎಚ್ಚರಿಸಿದರೆ, ಅವರು ದೇಶವನ್ನೂ ಅಡಿಮೇಲು ಮಾಡಿಯಾರು. ಈ ವಿಚಾರದಿಂದಲೇ ನಾನು ಹೆಂಗಸರ ಜಾಗ್ರತಿಯ ಬಗ್ಗೆ ಒತ್ತಿ ಹೇಳುತ್ತೇನೆ. ನೀವೆಲ್ಲರೂ ತಂಗಿಯರು ಕಲೆತು ಇದರ ಬಗ್ಗೆ ವಿಚಾರ ಮಾಡಿ. ನಿನ್ನ ಜೊತೆಯಲ್ಲಿ ಎಷ್ಟು ಮಂದಿ (ಕ್ರಿಮಿನಲ್) ಅಪರಾಧಿ ಸ್ತ್ರೀಯರು ಇದಾರೆ?

ಅವರಿಗೆ ನೀನು ಏನು ಕಲಿಸಿವೆ? ಆ ತಂಗಿಯರ ಮನಸ್ಸನ್ನು ಮುಟ್ಟ ಬೇಕು. ಅವರ ಮೇಲೆ ಧಾರಾಕಾರವಾಗಿ ಪ್ರೇಮಮಯ ಮಳೆ ಕರೆಯ ಬೇಕು. ಅವರಿಗೆ ಸ್ತ್ರೀರೂಪ ದೊರೆತದ್ದು ಭಗವಂತನ ಕೃಪೆ ಎನ್ನುತ್ತೇನೆ. ಏಕೆಂದರೆ, ದೇವರು ಈ ಪ್ರಪಂಚದಲ್ಲಿ ಮನುಷ್ಯರೂಪನ್ನು ರಚಿಸಿದ್ದು ಶಕ್ತಿಯಿದ್ದಷ್ಟೂ ಸೇವೆಮಾಡಲಿ ಎಂದು. ಎಷ್ಟೋ ಸಲ ಸೇವಾಕ್ಷೇತ್ರವೋ ಸೇವಾಪಾತ್ರವೋ ಉಪಯೋಗವಲ್ಲದ್ದು ಆಗಿ ಸೇವೆಗೆ ಅಡ್ಡಿಯಾಗುತ್ತದೆ. ಗಂಡಸು–ಹೆಂಗಸು ಇಬ್ಬರಲ್ಲಿ ಪರೋಪಕಾರದ ಕೆಲಸಕ್ಕೆ ಯಾರು ಹೆಚ್ಚು ತಕ್ಕವರು ಎಂದು ಯಾರಾದರೂ ನನ್ನನ್ನು ಕೇಳಿದರೆ, ನಿಸ್ಸಂಶಯವಾಗಿ ಹಿಂದೆಮುಂದೆ ನೋಡದೆ ಸೇವೆಗೆ ಹೆಂಗಸಿನ ಹಾಗೆ ಗಂಡಸು ತಕ್ಕವನಲ್ಲ ಎನ್ನುತ್ತೇನೆ. ಹೆಂಗಸರಲ್ಲಿ ಸಹಜವಾಗಿಯೆ ಕೆಲವು ಭವ್ಯ ಸದ್ಗುಣಗಳನ್ನು ಇಟ್ಟಿದಾನೆ ಭಗವಂತ. ಆ ಸದ್ಗುಣಗಳ ವಿಕಾಸವಾಗದಂತೆ ತಡೆಯುವ ಪಾಪವನ್ನು ನಾವು ಗಂಡಸರು ತಿಳಿದೂ ತಿಳಿದೂ ಮಾಡುತ್ತೇವೆ. ನಮ್ಮಲ್ಲಿ ಆ ಸದ್ಗುಣಗಳು ಇಲ್ಲ. ಆದರೂ ಗಂಡ, ಅಣ್ಣ, ತಂದೆ ಮುಂತಾದ ಅನೇಕ ರೂಪಿನಿಂದ ಹೆಂಗಸರ ಮೇಲೆ ನಮ್ಮ ಅಧಿಕಾರವನ್ನು ನಡೆಸುತ್ತೇವೆ. ಇದೆಲ್ಲ ಅವಸ್ಥೆಗಳನ್ನು ದಾಟಬಂದೆನಲ್ಲವೆ ನಾನು? ಇವತ್ತಿನ ಪತ್ರ ವಿವಿಧ ವಿಚಾರಗಳನ್ನು ಬರೆಯಿಸಿಕೊಂಡಿತು. ಹೇಗೆ ಬರೆಯಿಸಿಕೊಂಡಿತೋ ಹಾಗೇ ಕಳಿಸುತ್ತಿದೇನೆ.

ನೀವೆಲ್ಲರೂ ಇದನ್ನು ಸರಿಯಾಗಿ ಓದಿ, ಅರ್ಥಮಾಡಿಕೊಳ್ಳಿ. ನಿಮ್ಮ ಶಕ್ತಿ ಇತರರಿಗೆ ತಿಳಿಯುವಂತೆ ಮಾಡಬೇಕು.

ತಂಗಿಯರೆಲ್ಲರ ಆರೋಗ್ಯವೂ ಸರಿಯಷ್ಟೆ? ಎಲ್ಲರಿಗೂ ನನ್ನ ಆಶೀರ್ವಾದ ಹೇಳಬೇಕು.

ತಂಗಿಯರೆಲ್ಲರಿಗೂ ಬಾಪೂನ ಆಶೀರ್ವಾದ

೧೬–೧–(?)

ಬಾ,

ಇವತ್ತು ನಾವು ಕನ್ಯಾಕುಮಾರಿಯಲ್ಲಿ ಇದೇವೆ. ನಿನ್ನ ಪತ್ರ ತಲಪಿದೆ. ನೀನು ಇಲ್ಲಿಗೆ ಬಂದಿದ್ದೆ. ಊರ್ಮಿಳಾದೇವಿ ನನ್ನ ಜೊತೆಗಿದ್ದಳು. ಇದು

ಹಿಂದೂಸ್ಥಾನದ ಕೊಟ್ಟಕೊನೆಯ ತುದಿ. ಹಿಮಾಲಯ ಮುಡಿ ಆದರೆ ಇದು ಭಾರತಮಾತೆಯ ಅಡಿ ಎನ್ನಬಹುದು. ಈ ಅಡಿಯನ್ನು ಸಮುದ್ರ ದಿನವೂ ತೊಳೆಯುತ್ತಿರುತ್ತದೆ. ಇಲ್ಲಿ ಊರು ಇಲ್ಲ. ಆದ್ದರಿಂದ ತುಂಬಾ ಶಾಂತಿ ಇದೆ. ನಾನು ಸಮುದ್ರಸ್ನಾನ ಮಾಡಿದೆ. ಇಲ್ಲಿ ಶೀತ ಆಗೀತಾದರೂ ಹೇಗೆ? ಬಹುಶಃ ಈಗ ದೇವದಾಸ, ಲಕ್ಷ್ಮಿ ದಿಲ್ಲೀಗೆ ಹೋಗಿರಬಹುದು. ರಾಜಾಜೀಯನ್ನು ಭೆಟ್ಟಿಯಾದೆ. ನನ್ನ ಊಟ ಮೊದಲಿನ ಹಾಗೇ ಇದೆ. ಶರೀರ ಚೆನ್ನಾಗಿ ಇದೆ. ಮದರಾಸಿನಿಂದ ಒಬ್ಬ ಟೈಪಿಸ್ಟನ್ನು ದೊರಕಿಸಿಕೊಂಡೆ. ಠಕ್ಕಾರ್‌ಬಾಪಾ ಬಂದಿದಾರೆ, ಮಲಕಾನಿ ದಿಲ್ಲೀಗೆ ಹೋಗಿದಾನೆ. ರಾಮದಾಸನ ಪತ್ರ, ನಿಮುವಿನ ಪತ್ರ ಈಗೀಗ ಸಿಕ್ಕಿತು. ಈಗ ಎಲ್ಲವೂ ಸರಿಯಾಗಿದೆ ಎನ್ನಬೇಕು. ರಾಮದಾಸ ಸುಮಿತ್ರೆಯ ಕಣ್ಣಿನ ಕಾಳಜಿ ಮಾಡುತ್ತಿದಾನೆ. ರಾಮದಾಸನ ಮಾತು ಇನ್ನೂ ಗಟ್ಟಿಯಾಗಿಲ್ಲ, ಈಗ ಆದೀತು. ಚಿಂತೆ ಮಾಡಬೇಕಾದ ಕಾರಣವಿಲ್ಲ. ಡಾಹೀಬೇನಳ ಆರೋಗ್ಯ ತಿಳಿಯಿತು. ಮನಸ್ಸಿನ ಪ್ರಭಾವ ಮೈಯ ಮೇಲೆ ಬೀಳುತ್ತದೆ ಎಂಬುದನ್ನು ಎಲ್ಲರೂ ನೆನಪಿಡಲಿ. ಜೈಲಿನಲ್ಲಿ ಮನುಷ್ಯನಿಗೆ ಬೇಕಾದಷ್ಟು ಯೋಜನೆ ಬರುತ್ತವೆ. ಅದನ್ನು ತಡೆಯಲು ಕಲಿಯಬೇಕು. ಎಲ್ಲಾ ಸ್ಥಿತಿಗಳಲ್ಲೂ ಮನುಷ್ಯ ಸಮಭಾವದಿಂದ ನಡೆದರೆ ಸುಖಿಯಾಗಿ ಇರಬಲ್ಲ. ಇನ್ನೂ ಶಾಂತೆ ಬಹಳ ಹಿರಿಯಳಾಗಬೇಕು. ಇನ್ನೂ ೨೦ ವರ್ಷ ಬದುಕಿ ಸೇವೆಮಾಡಲಿ. ಲಲಿತೆಯೂ ಹುಡುಗಾಟ ಆಡುತ್ತಿದಾಳೇನೋ ಅಲ್ಲವೆ? ನಿನ್ನ ಆರೋಗ್ಯಕ್ಕೆ ಯಾವುದು ಪಥ್ಯವೋ ಅದನ್ನು ತೆಗೆದುಕೋ. ಕಾಂತಿ ಈಗ ಚೆನ್ನಾಗಿದಾನೆ. ಹರ್ಷದಿಂದ ಇದಾನೆ. ತೂಕ ಸ್ವಲ್ಪ ಕಡಿಮೆಯಾಗಿದೆ. ಜಮನಾಗೆ ಬರೆಯುತ್ತೇನೆ. ಮಾಧವದಾಸನ ಸಮಾಚಾರವೇ ಈಚೆಗೆ ಇಲ್ಲ. ತಂಗಿಯ ಆರೋಗ್ಯ ಚೆನ್ನಾಗಿದೆ. ಈಗ ಮಣಿಲಾಲ್ ತುಂಬಾ ಶಾಂತನಾಗಿದಾನೆ. ಸುರೇಂದ್ರ ವರ್ಧಾದಲ್ಲೇ ಇದಾನೆ. ಜಮನಾಲಾಲಜೀಗೆ ಸಹಾಯ ಮಾಡುತ್ತಾನೆ. ತಂಗಿಯರೆಲ್ಲರಿಗೂ ಇವತ್ತು ಬಿಡುಗಡೆಯಾಗಬೇಕು. ಎಲ್ಲರಿಗೂ ಸ್ವಲ್ಪ ಸ್ವಲ್ಪ ಬರೆದಿದೇನೆ.

ಇನ್ನು ಪ್ರವಚನ :

ಭಗವದ್ಭಕ್ತ ಏಕಾಂತಸೇವಿಯಾಗಬೇಕು. ಬಹಳ ತಿಳಿದುಕೊಳ್ಳು ವಂಥದು ಈ ಮಾತು. ಈ ಜಗತ್ತಿಗೆ ನಾವು ಒಂಟಿಯಾಗಿಯೆ ಬಂದೆವು; ಒಂಟಿಯಾಗಿಯೆ ಹೋಗುತ್ತೇವೆ. ಈ ಹುಟ್ಟು–ಸಾವುಗಳ ನಡುವಿನ ಈ ಅನಿಶ್ಚಿತ ಕಾಲದಲ್ಲಿ ಯಾರ ಸಂಗಡ ತಾನೆ ನಾವು ಗಂಟು ಹಾಕಿ ಕೊಳ್ಳಲೇಕೆ? ಹುಟ್ಟಿದ್ದು ಒಂಟಿಯಾಗಿ; ಆದರೂ ಒಂಟಿಯಲ್ಲ. ತಂದೆ ತಾಯಿಯ ಜೊತೆಯಲ್ಲಿರಬೇಕು. ಅವರು ಇಲ್ಲದಿದ್ದರೆ ಒಂದು ಗಳಿಗೆಯೂ ನಾವು ಬದುಕಲಾರೆವು. ದೊಡ್ಡವರಾದಮೇಲೆ ಪ್ರಾಯಶಃ ಮದುವೆ ಮಾಡಿಕೊಳ್ಳುತ್ತೇವೆ. ಅಲ್ಲೂ ಜೊತೆ ಇದ್ದೇ ಇದೆ. ಗೆಳೆಯರ ಜೊತೆಯೂ ಇದೆ. ಆತ್ಮದ ಉನ್ನತಿಗೂ ಒಂದು ಹಂತದವರೆಗೆ ಜೊತೆ ಬೇಕು. ಇಷ್ಟಾದರೂ ಏಕಾಂತಸೇವನದ ಅಗ್ಗಳಿಕೆ ಏಕೆ? ಇದನ್ನು ತಿಳಿಯಬೇಕು. ಜೊತೆಯ ಬಗ್ಗೆ ಎಷ್ಟು ಯೋಚನೆ ಮಾಡುತ್ತೇವೋ ಅಷ್ಟು ಪರಾಧೀನ ರಾಗುತ್ತೇವೆ. ತಾಯಿ–ತಂದೆ, ಗಂಡ–ಹೆಂಡತಿ, ಗೆಳೆಯರು ಎಲ್ಲರೂ ಸ್ವಲ್ಪಮಟ್ಟಿಗೆ ನಮ್ಮನ್ನು ಪರಾವಲಂಬಿಗಳಾಗಿ ಮಾಡುತ್ತಾರೆ. ಆದರೆ ಭಗವದ್ಭಕ್ತ ತಾನು ಸ್ವತಂತ್ರ, ಅವನಿಗೆ ಈಶ್ವರನೊಬ್ಬನೇ ಅವಲಂಬನ.

ಭಗವಂತನೊಬ್ಬನೇ ನಿಜವಾದ ಜೊತೆಗಾರ. ರಥಗಾರನೂ ಹೌದು. ಅವನ ಜೊತೆ ಇದ್ದವನಿಗೆ ಬೇರೇನು ಬೇಕು? ಆದ್ದರಿಂದಲೇ ತಂದೆ–ತಾಯಿ ಹೇಳುವುದು—ಏಕಾಂತವನ್ನು ಅರಸು ಎಂದು. ಹೀಗೆಂದರೆ ಮನುಷ್ಯರ ಸಹವಾಸವನ್ನೇ ಬಿಟ್ಟು ದೂರ ಇರಬೇಕು ಎಂದಲ್ಲ. ಸಂಗದ ಬಯಕೆ ಯನ್ನು ಬಿಡಬೇಕು ಎಂದು ಅರ್ಥ. ಇಲ್ಲದಿದ್ದರೆ ಬೆದರಬೇಕಾಗಿಲ್ಲ. ಕೋಟಿ ಜನರ ನಡುವೆ ಇದ್ದರೂ ಮಾನಸಿಕ ಏಕಾಂತವನ್ನು ಉಪಭೋಗಿಸಿ ಭಗವಂತನ ನಿಕಟತೆಯನ್ನು ಅನುಭವಿಸಬೇಕು. ಏಕಾಂತಸೇವನೆ ಮಾಡು ವವನಿಗೆ ಯಾವಾಗಲೂ ದುಃಖವಿಲ್ಲ. ಎಲ್ಲೆಲ್ಲೂ ಅವನು ವಿಷ್ಣುವನ್ನೇ ನೋಡುತ್ತಾನಲ್ಲ. ಉರಿಯುವ ಕಂಬದಲ್ಲೂ ವಿಷ್ಣುವನ್ನೇ ನೋಡಿದ. ಪ್ರಯತ್ನ ಮಾಡಿದರೆ ಪ್ರತಿಯೊಬ್ಬರೂ ಏಕಾಂತಸೇವನೆಯ ಭಾವನೆಯನ್ನು ಪಡೆಯಬಹುದು. ಉದಾಹರಣೆ ಎಷ್ಟೋ ದೊರೆತಿವೆ ನಮಗೆ.

ಗೆಳೆಯರ ಅಥವಾ ಮಕ್ಕಳ ಪತ್ರ ಬರದಿದ್ದರೆ ಅಥವಾ ಸುದ್ದಿ ತಿಳಿಯದಿದ್ದರೆ ಸತ್ಯಾಗ್ರಹಿಗೆ ತಳಮಳವಾಗುತ್ತದೆ. ಸತ್ಯಾಗ್ರಹ ಮಾಡುವುದು ಎಂದರೆ ಇಂಗ್ಲೀಷ್ ಸರಕಾರದ ಧೋರಣೆಯೊಡನೆ ಹೋರಾಡಿ ಸೆರೆಮನೆಗೆ ಹೋಗಿ ಕೂಡುವುದಲ್ಲ. ನಿಜವಾದ ಸತ್ಯಾಗ್ರಹಿ ಆಗಬೇಕು. ತನುಮನಧನಗಳಿಂದ ಸಾಧುತ್ವವನ್ನು ತೋರಿಸಬೇಕು. ಸಂಪೂರ್ಣವಾಗಿ ವೀತರಾಗರಾಗಬೇಕು. ಇಂಥ ಸತ್ಯಾಗ್ರಹಿ ಆದಾಗಲೇ ನಮಗೆ ಸಫಲತೆ. ಒಂದು ಮಾತನ್ನು ನಡೆಸಲು ಶ್ರೀರಾಮಚಂದ್ರ ೧೪ ವರ್ಷ ವನವಾಸಮಾಡಿ ಎಂಥ ವಿರಕ್ತಿಯನ್ನು ತೋರಿಸಿದ! ಬುದ್ಧದೇವ ತಂದೆತಾಯಿ, ಹೆಂಡತಿಮಕ್ಕಳು ಎಲ್ಲರನ್ನೂ ಬಿಟ್ಟು ತನ್ನನ್ನೂ ಲೋಕವನ್ನೂ ಉದ್ಧಾರಮಾಡಿದ.

ಆದ್ದರಿಂದ ಏನು ಮಾಡಬೇಕೋ ನೀವೆಲ್ಲರೂ ತಂಗಿಯರು ಯೋಚಿಸಿ. ನೀವು ಎಲ್ಲಿದೀರಿ ? ಅಪ್ತೇಷ್ಟರ ಸಮಾಚಾರ ಸಿಕ್ಕರೆ ಸಂತೋಷ, ಸಿಗದಿದ್ದರೆ ದುಃಖ ಅಗಬಾರದು. ಸಾಧ್ಯವಿದ್ದಷ್ಟು ಪರಸ್ಪರ ಸೇವೆ ಮಾಡಿ. ಏನೂ ಕೆಲಸವಿಲ್ಲದಿದ್ದರೆ ರಾಟೆ-ದೇವರಂತೂ ಎದುರಿಗೇ ಇದ್ದಾನಲ್ಲ. ಒಂದೊಂದು ಎಳೆ ನೂತಾಗಲೂ ರಾಮನಾಮವನ್ನು ನೆನೆದರೆ ಅದರಿಂದ ದರಿದ್ರನಾರಾಯಣನ ಹಾಗೂ ನಿಮ್ಮ ಆತ್ಮದ ಸೇವೆ ಆಯಿತು. ನಿಮಗೆ ಮಾನಸಿಕ ಶಾಂತಿಯಂತೂ ಸಿಕ್ಕಿತು. ಸಂದೇಹವಿಲ್ಲ. ಅನುಭವಿಸಿ ನೋಡಿ ನನಗೆ ಬರೆಯಬೇಕು. ಇದರ ಅನುಭವ ಪಡೆಯಲು ಒಳ್ಳೆಯ ಸುಸಂಧಿ ನಿಮಗೆಲ್ಲರಿಗೂ ಸಿಕ್ಕಿದೆ. ಸಾಧಿಸಿ.

ಎಲ್ಲರಿಗೂ ಬಾಪೂನ ಆಶೀರ್ವಾದ

ಬಾ,

ನಿನ್ನ ಪತ್ರ ಇದುವರೆಗೂ ಬರಲಿಲ್ಲ. ಇವತ್ತು ನಾವು ಮದರಾಸು ಸೀಮೆಯ ಗುಡ್ಡದ ಮೇಲಿದೇವೆ. ಆಲ್ಮೋರಾದ ಹಾಗೇ ಈ ಗುಡ್ಡವೂ ಎತ್ತರ, ಅಲ್ಲಿಗಿಂತ ಗಿಡಬಳ್ಳಿ ಹೆಚ್ಚು ಸೊಬಗು. ಆದರೆ ಇಲ್ಲಿಂದ ಮಂಜಿನ ಬೆಟ್ಟಗಳು ಕಾಣುವುದಿಲ್ಲ. ಹಿಮಾಲಯ ಇಲ್ಲಿಗೆ ಬಹಳ ದೂರ. ಇಲ್ಲಿ ಐದನೇ ತಾರೀಖಿನವರೆಗೆ ಇರಬೇಕು. ಅಮ್ತುಸ್ಸಲಾಂ ಇಲ್ಲಿಗೆ ಬಂದಿದ್ದಾಳೆ.

ಇವತ್ತೇ ಹಿಂದಿರುಗಿ ಹೋಗಬೇಕೆನ್ನುತ್ತಿದ್ದಳು. ಐದನೇ ತಾರೀಖಿನವರೆಗೆ ಅವಳನ್ನು ನಿಲ್ಲಿಸಿಕೊಂಡಿದೇನೆ. ಅವಳ ಆರೋಗ್ಯ ಸಾಧಾರಣ ಚೆನ್ನಾಗಿದೆ. (ರಾಮಿಯ) ಕುಸುಮಾ ತೀರಿಕೊಂಡಳು. ಹರಿಲಾಲನ ಸುದ್ದಿ ಏನೂ ಇಲ್ಲ. ರಾಮದಾಸನ ಪತ್ರ ಬರುತ್ತಿವೆ. ಯಾರಾದರೂ ಸತ್ತರೆ ಬಳಗ ಎಂಬ ಕಾರಣದಿಂದ ನಾವು ಅಳುತ್ತೇವೆ. ಇವತ್ತು ಇಡೀ ದೇಶದ ಪರಿಸ್ಥಿತಿಯೇ ಹೀಗಿದೆಯಲ್ಲ. ಅದಕ್ಕಾಗಿ ನಾವು ಏಕೆ ದುಃಖಿಸುವುದಿಲ್ಲ? ಶೋಕದಲ್ಲೂ ಸ್ವಾರ್ಥವಿದೆ. ಅದರಿಂದ ನಾವು ಆಪ್ತೇಷ್ಟರು ಸತ್ತಾಗ ಅಳುತ್ತೇವೆ. ಆತ್ಮದ ಹೊರತು ಉಳಿದದ್ದೆಲ್ಲವೂ ಕ್ಷಣಭಂಗುರ. ಒಂದು ಭಾರಿ ಗಿರಣಿ ನಡೆಯುತ್ತಿದೆ. ಅದರಲ್ಲಿ ಯಾವುದೋ ಒಂದು ತಿರುಪು ಸಡಿಲವಾದರೆ ಇಡೀ ಗಿರಣಿಯೇ ನಿಂತುಹೋಗುತ್ತದೆ. ನಿಂತರೂ ಗಿರಣಿ ಯೇನೋ ಅಲ್ಲೇ ಇದೆ. ಅದೇ ರೀತಿ ಶರೀರದ ಯಂತ್ರ ಕೆಟ್ಟರೆ ದೇಹ ಕಳಚಿಕೊಳ್ಳುತ್ತದೆ. ಆದರೆ ಆತ್ಮ ಅಮರ. ಆದ್ದರಿಂದ ಕುಸುಮಾಳ ಸಾವಿಗಾಗಿ ಸ್ವಲ್ಪವೂ ಶೋಕಿಸಬಾರದು. ಅದು ಸರಿಯಲ್ಲ. ಕುಟುಂಬದ ಮಾಯೆಯ ನಡುವೆಯೆ ಇದ್ದರೂ ಸತ್ಯಾಗ್ರಹಿ ಕುಟುಂಬದ ಮಾಯೆಯನ್ನು ಕಳೆದುಕೊಳ್ಳಲು ಕಲಿಯಬೇಕು. ಕುಟುಂಬ–ಪರಿವಾರಗಳೇ ಇಲ್ಲದವನಿಗೆ ಮಾಯೆಗೆ ಸಿಗುವ ಸಂದರ್ಭವೇ ಇಲ್ಲ. ಆದರೆ ಬಂಧುಬಳಗ — ಹೆಂಡತಿ ಮಕ್ಕಳು ಅಕ್ಕತಂಗಿ ಅತ್ತೆಮಾವ ತಂದೆತಾಯಿ ಮುಂತಾದವರು—ಇದ್ದರೂ ಯಾವ ಸತ್ಯಾಗ್ರಹಿಗೆ ಇವರ ಸ್ಪರ್ಶವೇ ಆಗದೋ ಅವನು ಪಾರಾಗುತ್ತಾನೆ. ನಿಮಗೆಲ್ಲರಿಗೂ ಸುಲಭವಾಗಿ ಅರ್ಥವಾಗುವಂಥ ಭಾಷೆಯಲ್ಲಿ ಇವತ್ತಿನ ಪತ್ರ ಬರೆದಿದೇನೆ.

ಬಿಹಾರದಲ್ಲಿ ಭೂಕಂಪವಾಯಿತಲ್ಲ. ಅದರಿಂದ ೨೦–೨೫ ಸಾವಿರ ಜನ ಸತ್ತರು. ಲಕ್ಷಾಂತರ ಜನರಿಗೆ ಮನೆ ಇಲ್ಲವಾಯಿತು. ಕೋಟಿಗಟ್ಟಲೆ ನಷ್ಟ ಆಗಿದೆ. ರಾಜೇಂದ್ರಬಾಬು ಈಗೀಗ ಬಿಡುಗಡೆಯಾಗಿದಾರೆ. ಕೆಲಸದಲ್ಲಿ ಮುಳುಗಿದಾರೆ. ನಾಲ್ಕೂ ಕಡೆಯಲ್ಲೂ ಚಂದಾ ಎತ್ತುತ್ತಿದಾರೆ. ನಾನೂ ಸ್ವಲ್ಪ ಮಾಡುತ್ತಿದೇನೆ. ನನ್ನ ಹೆಸರಿಗೆ ತಂತಿ ಬರುತ್ತಿರುತ್ತವೆ. ಆಶ್ರಮ ದಿಂದ ಮೂವರನ್ನು ಅವರು ಕರೆದಿದಾರೆ. ಅದಕ್ಕಾಗಿ ನಾನು ತಂತಿ ಕೊಟ್ಟೆ. ಯಾರು ಯಾರು ಹೋಗುತ್ತಾರೋ ಇನ್ನೂ ನನಗೆ ತಿಳಿಯದು.

ಲೀಲಾವತಿಗೆ ತುಂಬಾ ಕಾಯಿಲೆಯಾಗಿದೆ. ವೇಲಾಬೇನ್ ೨೫ ಪೌಂಡು ಇಳಿದಿದಾಳೆ.

ಇವತ್ತು ಹೆಚ್ಚು ಬರೆಯುವುದಿಲ್ಲ. ನನಗೆ ಹಾಯಾಗಿದೆ.

ಬಾಪೂನ ಆಶೀರ್ವಾದ

ಕೂನೂರು

ಬಾ, ೫-೨-೧೯೩೪

ಇವತ್ತು ನಾವು ರಾಜಾಜೀಯ ಆಶ್ರಮದಲ್ಲಿ ಇದೇವೆ. ಸುಮಾರು ೨೫೦ ಜನ ಒಂದೇ ಭೋಜನಾಲಯದಲ್ಲಿ ಇಲ್ಲಿ ಊಟಮಾಡಿದರು. ಇಷ್ಟು ಜನ ನಿನ್ನೆ ಇಲ್ಲಿ ಮಲಗಿದ್ದರು. ಅವರಲ್ಲಿ ಮಥುರಾದಾಸನೂ ಒಬ್ಬ. ಪದ್ಮಾವತಿ ಇವತ್ತು ಬಂದಿದಾಳೆ. ಸೆರೆಮನೆಯಿಂದ ಬಿಡುಗಡೆಯಾದ ಮೇಲೆ ಕಾಯಿಲೆ ಬಿದ್ದಿದ್ದಳು. ಈಗ ಚೆನ್ನಾಗಿದಾಳೆ. ಇವತ್ತು ಬಾಲಸದು ಉದ್ದನೆಯ ಪತ್ರ ಬಂದಿದೆ. ಅವನು ರಾಮಜೀಭಾಯಿಯ ಜೊತೆಯಲ್ಲಿ ಕೆಲಸವನ್ನು ಮಾಡುತ್ತಿದಾನೆ, ಉಗ್ರಾಣವನ್ನು ನೋಡಿಕೊಳ್ಳುತ್ತಿದಾನೆ. ಭನ್‌ಸಾಲಿ ಹಳ್ಳಿಯ ಹತ್ತಿರ ಇರುವ ಗುಹೆಯಲ್ಲಿ ಕೂಡುತ್ತಾನೆ. ತುಟಿ ಹೊಲೆಸಿಕೊಂಡಿದಾನೆ. ನಡುವೆ ಒಂದು ಕೊಳವೆ ತೂರಿಸುವಷ್ಟು ಸಂದು ಬಿಟ್ಟಿದಾನೆ. ಕೊಳವೆಯ ಮೂಲಕ ಹಿಟ್ಟು ಕಲಸಿದ ನೀರನ್ನು ಕುಡಿಯುತ್ತಾನೆ. ಬೇರೇನನ್ನೂ ತಿನ್ನುವುದಿಲ್ಲ. ನಾರಿನ ಲಂಗೋಟಿ(ವಲ್ಕಲ)ಯನ್ನು ಧರಿಸಿದಾನೆ.

ಈಗ ಪ್ರವಚನ:

ಇವತ್ತು ಹಿಂಸೆಯ ಬಗ್ಗೆ ಬರೆಯುತ್ತೇನೆ. ಹಿಂಸೆ ಎಂದರೆ ಯಾರನ್ನಾದರೂ ಹೊಡೆಯುವುದು ಮಾತ್ರವೇ ಅಲ್ಲ. ಯಾರಿಗಾದರೂ ಕೆಟ್ಟದ್ದು ಮಾಡಿದರೂ ಅಥವಾ ಮಾಡಬಯಸಿದರೂ ಅದು ಹಿಂಸೆಯೇ. ನನಗೆ ಯಾರಾದರೂ ಸೀಸದ ಕಡ್ಡಿಯಿಂದ ಪತ್ರ ಬರೆದು ಕಳಿಸಿದರೆ, ಸೀಸದ ಕಡ್ಡಿಯಿಂದ ಬರೆಯುವುದು ಹಿಂಸೆ, ಅದರಿಂದ ಕಣ್ಣಿಗೆ ಬಹಳ ಆಯಾಸವಾಗುತ್ತದೆ ಎಂದು ಅವರಿಗೆ ಬರೆಯುತ್ತೇನೆ. ನಮ್ಮ ಜೀವಕ್ಕೆ ಕಷ್ಟ

ಕೊಡುವುದೂ ಹಿಂಸೆಯೇ ಆದ್ದರಿಂದ ನೀನು ಅಲ್ಲಿ ಕೂತು ಕೂತೇ ನನ್ನ ಬಗ್ಗೆ ಚಿಂತೆಮಾಡುತ್ತ ನಿನ್ನ ಆರೋಗ್ಯವನ್ನು ಕೆಡಿಸಿಕೊಂಡರೆ, ಅದು ಹಿಂಸೆ ಎನ್ನುತ್ತೇನೆ. ನಮ್ಮೆಲ್ಲರ ಚಿಂತೆಮಾಡುವ ಪರಮೇಶ್ವರ ಇದ್ದಾನೆ. ಒಂದು ಚಮತ್ಕಾರ ಶಕ್ತಿ ಎಂದರೂ ಸರಿ. ಅವನು ಚಿಂತಿಸುತ್ತಲೇ ಇರುತ್ತಾನೆ. ನಾವು ಮಾಡಬೇಕಾದ್ದು ಇಷ್ಟು: ನಮ್ಮ ಮೇಲೆ ಯಾವ ಕೆಲಸ ಬಂದು ಬೀಳುತ್ತದೋ ಅದನ್ನು ತನುಮನಧನಗಳಿಂದ ಪೂರ್ಣಗೊಳಿಸಬೇಕು. ಅದರಲ್ಲಿ ಸ್ವಲ್ಪವೂ ಪ್ರಮಾದವಾಗಬಾರದು. ಇದೇ ರೀತಿ ಅಲ್ಲಿ ಒಟ್ಟಾಗಿ ಇರುವ ಹೆಂಗಸರು ನೀವು ನಿಮ್ಮ ಜೊತೆಯಲ್ಲಿರುವ ಅಪರಾಧಿ ಹೆಂಗಸರಿಗೆ ಕಹಿಯಾಗುವಂಥ ಯಾವ ಮಾತನ್ನೂ ಆಡಬೇಡಿ. ನಿಜವಾದ ಮಾತು ಕಹಿಯಾದರೂ ಹೇಳಬೇಕಾದ್ದೇ. ಆದರೆ ಹೇಳುವಾಗ ಭಾಷೆಯನ್ನು ಬಳಸುವುದರಲ್ಲಿ ವಿವೇಕವಿರಬೇಕು. ಅಲ್ಲಿರುವ ಅಪರಾಧಿ ಹೆಂಗಸರು ಹಿಂದೆ ಏನು ತಪ್ಪು ಮಾಡಿದರೋ ಮಾಡಿದರು. ಮುಂದೆ ಬದುಕಿರುವವರೆಗೂ ಮತ್ತೆ ಅಂಥ ತಪ್ಪನ್ನು ಮಾಡಬಾರದು. ಇದನ್ನು ಅವರಿಗೆ ತಿಳಿಸಿ ಹೇಳಬೇಕು. ಅವರಿಗೆ ತೋರುವ ಸಹಾನುಭೂತಿಯೂ ಹಾಗಿರಬೇಕು. ಆದರೆ ನೀವು ಹೇಳುವ ಮಾತಿನಿಂದ ಅವರಿಗೆ ಉದ್ವೇಗವಾಗಲೇಕೂಡದು. ಇಷ್ಟು ಮಾಡಿದರೂ ಭಾರಿ ದೇಶಸೇವೆ ಆಯಿತು. ಪಾಪ ಆ ಹೆಂಗಸರೂ ಹಿಂದೂಸ್ಥಾನದ ಹೆಂಗಸರೇ ಅಲ್ಲವೆ? ಅಜ್ಞಾನದಿಂದ ಅಪರಾಧ ಆಗಿಹೋಗುತ್ತವೆ. ಅವಕ್ಕೆ ಅವರಿಗೆ ಶಿಕ್ಷೆಯೂ ಆಗುತ್ತದೆ.

ವಾಣಿಯ ತಪಸ್ಸು ಕಠೋರಾತಿಕಠೋರವಾದ ತಪಸ್ಸು. ವಾಣಿಯ ತಪಸ್ಸನ್ನು ಹೆಚ್ಚಿಸಲೆಂದೇ ಅಲ್ಲವೆ ಭನ್‌ಸಾಲಿ ತನ್ನ ತುಟಿ ಹೊಲೆಸಿಕೊಂಡದ್ದು? ನನಗೆ ಇದು ಹಿಡಿಸಲಿಲ್ಲ. ನಾವು ಮಾತಾಡಿದಾಗ ನಮ್ಮ ಮಾತಿನಲ್ಲಿ ಕಹಿ ಬಾರದಿದ್ದರೆ ಆಗ ನಮ್ಮ ತಪಸ್ಸು ಸಫಲವಾದಂತೆ. ನಮ್ಮ ಗುಣ ಇದರಿಂದಲೇ ವೃದ್ಧಿಯಾದೀತು. ಚಾರಿತ್ರ್ಯನಿರ್ಮಾಣವೇ ಶಿಕ್ಷಣದ ಮೊದಲನೆ ಮೆಟ್ಟಲು. ಭಗವಂತ ಹೆಂಗಸರಿಗೆ ಈ ಗುಣವನ್ನು ಸಹಜವಾಗಿ ಕೊಟ್ಟಿದ್ದಾನೆ. ಆದರೆ ಅದು ಅಡಗಿಹೋಗಿದೆ. ಅದಕ್ಕೆ ಪ್ರೋತ್ಸಾಹ ಸಿಕ್ಕಿಲ್ಲ. ಪೋಷಣೆಯಿಲ್ಲದಿದ್ದರೆ ಮಗು ಬಲಹೀನವಾಗುವುದಿಲ್ಲವೆ? ಹಾಗೆ ಆಗಿದೆ ಹಿಂದೂಸ್ಥಾನದ ಹೆಂಗಸರ ಸ್ಥಿತಿ. ಈ ಕಾರಣದಿಂದ ಹಿಂದೂಸ್ಥಾನ

ಎರಡು ಹೋಳು ಆಗಿದೆ. ಒಂದು ಹೋಳು ಬರಿಯ ಅಜ್ಞಾನದ್ದು; ಇನ್ನೊಂದು ಹೋಳು ಬರಿಯ 'ಜಂಬಗಾರರದು' ಎಂದು ಎನ್ನಬಹುದು. ನಿಮ್ಮಂಥವರು ಸೆರೆಮನೆಯಲ್ಲಿದ್ದು ಇಬ್ಬರು ತಂಗಿಯರಿಗಾದರೂ ಈ ಗುಲಾಮಗಿರಿಯಿಂದ ಬಿಡುಗಡೆ ಆಗುವುದನ್ನು ಕಲಿಸಿ ಹೊರಗೆ ಬಂದರೆ ನೀವು ಹಿಂದೂಸ್ಥಾನಕ್ಕೆ ಬಹಳ ದೊಡ್ಡ ಸೇವೆಮಾಡಿದಿರಿ ಎನ್ನುತ್ತೇನೆ. ಹೆಂಗಸರು ಮಾಡಬಲ್ಲಷ್ಟನ್ನು ಗಂಡಸರು ಯಾವ ಪರಿಸ್ಥಿತಿಯಲ್ಲೂ ಮಾಡಲಾರರು. ಅಕ್ಕನಂತೆ ಅಮ್ಮನಂತೆ ಹೆಂಡತಿಯಂತೆ ಹೆಂಗಸರು ಬಹಳ ಸಹೃದಯತೆಯಿಂದ ಕೆಲಸಮಾಡಬಲ್ಲರು. ಇಂದಿನವರೆಗಿನ ನನ್ನ ಅನುಭವ ಹೀಗೆ. ನಿನ್ನ ಉದಾಹರಣೆಯನ್ನೇ ಕೊಡುತ್ತೇನೆ—ನೀನು ನನ್ನ ಹೆಂಡತಿ. ಹೆಂಡತಿ ಎಂಬ ಸಂಬಂಧದಿಂದ ನೀನು ಮಾಡಿರುವ ಕೆಲಸ, ಎಷ್ಟೋ ಸಂದರ್ಭಗಳಲ್ಲಿ ನನಗೆ ಕೊಟ್ಟ ತಾಳ್ಮೆ, ಅದರಿಂದಲೇ ತಾನೆ ನಾನು ಇಲ್ಲಿಯ ವರೆಗೆ ಬಂದಿರುವುದು? ತಂಗಿಯಂತೆ ತಾಯಿಯಂತೆ ನೀನು ನನ್ನ ಆರೈಕೆ ಮಾಡಿ ಆರೋಗ್ಯವನ್ನು ನೋಡಿಕೊಂಡಿದೀಯೆ. ನಿನ್ನಂಥ ಗೃಹಿಣಿಯರು ಹಿಂದೂಸ್ಥಾನದಲ್ಲಿ ಇದಾರೆ. ಇಷ್ಟೇ ವ್ಯತ್ಯಾಸ: ನೀನು ಪ್ರಕಟವಾದೆ, ಉಳಿದವರು ಆಗಿಲ್ಲ. ನಿನ್ನ ಅನುಭವದ ತರುವಾಯವೇ ನಾನು ಇದನ್ನು ಕಾಣಬಲ್ಲವನಾದೆ: ದೇವರು ಹೆಂಗಸರಲ್ಲಿ ಎಂಥ ಶಕ್ತಿಯನ್ನು ಮೂಡಿಸಿ ದಾನೆ, ನಿಜವಾಗಿಯೂ ಅದ್ಭುತ!

ಇವತ್ತಿನ ಪ್ರವಚನದಲ್ಲಿ ಅನೇಕ ಅರ್ಥ ಅಡಗಿವೆ. ತಿಳಿಯದೆ ಇದ್ದರೆ ಯಾರನ್ನಾದರೂ ಕೇಳು ಅಥವಾ ನನ್ನನ್ನೇ ಕೇಳು. ನನ್ನ ಚಿಂತೆ ಎಳ್ಳಷ್ಟೂ ಮಾಡಬೇಡ. ಅಮ್ತುಸ್ಸಲಾಂ ಕಾಯಿಲೆ ಮಲಗಿದಾಳೆ. ನನ್ನ ಆರೋಗ್ಯ ಚೆನ್ನಾಗಿದೆ.

ತಂಗಿಯರೆಲ್ಲರಿಗೂ ಬಾಪೂನ ಆಶೀರ್ವಾದ

ಬಾ,

ನಿನ್ನ ಪತ್ರ ಬಂತು. ಬಿಹಾರದ ಬಗ್ಗೆ ನೀನು ಬರೆದದ್ದು ಸರಿ. ಬಹಳ ಜನ ಸತ್ತರು. ಈ ಥಂಡಿಯಲ್ಲಿ ಸಾವಿರಾರು ಜನಕ್ಕೆ ಮನೆ ಇಲ್ಲ

ವಾಯಿತು. ಹತ್ತೂ ಕಡೆಯಿಂದ ಸಹಾಯ ಒದಗುತ್ತಿದೆ. ಆಶ್ರಮದವರು —ಪಂಡಿತಜೀ, ಪಾರನೇರಕರ, ರಾವಜೀಭಾಯಿ, ಸೋಮಣ್, ಬಾಲಸ್ವಾಮಿ, ಪರ್ಥಾದ ಘೋತ್ರೆ—ಹೋಗಿದಾರೆ. ಇನ್ನೂ ಅಗತ್ಯವಾದರೆ ಉಳಿದವರನ್ನು ಕಳಿಸುತ್ತೇನೆ. ದುರ್ಗಾ ವಲಸಾಡಿಗೆ ಹೋಗಿದಾಳೆ. ವಿಲಾಯತಿಯಲ್ಲಿ ಮ್ಯೂರಿಯಲ್ ಲೆಸ್ಟರ್‌ನ ಆಶ್ರಮದಲ್ಲಿ ನಾನು ತಂಗಿದ್ದೆನಲ್ಲ. ಆಕೆ ನಾಳೆ ಭೇಟಿಗೆ ಬರುತ್ತಾಳೆ. ಸುರೇಂದ್ರನನ್ನು ಭೇಟಿಯಾಗಲು ಗಂಗಾಬೇನ್ ಪರ್ಥಾಕ್ಕೆ ಹೋಗಿದಾಳೆ. ಸುರೇಂದ್ರ ಜಮನಾಲಾಲ್‌ಜೀಯ ಬಳಿ ಕೆಲಸ ಮಾಡುತ್ತಿದಾನೆ.

ಸುಶೀಲಾ–ಮಣಿಲಾಲರ ಪತ್ರಗಳು ಬಂದಿವೆ. ಅವರ ವಿಷಯದಲ್ಲಿ ನೀನು ಚಿಂತೆಮಾಡಬಾರದು ಎಂದು ಇಬ್ಬರೂ ಬರೆದಿದಾರೆ. ಕಾಲೆನ್‌ಬಾಕ್ ಎರಡು ದಿನ ಫೀನಿಕ್ಸ್‌ನಲ್ಲಿ ಇದ್ದು ಬಂದಿದ್ದಾರೆ. ಗುಜರಾತಿನಲ್ಲಿ ಬೇರೆ ಕಡೆಗಳಲ್ಲಿ ಮಂಜು ಸುರಿದು ಬೆಳೆ ಬಹಳಮಟ್ಟಿಗೆ ನಷ್ಟವಾಗಿದೆ. ಮಂಜು ಬಹಳ ಬಿದ್ದಿತ್ತು. ವಲ್ಲಭಭಾಯಿ ಚೆನ್ನಾಗಿದಾರೆ. ಮೃದುಲಾನ ಪತ್ರ ಬಂದಿದೆ. ಅವಳೂ ನೆಟ್ಟಗೆ. ದೇವರು ಹೇಗೆ ಇಟ್ಟರೆ ಹಾಗೆ ಇರಬೇಕು. ಆ ಸ್ಥಿತಿಗೆ ಮುಟ್ಟಬೇಕಾದರೆ ಪ್ರಪಂಚದ ಎಲ್ಲ ಪದಾರ್ಥಗಳ ಆಸಕ್ತಿಯನ್ನೂ ಬಿಡಬೇಕು. ಗುಜರಾತ, ಬಿಹಾರ, ಬೇರೆ ಕಡೆ, ಎಲ್ಲೆಲ್ಲಿ ಪ್ರಕೃತಿಯ ಕೋಪ ಪ್ರಕಟವಾಯಿತೋ ಅಲ್ಲಿ. ಅದರೊಳಗಿಂದಲೇ ದಾರಿ ಹುಡುಕುವುದನ್ನು ಕಲಿಯಬೇಕು. ಕೈಹಿಸುಕಿಕೊಂಡರೆ ಅಥವಾ ಗೋಳಾಡಿದರೆ ಏನೂ ಸಿಗುವುದಿಲ್ಲ. ಪುರುಷಾರ್ಥ ಮಾಡಲು ಈಶ್ವರೀ ಅವಕಾಶ ಸಿಗುತ್ತದೆ. ಈ ಅವಕಾಶವನ್ನು ಸದುಪಯೋಗಮಾಡಿಕೊಳ್ಳುವುದು ಹೇಗೆ ಎಂಬುದನ್ನು ಯೋಚಿಸಿ ಉಚಿತ ರೀತಿಯಲ್ಲಿ ನಮ್ಮ ಸಾಮರ್ಥ್ಯವನ್ನು ಪ್ರಕಟಿಸಬಲ್ಲೆವಾದರೆ ಆಗ ಹಿಂದೂಸ್ಥಾನದ ಗುರಿ ಮುಟ್ಟೀತು. ಪ್ರಭುವಿಗೆ ವಿಮುಖರಾದರೆ ಸಂಕಟ ಬರುತ್ತದೆ. ಅಭಿಮುಖರಾದರೆ ಅವಶ್ಯವಾಗಿ ಸುಖ ಸಿಗುತ್ತದೆ.

ಇಡೀ ಮನುಷ್ಯಜಾತಿ ಒಂದೇ ಶರೀರ ಅಥವಾ ಒಂದೇ ಪ್ರಾಣಿ. ಆದ್ದರಿಂದ ಒಬ್ಬ ವ್ಯಕ್ತಿಯ ಕಲ್ಯಾಣ ಕೇವಲ ಅವನೊಬ್ಬನನ್ನೇ ಅವಲಂಬಿಸಿಲ್ಲ. ಅವನ ನೆರೆಯವರನ್ನೂ ಅವಲಂಬಿಸಿದೆ. ಅವನ ಕೆಟ್ಟ ಕೆಲಸವನ್ನು

ಉಳಿದವರು ಹೆಚ್ಚೋ ಕಡಮೆಯೋ ಸೈರಿಸಿಕೊಳ್ಳಬೇಕಾಗುತ್ತದೆ. ಅವನು ಮಾಡಿದ ಒಳ್ಳೆಯ ಕೆಲಸದ ಫಲ ಎಲ್ಲರಿಗೂ ಸಿಗುತ್ತದೆ. ಪ್ರತಿಯೊಬ್ಬನೂ ತನ್ನ ನೆರೆಯವರ ಜವಾಬದಾರಿಯನ್ನು ಸ್ವಲ್ಪ ಹೆಚ್ಚೋ ಕಡಮೆಯೋ ಹೊರಲೇಬೇಕು. ಸರ್ವೋತ್ತಮ ಪುರುಷ ಅಥವಾ ಸರ್ವಶಕ್ತಿವಂತ ಎಲ್ಲರ ಭಾರವನ್ನೂ ಹೊರಬೇಕಾಗುತ್ತದೆ. ಆದ್ದರಿಂದ ನಮ್ಮ ಮೇಲೆ ಬಂದುಬೀಳುವ ಸಂಕಟ ಸುಮ್ಮನೆ ಬರುವುದಿಲ್ಲ. ಪರಮದಯಾಳುವಾದ ಪರಮಾತ್ಮ ನಾವು ಎಚ್ಚರವಾಗಿರುವಂತೆ ಅದನ್ನು ಕಳಿಸುತ್ತಾನೆ. ಏಕೆಂದರೆ, 'ಸಂಕಟ ಬಂದರೆ ವೆಂಕಟರಮಣ.'

ಇವತ್ತು ಬಹಳ ಬರೆದೆ. ಬ್ರಿಜ್‌ಕೃಷ್ಣ ಚೆನ್ನಾಗಿದಾನೆ. ನಿಧಾನವಾಗಿ ಶಕ್ತಿ ಬರುತ್ತಿದೆ. ಮದರಾಸಿನಲ್ಲಿ 'ಹಿಂದೂ' ಎಂಬ ಪತ್ರಿಕೆ ಹೊರಡುತ್ತದೆ. ಬಹಳ ಪ್ರಸಿದ್ಧವಾದುದು. ಅದರ ಸಂಪಾದಕರು ತೀರಿಹೋದರು ಎಂದು ತಂತಿ ಬಂದಿದೆ. ನಾನು ಸಹಾನುಭೂತಿಯ ಪತ್ರವನ್ನು ಬರೆದಿದೇನೆ. ಪ್ರಭಾವತಿ ಚೆನ್ನಾಗಿದಾಳೆ. ಪಾಟ್ನಾದಲ್ಲೇ ಇದಾಳೆ. ನಿನ್ನದೂ ಉಳಿದವರದೂ ಆರೋಗ್ಯ ಹೇಗಿದೆ? ನಾಳೆ ಬೆಳಗ್ಗೆ ಇಲ್ಲಿಂದ ಇಳಿಯುತ್ತೇನೆ. ರಾಜಾಜೀಯನ್ನು ಭೆಟ್ಟಿಯಾಗುತ್ತೇನೆ. ನಿನಗೆ ನಾಲ್ಕನೆಯ ಪುಸ್ತಕ, ಇತಿಹಾಸ, ಭೂಗೋಳ, ಗಣಿತ ಮುಂತಾದ್ದು ಕಳಿಸಿದ್ದೆ. ತಲಪಿರಬೇಕು. ಲೆಕ್ಕ ಮಾಡುವುದು ಚೆನ್ನಾಗಿ ಬಂದರೆ ಗಣಿತ ಚೆನ್ನಾಗಿ ಬರುತ್ತದೆ. ತಪ್ಪು ಆದರೆ ಬಾಯಿಪಾಠ ಮಾಡುವ ಬದಲು ಬರೆಯುವ ರೂಢಿ ಮಾಡು. ಅಕ್ಷರವೂ ಚೆನ್ನಾಗುತ್ತದೆ, ನೆನಪೂ ಉಳಿಯುತ್ತದೆ. ನಾನು ಬೇರೆ ಬೇರೆ ಊರುಗಳಿಂದ ಪತ್ರ ಬರೆಯುತ್ತೇನಲ್ಲ. ನಕ್ಷೆ ತೆಗೆದು ಆ ಊರುಗಳು ಎಲ್ಲಿವೆಯೋ ನೋಡು. ಆ ಊರುಗಳ ವಿಶೇಷವೇನೋ ಭೂಗೋಳ ಪುಸ್ತಕ ನೋಡಿ ತಿಳಿದುಕೊಳ್ಳಬೇಕು. ನನಗೆ ಬಿಡುವಿಲ್ಲ. ಇದ್ದರೆ ಅಲ್ಲಿಂದಲೇ ನಿನಗೆ ಭೂಗೋಳ, ಇತಿಹಾಸ, ಗಣಿತ ಮುಂತಾದುವನ್ನು ಕಲಿಸುತ್ತಿದ್ದೆ.

ನನ್ನ ಬಗ್ಗೆ ಎಳ್ಳಷ್ಟೂ ಚಿಂತೆ ಬೇಡ.

ಬಾಪೂನ ಆಶೀರ್ವಾದ

ಬಾ,

ಈ ಸಲ ನಿನ್ನ ಪತ್ರ ಇದುವರೆಗೂ ಬಂದಿಲ್ಲ. ನಾನೂ ಕೂಡ ಅಂಚೆ ಸರಿಯಾಗಿ ತಲಪಲಾರದಂಥ ಸ್ಥಳದಲ್ಲಿ ತಿರುಗಾಡುತ್ತಿದೇನೆ. ಇಲ್ಲಿ ರೈಲೇ ಇಲ್ಲ. ಸಮುದ್ರತೀರದ ಚಿಕ್ಕಚಿಕ್ಕ ಹಳ್ಳಿಗಳಲ್ಲಿ ತಿರುಗಾಡುತ್ತಿದೇನೆ. ಇಲ್ಲಿ ಹೊಳೆ-ಕಾಲುವೆಗಳು ಬಹಳ. ಇಲ್ಲಿ ರೈಲುದಾರಿ ಮಾಡುವುದಕ್ಕೆ ಬಹಳ ವೆಚ್ಚವಾದೀತು. ಪರ್ವತಗಳ ನಡುವೆ ಸಮುದ್ರ ಬಂದಿದೆ. ಅದರಿಂದ ಗುಡ್ಡಬೆಟ್ಟಗಳ ತೊರೆಗಳು ಸಮುದ್ರದ ಜೊತೆಗೆ ಸೇರಿ ಒಂದು ಕೊಲ್ಲಿ ಆಗಿದೆ. ಈ ಕೊಲ್ಲಿಯನ್ನು ದಾಟಬೇಕಾದರೆ ದೋಣಿಗಳಲ್ಲೇ. ಇಂಥ ಸ್ಥಳಗಳಲ್ಲಿ ಯಾತ್ರೆ ಬೇಗ ಸಾಗದು. ಆದ್ದರಿಂದ ಅಂಚೆ ಬಹಳ ನಿಧಾನವಾಗಿ ಸಿಗುತ್ತದೆ. ಇವತ್ತು ಬೆಳಗ್ಗೆ ಕುಂದಾಪುರ ಎಂಬ ಊರಿನಲ್ಲಿ ಆವಿದೋಣಿ ಯಲ್ಲಿ ಕುಳಿತೆವು. ರಾತ್ರಿ ಕಾರವಾರವನ್ನು ತಲಪುತ್ತೇವೆ. ಹನ್ನೆರಡು ಗಂಟೆ ಸಮುದ್ರಪ್ರಯಾಣ. ನೀನು ಮಂಗಳೂರಿಗೆ ಬಂದಿದೀಯೆ. ನಿನ್ನೆ ನಾವು ಮಂಗಳೂರಿನಲ್ಲಿದ್ದೆವು. ಅಲ್ಲಿಂದ ಹೊಳೆಗಳನ್ನು ದಾಟಿ ನಿನ್ನೆ ರಾತ್ರಿ ಕುಂದಾಪುರವನ್ನು ತಲಪಿದೆವು. ಅಲ್ಲಿ ಆವಿದೋಣಿಯಲ್ಲಿ ಕೂತೆವು. ಇಲ್ಲಿ ಜನರು ಕನ್ನಡ ಮಾತಾಡುತ್ತಾರೆ. ಇದೆಲ್ಲವೂ ಗಂಗಾಧರರಾಯರ ಪ್ರದೇಶ. ಈ ಇಡೀ ಪ್ರಾಂತವನ್ನು ಕರ್ನಾಟಕ ಎನ್ನುತ್ತಾರೆ. ೫-೬ಕ್ಕೆ ನಾನು ಬೆಳಗಾಂನಲ್ಲಿ ಇರುತ್ತೇನೆ. ಸಮುದ್ರ ತೀರವಾದ್ದರಿಂದ ಗಾಳಿ ತಂಪು. ಕರ್ನಾಟಕವನ್ನು ಮುಗಿಸಿ ಪಾಟ್ನಾಕ್ಕೆ ಹೋಗಲು ನಿಶ್ಚಯಿಸಿದೇನೆ. ಒಂಬತ್ತನೇ ತಾರೀಖು ಹೈದರಾಬಾದಿನಲ್ಲಿರುತ್ತೇನೆ. ಅಲ್ಲಿಂದ ಪಾಟ್ನಾದ ರೈಲು ಹತ್ತಬೇಕು. ಹೈದರಾಬಾದಿನಲ್ಲಿ ಸರೋಜಿನೀದೇವಿಯ ಭೇಟಿ ಆದರೂ ಆಗಬಹುದು. ಪದ್ಮಿನಿ ಅಲ್ಲೇ ಇದಾಳೆ. ಪಾಟ್ನಾಕ್ಕೆ ಹೋಗುವಾಗ ವರ್ಧಾ ಸಿಗುತ್ತದೆ. ಅಲ್ಲಿ ಪ್ಯಾರೆಲಾಲನ ಭೇಟಿಯಾಗಬಹುದು. ಈಗಲೇ ಬಿಡುಗಡೆಯಾಗಿ ಬಂದಿದಾನೆ. ಬಿಡುಗಡೆಯಾಗಿ ಅಲ್ಲಿಗೆ ಹೋಗಿದಾನೆ. ಪೃಥ್ವೀರಾಜ ನನ್ನ ಜೊತೆಯಲ್ಲಿದಾನೆ. ಅವನಿಗೆ ಈಗಲೇ ಪಾಟ್ನಾಕ್ಕೆ ಹೋಗುವ ಇಷ್ಟವಿಲ್ಲ. ಮಹಾದೇವನ ಆರೋಗ್ಯ ಚೆನ್ನಾಗಿದೆ. ದುರ್ಗಾ ಭೆಟ್ಟಿಯಾಗಿ ಬಂದಳು. ಜೊತೆಯಲ್ಲಿ ಜೀವನಜಿ ಇದ್ದ. ಪ್ರಭಾವತಿ-ಜಯಪ್ರಕಾಶ ನಾರಾಯಣರು ಪಾಟ್ನಾದಲ್ಲಿ ಕ್ಷಾಮನಿವಾರಣೆಯ ಕೆಲಸದಲ್ಲಿ

ಇದಾರೆ. ಈ ಜೋಡಿ ಅದ್ಭುತವಾದುದು. ಇಬ್ಬರೂ ಮಹಾಜೀವಿಗಳು; ಸೇವಾಭಾವಿಗಳು. ಇಷ್ಟೊಂದು ವಿದ್ವಾಂಸನಾದರೂ ಜಯಪ್ರಕಾಶ್ ನಮ್ರರಲ್ಲಿ ನಮ್ರ ಮನುಷ್ಯ.

ಇನ್ನು ಪ್ರವಚನ:

ನಾಮಮಹಿಮೆ: ನಾಮಸ್ಮರಣೆ ಮಾಡುವುದು ಹೇಗೆ? ಸಾವಿರ ವಿಚಾರ ಬಂದುಹೋಗುತ್ತಿರುತ್ತವೆ. ಇಂಥವರಲ್ಲಿ ನಾಮಸ್ಮರಣೆ ಮಾಡಿ ಏನು ಪ್ರಯೋಜನ? ನಾಮಸ್ಮರಣೆ ಮಾಡುವುದಾದರೆ ಮನಃಪೂರ್ವಕ ವಾಗಿ ಮಾಡಬೇಕು. ಇಲ್ಲದಿದ್ದರೆ ಬೇಡ. ಇದು ಸರಿ, ಸರಿಯೂ ಅಲ್ಲ. ಜನರಿಗೆ ತೋರಿಕೆಗಾಗಿ ನಾಮಸ್ಮರಣೆಮಾಡಿದರೆ ಅದರಿಂದ ಏನೂ ಫಲವಿಲ್ಲ. ಫಲ ಹೋಗಲಿ, ಪಾಪ ಬರುತ್ತದೆ. ಏಕೆಂದರೆ ಅದು ಬರೀ ಮೋಸ. ಆದರೆ ಶುದ್ಧಭಾವದಿಂದ ನಾಮಸ್ಮರಣೆಮಾಡಬಯಸಿದವನಿಗೆ ಆ ಸಮಯ ದಲ್ಲಿ ಬೇರೆ ವಿಚಾರ ಬಂದರೂ ಅವನು ದಣಿಯಬಾರದು. ವಿಚಾರ ಬರುತ್ತಿದ್ದರೂ ಸರಿಯೆ, ನಾಮಸ್ಮರಣೆಮಾಡುತ್ತಿರಬೇಕು. ಹೀಗೆ ಮಾಡುತ್ತ ಮಾಡುತ್ತ ಎಂದೋ ಒಂದು ದಿನ ಅದು ಹೃದಯದಲ್ಲಿ ಅಂಕಿತವಾದೀತು. ಓದುಬರೆಹ ಬಾರದವರೂ ಮೂರ್ಖರೂ ಕೂಡ ನಾಮಸ್ಮರಣೆ ಮಾಡ ಬಹುದು. ಅದರ ದೆಸೆಯಿಂದಲೇ ನಾಮದ ಮಹಿಮೆಯನ್ನು ಹೊಗಳು ತ್ತಾರೆ. ನಾಮಸ್ಮರಣೆಯನ್ನು ಒಂದು ಗಳಿಗೆಯಲ್ಲಿ ಕಲಿಯಬಹುದು. ಆಮೇಲೆ ಜಪಿಸುತ್ತಾ ಇರಬೇಕು. ಹೀಗೆ ಮಾಡುತ್ತ ಮಾಡುತ್ತ ಅವನಿಗೆ ಅದು ರೂಢಿಯಾಗಿ, ಅದರ ಹೊರತು ನಡೆಯದಂತೆ ಆಗುತ್ತದೆ. ಊಟ–ತಿಂಡಿ, ಪಾನ–ಸ್ನಾನ, ನಿದ್ದೆ–ಎಚ್ಚರ ಯಾವಾಗಲೂ ಸ್ಮರಣೆ ಸಾಗಿರಬೇಕು. ಹೀಗೆ ರೂಢಿಯಾದವನ ಹೃದಯದಲ್ಲಿ ನೆಟ್ಟಿತು ಎನ್ನಬಹುದು. ಇಂಥ ಮನುಷ್ಯರು ಬಹಳಿಲ್ಲ. ಆ ಕೆಲವರು ದುಃಖಗಳಿಂದ ಪಾರಾಗುತ್ತಾರೆ. ಈ ವಿಷಯವಾಗಿ ಹನುಮಂತನ ಸೊಗಸಾದ ಕಥೆಯೊಂದನ್ನು ನಮ್ಮ ಪಂಡಿತರ ಗುರುಗಳು ಆಶ್ರಮದಲ್ಲಿ ಹೇಳಿದ್ದರು. ಮುಂದಿನ ವಾರ ಅದನ್ನು ಬರೆಯುತ್ತೇನೆ.

ಕಳೆದ ವಾರದ ಪ್ರವಚನ ಮನಸ್ಸಿಗೆ ಬಂತೇ? ನಿನ್ನ ಅಕ್ಷರ ಇನ್ನೂ ಸುಧಾರಿಸಬೇಕು. ಗಣಿತದ ಕೆಲಸ ಹೇಗೆ ನಡೆಯುತ್ತಿದೆ? ಮಗ್ಗಿ ಚೆನ್ನಾಗಿ ಬಂದರೆ ಏನೂ ಕಷ್ಟವಿಲ್ಲ. ಕೆಳಗಿನ ಹಣವನ್ನು ಕೂಡಿ ಬರೆದು ಕಳಿಸು. ಇಲ್ಲಿಂದ ನಿನಗೊಂದು ಗಣಿತದ ಪಾಠವನ್ನು ಕಳಿಸುತ್ತಿದೇನೆ.

| ರೂ. | ಆಣೆ | ಕಾಸು |
| --- | --- | --- |
| ೨೫೦ | ೯ | ೬ |
| ೩೨೩ | ೧೨ | ೩ |
| ೧೦ | ೨ | ೯ |
| ೨೧ | ೬ | ೮ |

ರೂಪಾಯಿ ಆಣೆ ಕಾಸಿನ ಕೋಷ್ಟಕ ನೆನಪಿದೆ ತಾನೆ? ಒಂದು ಭಜನೆ ಬರೆದು ಕಳಿಸು. ನೀನು ಗುಜರಾತಿ ಎಷ್ಟು ಕಲಿತಿದೀಯೋ ತಿಳಿಯುತ್ತದೆ. ರಾಮಾಯಣದ ಒಂದು ಚೌಪದಿ ಬರೆ. ಬಾಲಬೋಧ ಅಕ್ಷರ ಹೇಗಿದೆಯೋ ನೋಡೋಣ.

ತಂಗಿಯರಿಗೆಲ್ಲ ಬಾಪೂನ ಆಶೀರ್ವಾದ

ಪು.ಮಾ.—ಭೂಗೋಲ, ಇತಿಹಾಸ ಮುಂದಿನ ಸಲ.

ಬಾ,

ರಾಮದಾಸನಿಗೆ ನೀನು ಬರೆದ ಪತ್ರ ತಲಪಿತು. ನಿನ್ನಿಂದ ನಾನು ಮೇಲಕ್ಕೆ ಏರಿದೆ ಎಂದು ನಾನು ಬರೆದದ್ದು ನಿನಗೆ ಹಿಡಿಸಲಿಲ್ಲವೆ? ನಾನು ನನ್ನ ಮನಸ್ಸಿನೊಳಗಿನ ಮಾತನ್ನೇ ನಿನಗೆ ಬರೆದೆ. ನನ್ನ ಬಾಳಿನಲ್ಲಿ ನೀನು ಜೊತೆಗಿರದಿದ್ದರೆ ಈ ವೇಳೆಗೆ ನಾನು ಯಾವ ತಗ್ಗಿನಲ್ಲಿ ಬಿದ್ದಿರುತ್ತಿದ್ದನೋ.... ಹೋಗಲಿ ಬಿಡು. ಈ ಮಾತನ್ನು ಇಲ್ಲಿಗೆ ಬಿಡೋಣ.

ನಿನಗೆ ಉಬ್ಬಸ ಆಗುವುದು ಸರಿಯಲ್ಲ. ಉಬ್ಬಸ ಆಗದಿರಲು ಮುಖ್ಯವಾಗಿ ಹೊಟ್ಟೆ ಸ್ವಚ್ಛವಾಗಿರಬೇಕು. ಹಾಲು–ಹಣ್ಣು ಬಿಟ್ಟು ಬೇರೆ ಯಾವ ಆಹಾರವನ್ನೂ ತೆಗೆದುಕೊಳ್ಳಬಾರದು. ಸಂಜೆಗೆ ಸೂರ್ಯ ಮುಳುಗುವ ಮೊದಲೇ ಉಣ್ಣಬೇಕು. ಕಫವನ್ನು ಹುಟ್ಟಿಸುವ ಅಂಟನಂಥ

ಪದಾರ್ಥಗಳನ್ನು ತಿನ್ನಬಾರದು. ಜೈಲರನ ಅಪ್ಪಣೆ ಪಡೆದು ತೋಟದಿಂದ ಕರಿಯ ಮಣ್ಣನ್ನು ತಂದು ಬೆಚ್ಚಗೆ ಮಾಡಿ ಮಧ್ಯಾಹ್ನ ಹೊಟ್ಟೆಯ ಮೇಲೆ ಇಟ್ಟುಕೊಳ್ಳಲು ಮೊದಲುಮಾಡು. ರಾತ್ರಿ ಥಂಡಿ ಎನಿಸಬಹುದು. ಬಿಸಿ ನೀರು–ಜೇನುತುಪ್ಪ ಕುಡಿಯುವ ರೂಢಿ ಮಾಡಿಕೊಳ್ಳಬೇಕು. ಇದನ್ನು ಎಷ್ಟು ಸಾರಿ ಕುಡಿವರೆ ಅಷ್ಟು ಒಳ್ಳೆಯದು. ನನ್ನ ಚಿಂತೆ ಸ್ವಲ್ಪವೂ ಮಾಡಕೂಡದು. ನನ್ನ ಸೇವೆ ಮಾಡುವವರು ಬಹಳ ಜನ ಇದಾರೆ.

ಜಮನಾಲಾಲ್, ಪ್ಯಾರೇಲಾಲ್, ಡಾ. ಅನ್ಸಾರಿ, ನಾರಾಯಣದಾಸ್, ಕಾಂತಿ, ಲೀಲಾವತಿ ಮುನ್ಷಿ, ಸರೋಜಿನಿ ನಾಯುಡು ಮುಂತಾದವರು ಬಂದಿದಾರೆ. ಡಾ. ರಾಯ್ ಕೂಡ ಬಂದಿದಾರೆ. ಇಲ್ಲಿ ಗುರುವಾರದವರೆಗೆ ಇರಬೇಕು. ಆ ಮೇಲೆ ಜಮಷೇಡ್‌ಪುರ, ಉತ್ಕಲ. ನಿನ್ನ ಸಮಾಚಾರ ಎಲ್ಲರೂ ಕೇಳುತ್ತಾರೆ. ನಿನ್ನ ಬಿಡುಗಡೆಯಾಗುವ ಹೊತ್ತಿಗೆ ಬಹುಶಃ ನಾನು ಪಾಟ್ನಾದಲ್ಲಿ ಇರುತ್ತೇನೆ. ಅಲ್ಲಿಂದ ಕಲಕತ್ತೆಗೆ ಹೋಗಬೇಕಾದೀತು. ರಾಮದಾಸ ನಿನ್ನನ್ನು ನೋಡಲು ಆತುರನಾಗಿದಾನೆ. ಆದ್ದರಿಂದ ಮೊದಲು ಅವನ ಬಳಿಗೇ ಹೋಗು. ನಿನಗೆ ನನ್ನ ಹತ್ತಿರ ಬರಬೇಕೆಂದು ಇಚ್ಛೆ ಇದ್ದೀತು. ನೀನು ಬಾರ್ಡೋಲಿಗೂ ಹೋಗಬೇಕು. ನೀನು ಬಾರ್ಡೋಲಿ ಯಿಂದ ಅಹಮದಾಬಾದಿಗೆ ಬರುವ ವೇಳೆಗೆ ನಾನು ಗುಜರಾತಿಗೆ ಹಿಂದಿ ರುಗುತ್ತೇನೆ. ಅಲ್ಲಿಂದ ನೀನು ನನ್ನ ಜೊತೆಯಲ್ಲಿರಬಹುದು. ನನಗೆ ತೋಚಿದ್ದನ್ನು ಬರೆಯುತ್ತಿದೇನೆ. ನಿನ್ನನ್ನು ಪುಸಲಾಯಿಸಿ ಮಾಡಬೇಕಾ ದ್ದೇನೂ ಇಲ್ಲ. ನನ್ನ ಬಳಿಗೇ ಇರಬೇಕೆಂದು ಇಚ್ಛೆಯಾದರೆ ಹಾಗೇ ಮಾಡು. ನಿನ್ನ ಮನಸ್ಸಿಗೆ ಒಪ್ಪಿದ ಹಾಗೆ ಮಾಡು. ಬಾಪೂಗೆ ಇಷ್ಟವಾಗಲಿಕ್ಕಿಲ್ಲ, ಆದ್ದರಿಂದ ಬಾಪೂ ಬರೆದ ಹಾಗೆ ಮಾಡೋಣ ಎನ್ನಬೇಡ. ನಿನ್ನ ಮನಸ್ಸಿಗೆ ಯಾವುದು ಸಂತೋಷವೋ ಅದನ್ನು ಮಾಡು. ನಿನ್ನ ಆರೋಗ್ಯದ ಚಿಂತೆ ಇದ್ದೇ ಇದೆ. ಆದರೆ ನಮ್ಮೆಲ್ಲರ ರಕ್ಷಕ ಶ್ರೀರಾಮ. ಬರಿದೆ ಒಬ್ಬರೊಬ್ಬರ ಚಿಂತೆಮಾಡಿ ಮನಸ್ಸಿಗೆ ಭಾರಮಾಡಿಕೊಳ್ಳುವುದೂ ಹಿಂಸೆಯೇ. ಈ ಹಿಂಸೆಯಲ್ಲಿ ಪಾಪ ಇದೆ. ಎಷ್ಟೇ ಚಿಂತೆ ಮಾಡಿದರೂ ಆಗುವುದೇನು ತಪ್ಪುದಲ್ಲ. ಸುಮ್ಮನೆ ಉದ್ವಿಗ್ನರಾಗಿ ಸೇವಾಕಾರ್ಯದಲ್ಲಿ ಬಾಧಕ ತಂದು ಕೊಂಡೇವು. ಆದ್ದರಿಂದ ನಾವು ಈ ಮೋಹವನ್ನು ನೀಗಬೇಕು.

ಹೆಂಗಸರನ್ನು ಮುಂದೆ ತರುವುದು ಹೇಗೆ ಎಂದು ಒಬ್ಬ ತಂಗಿ ನಿನ್ನನ್ನು ಕೇಳಿದಳು. ನೀನು ನಿನ್ನ ಪತ್ರದಲ್ಲಿ ಅದನ್ನು ಕೇಳಿದೀಯೆ.

ಹೆಂಗಸರಿಗೆ ಸ್ವತಂತ್ರರಾಗುವ ಬಯಕೆ ಇದ್ದರೆ, ಮೊದಲನೆ ಸಾಧನ ಶಿಕ್ಷಣ. ಹುಡುಗರಿಗಿಂತ ಹುಡುಗಿಯರು ಶಿಕ್ಷಣ ಪಡೆಯುವುದು ಹೆಚ್ಚು ಮಹತ್ವವೆಂದು ನನ್ನ ಅಭಿಪ್ರಾಯ. ಸ್ವತಂತ್ರ ಹಿಂದೂಸ್ಥಾನದಲ್ಲಿ ನಾನು ಜೀವಿಸಿದ್ದರೆ, ನನ್ನ ಮಾತು ನಡೆದರೆ, ಸ್ತ್ರೀಶಿಕ್ಷಣಕ್ಕೆ ಹೆಚ್ಚು ಒತ್ತಾಯ ಮಾಡುತ್ತೇನೆ. 'ನೂರು ಉಪಾಧ್ಯಾಯರಿಗೆ ಸಮ ಒಬ್ಬ ತಾಯಿ' ಎಂಬ ಗಾದೆಯೆ ಇದೆಯಲ್ಲ. ನಿಜವಾದ ಮಾತು. ಮನೆಯಲ್ಲಿ ಸುರಕ್ಷಿತ, ಸುಶಿಕ್ಷಿತ ಹುಡುಗಿಯರಿದ್ದರೆ ಅವರು ಮುಂದೆ ತಾಯಂದಿರಾದಾಗ ತಂದೆ–ತಾಯಿ, ಅತ್ತೆ–ಮಾವ, ಸಮಾಜ–ದೇಶಗಳ ಹೆಸರನ್ನು ಮೇಲೆತ್ತಿಯಾಳು. ಶಿಕ್ಷಣ ಎಂದರೆ ಇದೇ ಎನ್ನುತ್ತಾನೆ. ಓದಿ ನಾವೇನು ನೌಕರಿ ಮಾಡಬೇಕೆ ಎನ್ನುತ್ತಾರೆ ಹೆಂಗಸರು. ಆದರೆ ನೌಕರಿಗಾಗಿ ಓದಿಸುವ ಓದು ಈ ಇಂಗ್ಲೀಷ್ ರಾಜ್ಯದ ಕೃಪಾಫಲ. ಹುಡುಗರಿಗೆ ದೊಡ್ಡ ದೊಡ್ಡ ಡಿಗ್ರಿ ಕೊಟ್ಟು ಗುಮಾಸ್ತರನ್ನಾಗಿ ಮಾಡಿದರು. ಇದರಿಂದ ನಮ್ಮ ಜನರ ಸ್ವತಂತ್ರ ಬುದ್ಧಿಯ ವಿಕಾಸ ನಿಂತುಹೋಯಿತು.

ಓದುಬರೆಹಕ್ಕೆ ನನ್ನ ಅರ್ಥವೇ ಬೇರೆ, ಗಮನದಲ್ಲಿರಲಿ. ಅದರಲ್ಲಿ ಅಕ್ಷರಜ್ಞಾನ, ಭಾಷಾಜ್ಞಾನಗಳೂ ಇವೆ. ಆದರೆ ಮಾನವತೆಯನ್ನು ತೋರುವುದು, ಮರ್ಯಾದೆಯನ್ನು ನಡಸುವುದು, ಹೊರಗಿನ ಹಾಗೂ ಒಳಗಿನ — ಹೃದಯದ — ಶುಚಿಯನ್ನು ಕಾಪಾಡುವುದು, ಧೈರ್ಯವಾಗಿ ನಿರ್ಭಯದಿಂದ ತನ್ನ ಕುಟುಂಬಕ್ಕೆ, ಕುಟುಂಬದ ಮೂಲಕ ನೆರೆಹೊರೆಯವರಿಗೆ, ಹಳ್ಳಿಗೆ, ಸಮಾಜಕ್ಕೆ, ದೇಶಕ್ಕೆ ಸುಖಶಾಂತಿಗಳನ್ನು ನೀಡಿ ಆನಂದ ಕೊಡಬೇಕು. ಹೆಂಗಸರಲ್ಲಿ ಈ ಗುಣ ಸಹಜ. ಪೋಷಣೆಯಿಲ್ಲದ್ದಕ್ಕೆ ಹಾಗೇ ಬಿದ್ದಿವೆ ಬೆಳವಣಿಗೆಯಿಲ್ಲದೆ. ನಮ್ಮಲ್ಲಿ ಹೆಂಗಸರು ಪರದಾ ಹಾಕಿಕೊಳ್ಳಬೇಕು. ಇದರ ನಿಜವಾದ ಉದ್ದೇಶವೇ ಬೇರೆ. ಪರದಾ ಎಂದರೆ ಮರ್ಯಾದೆ. ಯಾರ ಮನಸ್ಸಿನಲ್ಲಿ ಮರ್ಯಾದೆಯ ಭಾವನೆ ಇದೆಯೋ ಅವಳಿಗೇಕೆ ಪರದಾ? ಗಂಡಸರ ಎದುರಿನಲ್ಲಿ ಹೆಂಗಸರು ಪರದಾ ಹಾಕುವುದೇಕೆ? ಗಂಡಸರು ಶುದ್ಧಹೃದಯರು, ಹೆಂಗಸರು ಮಾತ್ರ ಅಲ್ಲವೆ?

ನಿಜವಾಗಿ ನೋಡಿದರೆ, ಹೆಂಗಸರಿಗೆ ಇದ್ದಷ್ಟು ಪಾವಿತ್ರ್ಯ, ಶುದ್ಧಹೃದಯ ಗಂಡಸರಿಗಿಲ್ಲ. ನಮ್ಮಲ್ಲಿ ಈ ಸಾಮಾಜಿಕ ದೌರ್ಬಲ್ಯ ಕಳೆದಾಗ ಹೆಂಗಸರ ಏಳಿಗೆಯಾದೀತು. ಹೆಂಗಸರಲ್ಲಿ ಜಾಗೃತಿ ಆದಾಗ ದೇಶವೂ ಜಾಗ್ರತವಾದೀತು. ತಂಗಿಯರಿಗೆಲ್ಲ ಇದನ್ನು ಪದೇ ಪದೇ ಓದಿ ಹೇಳು. ಚಾರಿತ್ರ್ಯ ನಿರ್ಮಾಣವೇ ಶಿಕ್ಷಣದ ಮುಖ್ಯಾಂಶ. ಇದರಲ್ಲಿ ಹೆಂಗಸರ ಸಹಕಾರ ಸಿಗುವವರೆಗೆ ಈ ಸಮಾಜ ಮೇಲೆ ಏರಲಾರದು. ಹೆಂಗಸರ ಶಕ್ತಿಯ ವಿಚಾರ ಬಂದಾಗೆಲ್ಲ ಹೆಂಗಸರಿಗೆ ತಮ್ಮ ಅಪಾರಶಕ್ತಿಯ ಅರಿವು ಏಕೆ ಇಲ್ಲ ಎಂಬ ಪ್ರಶ್ನೆ ನನ್ನ ಮನಸ್ಸಿನಲ್ಲಿ ಹುಟ್ಟುತ್ತದೆ. ಸ್ತ್ರೀಹೃದಯಕ್ಕೆ ಭಗವಂತ ಅಪಾರ ಶಕ್ತಿ ನೀಡಿದಾನೆ. ಅಳೆಯಲು ಬಾರದಂಥ ಶಕ್ತಿ. ಹೆರಿಗೆಯ ವೇದನೆಯನ್ನು ಸೈರಿಸುವ ಹೆಂಗಸು ಜಗತ್ತಿನಲ್ಲಿ ಏನನ್ನು ತಾನೆ ಸೈರಿಸಲಾರಳು? ಆ ಅಸಹ್ಯ ವೇದನೆಯನ್ನು ಸೈರಿಸಿ ಮನುಷ್ಯನಿಗೆ ಜನ್ಮಕೊಡುವ ಶಕ್ತಿಯನ್ನು ಹೆಂಗಸಿಗೆ ಕೊಟ್ಟಿದಾನೆ ಭಗವಂತ. ಧೈರ್ಯ–ಶಾಂತಿ–ಪ್ರೇಮಪೂರ್ಣ ವಾತ್ಸಲ್ಯಗಳಿಗೆ ಇದಕ್ಕಿಂತ ಹೆಚ್ಚಿನ ಪರೀಕ್ಷೆ ಬೇರೆ ಯಾವುದಿದೆ? ತಮಗೆ ಆಗುತ್ತಿರುವ ಅನ್ಯಾಯಪೂರ್ಣ ನಿಂದೆಯನ್ನು ಹೆಂಗಸರೇ ಅಳಿಯಿಸಬೇಕು. ಇವತ್ತು ಆಗಿಷ್ಟು ಈಗಿಷ್ಟು ಸಮಯ ದೊರೆತಿದೆ. ಆದ್ದರಿಂದ ಈ ಪತ್ರವನ್ನು ಮೂರು ಸಲ ಬರೆದೆ. ಎರಡು ಮೂರು ವಾಕ್ಯ ಬರೆಯುವುದರೊಳಗಾಗಿ ಯಾರಾದರೂ ಒಬ್ಬರು ಬರುತ್ತಿದ್ದರು. ಆದ್ದರಿಂದ ಬೇರೆ ಪತ್ರ ಬರೆಯಬೇಕಾಯಿತು.

ನನ್ನ ಚಿಂತೆ ಸ್ವಲ್ಪವೂ ಮಾಡಬಾರದು. ನೀನು ಆರೋಗ್ಯ ಹೊಂದಬೇಕು. ರಾಮನಾಮ ರಾಮಬಾಣ ಔಷಧ. ಇದನ್ನು ಎಂದಿಗೂ ಮರೆಯಬೇಡ.

ತಂಗಿಯರಿಗೆಲ್ಲರಿಗೂ ಬಾಪೂನ ಆಶೀರ್ವಾದ

ಬಾ,

ಬೆಳಗಿನ ಜಾವದ ಮೂರು ಗಂಟೆ. ಗುರುವಾರ. ನಿನ್ನ ಪತ್ರ ನಿನ್ನೆ ಸಂಜೆ ಸಿಕ್ಕಿತು. ಇವತ್ತು ನಾವು ಮುಜಫರಪುರದಲ್ಲಿ ಇದೇವೆ. ಪಂಡಿತ್‌ಜೀ, ಸ್ವಾಮಿ, ಕೃಪಲಾನಿ ಇಲ್ಲೇ ಇದಾರೆ. ಮಾಧವಲಾಲನೂ ಇಲ್ಲೇ ಇದಾನೆ.

ಹನ್ನೊರಿದು ಗಂಟೆಗೆ ಹುಡುಗರನ್ನು ಭೇಟಿಯಾಗುತ್ತೇನೆ. ಮಗನಭಾಯಿ, ರಾವಜೀಭಾಯಿ, ಸೋಮಣಭಾಯಿ ಮೊದಲಾದವರು ಎಲ್ಲಿ ಸೇರಿದಾರೋ ಅಲ್ಲಿಗೆ ಹೋಗುತ್ತಿದೇನೆ. ಪತ್ರ ಬರೆಯಲು ರಾವಜೀಭಾಯಿಗೆ ಹೇಳುತ್ತೇನೆ. ನಿನಗೆ ಇಷ್ಟವಾದ ಸಮಾಚಾರವನ್ನೆಲ್ಲ ತಿಳಿಸಲು ಪ್ರಯತ್ನಿಸುತ್ತೇನೆ. ಆದರೂ ಏನಾದರೂ ಉಳಿದಿದ್ದರೆ ಮತ್ತೊಮ್ಮೆ ಕೇಳಬೇಕು. ಪ್ರಭಾವತಿ ಈಗ ನನ್ನ ಜೊತೆಯಲ್ಲಿ ತಿರುಗಾಡುತ್ತಿದಾಳೆ. ಕುಂವರಜೀ ಬೊಂಬಾಯಿಯಲ್ಲಿ. ರಾಮಿಯೂ ಅಲ್ಲಿಗೆ ಹೋಗಿದಾಳೆ. ಮನೂಗೆ ಈಗ ವಿಶ್ರಾಂತಿ ಸಿಕ್ಕಿದೆ. ಮಾಧವದಾಸ್ ಚೆನ್ನಾಗಿದಾನೆ. ಛಗನ್‌ಲಾಲ್ ಮತ್ತು ರಮಾ ದ್ವಾರಕೆಗೆ ಹೋಗಿದಾರೆ. ಶುದ್ಧಿಗಾಗಿ ಛಗನ್‌ಲಾಲ್ ಏಳು ಉಪವಾಸ ಮಾಡಿದ. ಸೋಮವಾರ ಅದು ಮುಗಿಯಿತು. ಚೆನ್ನಾಗಿದಾರೆ.

ಬ್ರಜ್‌ಕೃಷ್ಣ ಡಿಲ್ಲಿಯಲ್ಲಿ ಇದಾನೆ. ಅವನಿಗೆ ಈಗ ಚೆನ್ನಾಗಿದೆ. ಪ್ಯಾರೇಲಾಲ್ ನನ್ನ ಜೊತೆಯಲ್ಲಿದಾನೆ. ಇಂಗ್ಲೆಂಡಿನಲ್ಲಿ ನನಗೆ ಸಹಾಯ ಮಾಡುತ್ತಿದ್ದ ತಂಗಿ ಅವನ ಜೊತೆಗೆ ಬಂದಿದಾಳೆ. ಅವಳ ಬಗ್ಗೆ ಏನು ಮಾಡಬೇಕೋ ನಿರ್ಧಾರವಾಗಿಲ್ಲ. ಈಗಂತೂ ಇಲ್ಲಿದಾಳೆ. ಪದ್ಮಜಾ ನೆಟ್ಟಗಿದಾಳೆ. ಶ್ರೀಮತಿ ನಾಯುಡು ಹೈದರಾಬಾದಿನಲ್ಲಿ ನನ್ನ ಭೇಟಿಗೆ ಬಂದಿದ್ದಳು. ರಾಮನವಮಿಯ ದಿನ ಪಂಡಿತಜೀ ಇರಲಿಲ್ಲ. ಸೋಮಣಜೀ 'ಜಯ ರಾಮ ರಮಾ' ಹಾಡಿದ. ಹತ್ತಕ್ಕೆ ಬಿಹಾರವನ್ನು ಬಿಟ್ಟು ಅಸ್ಸಾಮಿಗೆ ಹೋಗಬೇಕು. ಅಸ್ಸಾಮಿನಲ್ಲಿ ಹತ್ತು ದಿನ. ಮತ್ತೆ ಬಿಹಾರಕ್ಕೆ ಹಿಂದಿರುಗಿ ಬರುತ್ತೇನೆ. ಅಲ್ಲಿಂದ ಒರಿಸ್ಸಾಕ್ಕೆ. ಅಲ್ಲಿಗೆ ಮೇ ತಿಂಗಳಲ್ಲಿ ಹೋಗುತ್ತೇನೆ. ನಿನ್ನೆ ರಾಜೇಂದ್ರಬಾಬುವಿನ ಹೆಂಡತಿ ನನ್ನ ಭೇಟಿಗೆ ಬಂದಿದ್ದಳು. ನಿನಗೆ ನಮಸ್ಕಾರ ಹೇಳಿದಾಳೆ.

ಈಗ ಪಾಠದ ವಿಷಯ. ಪಂಜಾಬಿನ ಮುಖ್ಯಪಟ್ಟಣವನ್ನು ತಪ್ಪು ಬರೆದಿದೀಯೆ. ಪಂಜಾಬದ ಮುಖ್ಯಪಟ್ಟಣ ಲಾಹೋರ್. ಉಳಿದವ್ದೆಲ್ಲಾ ಸರಿ.

ಈ ಸಲ ಗುಜರಾತಿ ವ್ಯಾಕರಣಕ್ಕಾಗಿ ಶಬ್ದಗಳನ್ನು ಕಳಿಸುತ್ತಿದೇನೆ. ಇದರಲ್ಲಿ ಲಿಂಗ, ಕಾಲ, ವಿಶೇಷಣ, ಸಂಜ್ಞೆಗಳನ್ನು ಬರೆಯಬೇಕು. ವಿಭಕ್ತಿಯನ್ನೂ ಬರೆಯಬೇಕು.

(೧) ರಾಮನು ಸೀತೆಯನ್ನು ಮತ್ತೆ ಕಾಡಿಗೆ ಕಳಿಸಿದನು.
(೨) ದಕ್ಷಿಣ ಆಫ್ರಿಕಾದಲ್ಲಿ ನಾನು ನಿನ್ನನ್ನು ಅನೇಕ ಸಲ ಅಳಿಸಿದೇನೆ.
(೩) ನೀನು ಅಲ್ಲಿಂದ ಬಿಡುಗಡೆಯಾಗಿ ನೆಟ್ಟಗೆ ನನ್ನ ಬಳಿಗೆ ಬರುತ್ತೀಯೆ.
(೪) ಈಗ ನನ್ನ ಸೇವೆ ಚೆನ್ನಾಗಿ ನಡೆಯುತ್ತಿದೆ.
(೫) ಸುಖದಲ್ಲೂ ದುಃಖದಲ್ಲೂ ನಿರಂತರ ಹರಿಸ್ಮರಣೆ ಮಾಡಬೇಕು.

ಸಾಕು, ಇನ್ನು ಹೆಚ್ಚು ಬರೆಯುವುದಿಲ್ಲ. ನೀನು ಬೇಸರಗೊಂಡೀಯೆ. ಗಣಿತದ ಲೆಕ್ಕ ಒಂದನ್ನು ಕೊಡುತ್ತೇನೆ. ಕಳೆಯುವ ಲೆಕ್ಕ.

| ರೂ. | ಆ. | ಪೈ. |
|---|---|---|
| ೫೫೦ | ೧೦ | ೬ |
| — ೩೨೦ | ೧೫ | ೯ |

ಇನ್ನು ಪ್ರವಚನ :

ಇಲ್ಲಿನ ಪರಿಸ್ಥಿತಿಯಿಂದ ಜನರು ಭಗವಂತನನ್ನು ಬೈಯುತ್ತಾರೆ. 'ದೇವರೆ, ಏನು ಮಾಡಿದೆ? ದುಃಖಿಗಳಿಗೆ ರಕ್ಷಕ ನೀನು. ನೀನೇ ನಮಗೆ ದುಃಖ ಕೊಡುತ್ತೀಯಲ್ಲ!' ಮಾತೇನೋ ಸರಿ. ಆದರೆ ಇದರಿಂದ ನಮ್ಮ ಮಹಾ ಅಜ್ಞಾನ ತಿಳಿಯಬರುತ್ತದೆ. ಈಶ್ವರೀ ತತ್ತ್ವ ತಿಳಿಯಲಾರ ದಂಥದು. ಆದರೂ ಅದರ ಶುಭಪರಿಣಾಮವನ್ನು ಸುತ್ತಲೂ ನೋಡ ಬಹುದು. ಅದರ ಪ್ರಭಾವ ಜಡ–ಚೇತನ ಎಲ್ಲದರ ಮೇಲೂ ಬೀಳುತ್ತದೆ. ಈಶ್ವರ, ಖುದಾ, ಗಾಡ್ ಎಲ್ಲೆಲ್ಲೂ ಇದ್ದಾನೆ. ಅವನು ಸರ್ವಜ್ಞ. ನಾವು ಅವನನ್ನು ಅರಿಯಲಾರೆವು. ಏಕೆಂದರೆ ದೈವೀತತ್ತ್ವದ ಮಾರ್ಗ ಅವಿರುದ್ಧ. ಕಡಲಿನ ಒಂದು ಹನಿ ಅಥವಾ ಒಂದು ರಜಕಣ ಇಡೀ ವಿಶ್ವವನ್ನೂ ಹೇಗೆತಾನೆ ಅರಿಯಬಲ್ಲದು? ನೀರಿನ ಒಂದು ಹನಿ ಹಾಗೂ ಒಂದು ರಜಕಣದಲ್ಲಿ ಎಷ್ಟು ಭೇದ ಅಡಗಿದೆ. ಎಂಥ ವಿಜ್ಞಾನವೇತ್ತನೂ ಈ ಭೇದ ವನ್ನು ಸಾಧಿಸಲಾರ. ಆದ್ದರಿಂದ ನಾನು ನಿನಗೆ ಎಷ್ಟೋ ಸಲ ಹೇಳಿದೇನೆ —ಭಗವಂತ ಪರಮಾತ್ಮ, ಆತ್ಮ. ಅವನು ಮುಕ್ತ. ಬರೀ ಶಾಸ್ತ್ರಗಳ

ಆಧಾರದ ಮೇಲೇ ನಡೆಯಬಾರದು. ಆ ಕಾಲಕ್ಕೆ ಶಾಸ್ತ್ರ ನಿಜವಿದ್ದೀತು. ಆದರೆ ಈ ಕಾಲಕ್ಕೆ ಅನುಕೂಲ ಯಾವುದೋ ಅದನ್ನು ನೀವೆಲ್ಲರೂ ವಿಚಾರ ಮಾಡಬೇಕು. ನಿಮ್ಮ ವಿಚಾರವನ್ನು ನನಗೆ ಬರೆಯಬೇಕು.

ಎಳ್ಳಷ್ಟೂ ನನ್ನ ಚಿಂತೆ ಮಾಡಬಾರದು. ನಾನೂ ನೀನೂ ಇಬ್ಬರೂ ಭಗವಂತನ ಕೈಯಲ್ಲಿ. ನಮ್ಮೆಲ್ಲರಿಗೂ ಅವನೊಬ್ಬನೇ ಏಕಮಾತ್ರ ರಕ್ಷಕ.

**ನಿಮ್ಮೆಲ್ಲರಿಗೂ ಬಾಪೂನ ಆಶೀರ್ವಾದ**

ಬಾ,

ನಿನ್ನ ಪತ್ರ ಏಕೆ ಬಂದೀತು? ನೀನು ಜಮನಾಲಾಲರ ಜೊತೆಯಲ್ಲಿದ್ದೆ. ಆಗ ಪತ್ರ ಬರೆಯುವ ಕಾರಣವೇ ಇರಲಿಲ್ಲ. ನಾನು ಚೆನ್ನ. ಅಮ್ತುಸ್ಸಲಾಂ ಎಲ್ಲವನ್ನು ನೋಡಿಕೊಳ್ಳುತ್ತಾಳೆ. ಕಾಂತಿ–ಸರಸ್ವತಿ ಇಲ್ಲಿದ್ದಾರೆ. ಪ್ರಾಯಶಃ ಮಾತುಂಗಾಕ್ಕೆ ಹೋಗಬಹುದು. ಲಕ್ಷ್ಮಿಯನ್ನು ಕರೆದುಕೊಂಡು ದೇವ ದಾಸ್ ಮದರಾಸಿಗೆ ಹೋಗುತ್ತಾನೋ ಏನೋ. ಸ್ವಲ್ಪ ತಂಪಾದೀತು. ಡೆಹರಾಡೂನಿಗೆ ಹೋದರೂ ಒಂದೆರಡು ದಿನ. ಹೆಚ್ಚು ಕಾಲ ಅಲ್ಲಿರಲಾರೆ. ಪ್ಯಾರೇಲಾಲ್–ಸುಶೀಲಾ ಅಲ್ಲೇ ಇದ್ದಾರಲ್ಲ. ಅವರಿಬ್ಬರೂ ಅಥವಾ ಪ್ಯಾರೇ ಲಾಲ್ ಒಬ್ಬನೇ ನಿನ್ನ ಜೊತೆಗೆ ಬರಬಹುದು. ದೇವದಾಸನೊಂದಿಗೆ ಆಲೋಚನೆ ಮಾಡಿ ನಿನಗೆ ಸರಿ ಎನಿಸಿದ ಹಾಗೆ ಮಾಡು. ರಾಜಗೋಪಾಲಾ ಚಾರಿಯೂ ಇಲ್ಲೇ ಇದ್ದಾರೆ. ಎರಡು ಮೂರು ದಿನದಲ್ಲಿ ಮದರಾಸಿಗೆ ಹಿಂದಕ್ಕೆ ಹೋಗುತ್ತಾರೆ. ಕಾನು ಸಂತೋಷವಾಗಿದ್ದಾಳೆ.

ಇನ್ನು ಪ್ರವಚನ :

ನೀನು ಗೀತಾಭ್ಯಾಸದಲ್ಲಿ ತೊಡಗಿದ್ದೀಯೆ ಎಂದು ನನಗೆ ಕಾಣುತ್ತದೆ. ಕೂಡುವುದು ಕಳೆಯುವುದು ಲೆಕ್ಕ ಸರಿ. ಭೂಗೋಳದಲ್ಲಿ ಪ್ರಗತಿ ಇದೆ. ಇತಿಹಾಸದಲ್ಲಿ ಸಾಕಷ್ಟು ಇಲ್ಲ. ಆದರೆ ಆ ಇತಿಹಾಸ ನಿಜವೋ ಅಲ್ಲವೋ ಎಂಬುದೇ ಅನುಮಾನ. ಹಿಂದೂಸ್ತಾನದ ಹುಡುಗರಿಗೆ ಕೆಲವೊಂದು ಘಟನೆಗಳ ವಿಷಯ ತಿಳಿಸಲೆಂದೇ ಆ ಇತಿಹಾಸ ಬರೆಯಿಸಿಕೊಂಡಿದೆ. ಅದನ್ನೂ ಇಂಗ್ಲೀಷ್ ಶಿಕ್ಷಣಪಂಡಿತರು ಒಪ್ಪಿದರೇನೇ ಓದಿಸಲು ಸಾಧ್ಯ.

ಎಷ್ಟರವರೆಗೆ ನಾವು ಗುಲಾಮರು! ಆದರೆ ಅವರ ದೋಷವನ್ನು ನೋಡಲು ನಮಗೇನು ಅಧಿಕಾರ?

ನಾವು ಎಲ್ಲಿದೇವೋ, ಏನು ಮಾಡಬೇಕೆನ್ನುತ್ತೇವೋ ಇದನ್ನು ನಾವೇ ಯೋಚಿಸಬೇಕು. ನಮ್ಮ ಮನಸ್ಸು ಬಹಳ ಅಸ್ವಚ್ಛ. ಕ್ಯಾಮರಾದಲ್ಲಿ ಮನುಷ್ಯನ ತದ್ವತ್ ಚಿತ್ರ ಬರುತ್ತದೆ. ಇದು ನಿನಗೆ ಗೊತ್ತು. ಮನುಷ್ಯ ಉಟ್ಟಿದ್ದ ಉಡುಗೆ, ನಿಂತಿದ್ದ ಭಂಗಿ, ಎಲ್ಲವೂ ಇದ್ದಕ್ಕಿದ್ದಹಾಗೇ. ಇದೇ ರೀತಿ ಮನಸ್ಸಿನ ಚಿತ್ರದ ಪ್ರಭಾವ ಜಗತ್ತಿನ ಮೇಲೆ ಧಾರಾಳವಾಗಿ ಬೀಳುತ್ತದೆ. ಸೂಕ್ಷ್ಮರೀತಿಯಲ್ಲಿ ಬೀಳುತ್ತದೆ. ಅದನ್ನು ನೋಡಬಲ್ಲವನು ಬಹಳ ಮೇಲೇರುತ್ತಾನೆ. ನಮ್ಮ ಸಮಾಜದಲ್ಲಿರುವ ದೋಷ—ಪರಸ್ಪರ ಅವಿಶ್ವಾಸ, ಮೂರ್ಖತನ, ಅಸ್ಪೃಶ್ಯತೆ—ಎಲ್ಲವೂ ನಮ್ಮ ದುರ್ಬಲ ಮನಸ್ಸಿನ ಪ್ರತಿಬಿಂಬ. ಬಿಂಬಗಳನ್ನು ಅಥವಾ ಚಿತ್ರಗಳನ್ನು ನೋಡಲು ಉತ್ತಮ ಸ್ಥಾನ—ಸೆರೆಮನೆ. 'ಮನುಷ್ಯರೂಪೇಣ ಮೃಗಾಶ್ಚರನ್ತಿ' ಎಂದು ಸಂಸ್ಕೃತದಲ್ಲಿ ಒಂದು ವಾಕ್ಯವಿದೆ. ನಿನಗೆ ಸ್ವಲ್ಪ ಸಂಸ್ಕೃತ ಗೊತ್ತಿದೆಯಲ್ಲ. ನಾವು ಪಶುವಿಗಿಂತಲೂ ಕೀಳು. ನಮ್ಮ ವಿವೇಕಬುದ್ಧಿಯನ್ನು ಸಂಪೂರ್ಣವಾಗಿ ವಿಕಾಸಗೊಳಿಸುವ ಪ್ರಯತ್ನವನ್ನು ಮಾಡಿದರೂ ಮನುಷ್ಯನ ಸ್ವರೂಪ ಪರಮಾತ್ಮನ ಸ್ವರೂಪವಾಗಿ ಪರಿವರ್ತನಗೊಳ್ಳುತ್ತದೆ. ಆದ್ದರಿಂದ ಮೊದಲು ಎಷ್ಟು ಸಾಧ್ಯವೋ ಅಷ್ಟು ಸಂಯಮವನ್ನು ಬೆಳಸಬೇಕು ಎಂದು ನನ್ನ ಅಭಿಪ್ರಾಯ. ಎಲ್ಲಾ ಬಗೆಯ ಸಂಯಮ, ಮನೋ ವಾಕ್ ಕಾರ್ಯಗಳಿಂದ ಈ ಸಂಯಮವನ್ನು ಬೆಳಸುವ ಮನುಷ್ಯ ಮುಕ್ತ. ಸಂಯಮವನ್ನು ಪಾಲಿಸಲಾರದವನು ಗುಲಾಮ.

ಹೆಂಗಸರಲ್ಲಿ ಈ ವೃತ್ತಿ ಸ್ವಾಭಾವಿಕ. ಹೆಂಗಸರು ಇಷ್ಟಪಟ್ಟರೆ ಸಂಯಮವನ್ನು ದೃಢವಾಗಿ ಸಾಧಿಸಬಲ್ಲರು. ಸ್ವಲ್ಪವೂ ದಾರ್ಢ್ಯವಿಲ್ಲದ ದುರ್ಬಲ ಮನಸ್ಸಿನವರೂ ಕೆಲವರು ಇರಬಹುದು. ಹೆಂಗಸರ ಹೃದಯವನ್ನು ಪ್ರಬಲವಾಗಿ ಅಭ್ಯಾಸಮಾಡಿದೇನೆ ನಾನು. ಆದ್ದರಿಂದ ಮೇಲಿನ ಈ ಮಾತನ್ನು ಬರೆಯುವಾಗ ನನಗೆ ಸಂಕೋಚವೇನೂ ಇಲ್ಲ. ಹೆಂಗಸರು ನನ್ನ ಬಳಿಗೆ ನಿರ್ಭಯವಾಗಿ ಬರುತ್ತಾರೆ. ತಮ್ಮ ಸಮಾಚಾರವನ್ನೆಲ್ಲಾ ನನಗೆ ಹೇಳುತ್ತಾರೆ. ಯಾವಾಗಲಾದರೂ ಧೀರೆಯರಾದ ಹೆಂಗಸರನ್ನು

ನೋಡಿದಾಗ ಹೆಂಗಸರನ್ನು 'ಅಬಲೆ' ಎಂದವರು ನಮ್ಮ ಸ್ತ್ರೀಜಾತಿಗೇ ಭಯಂಕರ ಅನ್ಯಾಯ ಮಾಡಿದ್ದಾರೆ, ಅಪರಾಧ ಮಾಡಿದ್ದಾರೆ, ದೇವರು ಕೂಡ ಅವರನ್ನು ಕ್ಷಮಿಸಲಾರ ಎಂದುಕೊಳ್ಳುತ್ತೇನೆ.

ನೀನು ನನ್ನ ಹೆಂಡತಿ ಎಂಬುದನ್ನು ಒಂದು ಗಳಿಗೆ ಮರೆತು ತಟಸ್ಥನಾಗಿ ಹೇಳುತ್ತೇನೆ: ಶೌರ್ಯ, ಸಂಯಮಶೀಲತೆ, ಹೆಂಗಸರಿಗೆ ಸಹಜವಾದ ವ್ಯಾವಹಾರಿಕತೆ ಹಾಗೂ ಎಲ್ಲರಲ್ಲೂ ವಾತ್ಸಲ್ಯಭಾವ, ಎಲ್ಲವೂ ನಿನ್ನಲ್ಲಿವೆ. ಹಿಂದೂಸ್ಥಾನದಲ್ಲಿ ಇಂಥ ತಂಗಿಯರು ಎಷ್ಟೋ ಜನ ಇದ್ದಾರೆ. ಆದರೆ ಗಂಡಸರು ಅದನ್ನು ವಿಕಾಸವಾಗಲು ಬಿಡಲಿಲ್ಲ. ಆದ್ದರಿಂದ ಅವು ಪ್ರಕಟವಾಗಲಿಲ್ಲ. ನೀನು ಅಲ್ಲಿ ನಿಂತು ಉಳಿದ ತಂಗಿಯರಲ್ಲಿ ಅಡಗಿರುವ ಈ ಸ್ವಾಭಾವಿಕ ಗುಣಗಳಿಗೆ ನೀರೆರೆದು ನೋಡು. ಆ ಒಣಕಲು ಗಿಡಗಳಲ್ಲೂ ಎಂಥ ಒಳ್ಳೇ ಚಿಗುರು ಚಿಗುರೀತು, ಕೊಂಬೆ ಒಡೆದಾವು. ಆ ಹೂಗಳ ಸುವಾಸನೆ ಹಿಂದೂಸ್ಥಾನದಲ್ಲಿ ಹರಡಿದ ದಿನವೇ ಹಿಂದೂಸ್ಥಾನದ ಭಾಗ್ಯೋದಯದ ದಿನ. ಇಷ್ಟು ದೊಡ್ಡ ದೇಶ, ಅರ್ಧಕ್ಕಿಂತ ಹೆಚ್ಚು ಜನ ಹೆಂಗಸರು. ಹೆಂಗಸರನ್ನು ಅದುಮಿಹಾಕಿದರೆ ಈ ದೇಶ ಸ್ವತಂತ್ರವಾದೀತೆ? ಎಂದಿಗಾದರೂ? ಆದ್ದರಿಂದ ಸ್ವಾತಂತ್ರ್ಯದ ಜಪ ಮಾಡುವವರಿಗೆ ನಾಳೆ ಹೇಳುತ್ತೇನೆ—ನಿಮ್ಮ ಬದುಕಿನಲ್ಲಿ ನಿಮ್ಮ ಪ್ರತಿಯೊಂದು ಕೆಲಸದಲ್ಲೂ ಪ್ರತಿ ಸಂದರ್ಭದಲ್ಲೂ ಎಷ್ಟುಮಟ್ಟಿಗೆ ಹೆಂಗಸರನ್ನು ನಿಮ್ಮ ಜೊತೆಗೆ ತರಬಹುದೋ ತನ್ನಿ.

ಈಗ ನಿನ್ನ ಮೈ ಹೇಗಿವೆ? ಉಬ್ಬಸ ಇದೆಯೆ? ದಿನವೂ ಎಷ್ಟು ನೂಲುತ್ತೀ? ಏನು ತಿನ್ನುತ್ತೀ?

ಗಣಿತದ ಕೆಲವು ಲೆಕ್ಕ ಬರೆಯುತ್ತೇನೆ—ಒಬ್ಬ ಮನುಷ್ಯರ ಹತ್ತಿರ ೪೮ ಕಿತ್ತಲೆಹಣ್ಣು ಇವೆ. ಅವನ್ನು ಸಮವಾಗಿ ಹಂಚಬೇಕು. ಎಷ್ಟು ಜನಕ್ಕೆ ಎಷ್ಟು ಹಣ್ಣು ಸಿಗುತ್ತವೆ?

ಒಂದು ದಿನಕ್ಕೆ ಎಷ್ಟು ಗಂಟೆ? ಗಂಟೆಗೆ ನಿಮಿಷ ಎಷ್ಟು? ನಿಮಿಷಕ್ಕೆ ಸೆಕೆಂಡು ಎಷ್ಟು?

ಒಂದೂಕಾಲು ಸೇರು ತುಪ್ಪಕ್ಕೆ ಹದಿನೈದು ಆಣೆ. ಒಂದು ಮಣ ತುಪ್ಪಕ್ಕೆ ಎಷ್ಟು?

ಒಂದೇ ಸಲ ಕೆಲವು ಲೆಕ್ಕ ಕೊಟ್ಟೆ. ಚಿಂತಿಸಬೇಡ. ನಿಧಾನವಾಗಿ ಬರೆದು ಕಳಿಸು. ಅಕ್ಷರಗಳನ್ನು ಸುಧಾರಿಸಲು ಇನ್ನೂ ಪ್ರಯತ್ನ ಮಾಡಬೇಕು. 'ಬರೂ' ಲೇಖನಿಯಿಂದ ಅಕ್ಷರ ಬಹಳ ಚೆನ್ನು ಆಗುತ್ತವೆಂದು ನನ್ನ ಅಭಿಪ್ರಾಯ. ಅದನ್ನು ಬಳಸುವುದಾದರೆ ಕಳಿಸಿಕೊಡುವ ಏರ್ಪಾಟು ಮಾಡುತ್ತೇನೆ.

ನೀವೆಲ್ಲರೂ ಆನಂದವಾಗಿದೀರಲ್ಲವೆ? ಎಲ್ಲರೂ ಆರೋಗ್ಯವನ್ನು ಕಾಪಾಡಿಕೊಳ್ಳಬೇಕು. ಮೈಯೂ ಮನಸ್ಸೂ ತುಂಬಾ ಪ್ರಫುಲ್ಲವಾಗಿರುವಂತೆ ಮಾಡಬೇಕು.

**ಬಾಪೂನ ಆಶೀರ್ವಾದ**

ಬಿಜಾಪುರ

ಬಾ,

ನಿನ್ನ ಪತ್ರ ತಲಪಿತು. ಮಾಧವದಾಸನಿಂದ ಪತ್ರವೇ ಇಲ್ಲ (ಬಾಪೂಜಿಯ ಭಾವಮೈದುನ). ಮಣಿಲಾಲನ ಪತ್ರ ಬಂದಿದೆ. ಈ ಪತ್ರದ ಹೊರತು ಇವರು ನಾಲ್ಕೂ ಜನರ ವಿಷಯವಾಗಿ ಇನ್ನೇನೂ ಬರೆಯುವಂಥದಿಲ್ಲ ಈಗ. ಮಣಿಲಾಲನ ಬಗ್ಗೆ ನಿರ್ಭಯವಿರಲಿ. ಅವನಿಗೆ ಈಗ ೪೦ ವರ್ಷವಾಯಿತು, ಗೊತ್ತೆ? ತನ್ನ ಕಾಳಜಿ ತಾನು ಮಾಡಿಕೊಳ್ಳುತ್ತಾನೆ. ಸ್ವಯಂ ನಿರ್ಭಯವಾಗಿದಾನೆ. ತನ್ನ ಕೆಲಸ ಮಾಡುತ್ತಾನೆ. ವೆಚ್ಚಕ್ಕೆ ಗಳಿಸುತ್ತಾನೆ. ಸುಖವಾಗಿದಾನೆ. ಆದ್ದರಿಂದ ಮಣಿಲಾಲನ ಚಿಂತೆ ಮಾಡಲೇಬೇಡ. ಬೆಳಗಾಂನಲ್ಲಿ ದುರ್ಗಾ, ಬಾವಲೋ, ಜೀವಣಜೀ, ಚಂದೂಭಾಯಿ, ಮೋಹನಲಾಲ್ ಭೆಟ್ಟಿಯಾಗಿದ್ದರು. ಎಲ್ಲರೂ ಆನಂದವಾಗಿ ಇದಾರೆ. ಜಮನಾಲಾಲಜೀ ಪಾಟ್ನಾದಲ್ಲಿದಾರೆ. ನಾನು ಹನ್ನೊಂದಕ್ಕೆ ಅಲ್ಲಿಗೆ ಹೋಗುತ್ತೇನೆ. ಠಕ್ಕರ್‌ಬಾಪಾ ಬೇರೆ ಹೋಗುತ್ತಾರೆ. ವಾಲಜೀಭಾಯಿ ನನ್ನ ಜೊತೆಯಲ್ಲಿದಾನೆ. ಊಟ ಮಾಡುತ್ತ ಮಾಡುತ್ತ ಅವನ ಕೈಯಿಂದ ಈ ಪತ್ರವನ್ನು ಹೇಳಿ ಬರೆಯಿಸುತ್ತಿದೇನೆ.

ಈಗ ಪ್ರವಚನ:

ಶರೀರ, ಆತ್ಮ ಎರಡೂ ಒಂದಕ್ಕೊಂದು ಅಂಟಿಕೊಂಡಿವೆ. ಆದರೆ ನಾವು ಆತ್ಮವನ್ನು ಶರೀರದ ಗುಲಾಮನಾಗಿ ಮಾಡಿದೇವೆ. ಉದಾಹರಣೆಗೆ:

ನಮ್ಮ ಆತ್ಮ ಒಂದು ವಸ್ತುವನ್ನು ತಿನ್ನಲು ಇಚ್ಛಿಸದು. ಆದರೂ ಅದನ್ನು ನೋಡಿ ನಾಲಗೆಯಲ್ಲಿ ನೀರು ಊರುತ್ತದೆ. ಕೈ ಆ ವಸ್ತುವನ್ನು ತೆಗೆದು ಕೊಂಡು ಬಾಯಿಗಿಡುತ್ತದೆ. ಇದನ್ನು ಮೀರಿ ಮೇಲೇರಿದವನು ನಿಜವಾದ ಸಂಯಮವನ್ನು ಪಾಲಿಸಬಲ್ಲ. ನಿಶ್ಚಯಬಲವನ್ನು ಬೆಳೆಸಬಲ್ಲ. ಆ ಸ್ಥಿತಿಯಲ್ಲಿ ಆ ಮನುಷ್ಯ ಲೋಕಕ್ಕೆ ಉಪಯೋಗಿ ಆಗಬಲ್ಲ.

ನಿಮ್ಮೊಳಗಿನ ಒಬ್ಬ ತಂಗಿಯ ಮಗಳು ತೀರಿಕೊಂಡಳು ಎಂದು ಬರೆದಿದೀಯೆ. ನೀನು ಗೀತೆಯನ್ನು ಓದಿದೀಯಲ್ಲ. ಆ ತಂಗಿಗೆ ತಿಳಿಸಿ ಹೇಳು — ಸಾವು ಎಂದರೆ ಹೊಸ ಹುಟ್ಟು. ಶರೀರದ ಸೆರೆಮನೆಯಿಂದ ಬಿಡುಗಡೆಯಾಗಿ ಅಧಿಕ ವಿಶಾಲ ಜೀವನದಲ್ಲಿ ಪ್ರವೇಶ ಮಾಡುವುದರ ಹೆಸರೇ—ಸಾವು. ಆಮೇಲಿನ ಜೀವನದ ಪ್ರಗತಿಗೆ ಮಿತಿಯಿಲ್ಲ ಎನ್ನುತ್ತಾರೆ. ಅನೇಕ ಭ್ರಮೆ, ಮೋಹಜಾಲ, ಶಂಕೆಸಂದೇಹಗಳ ನಡುವೆಯೂ ಮರಣಾ ನಂತರದ ಜೀವನ ಸಾಗುತ್ತದೆ. ದುರ್ಮಾರ್ಗದಲ್ಲಿ ಸಿಕ್ಕಿಬಿದ್ದ ಆತ್ಮದ ಉದ್ಧಾರಮಾಡಲು ಪ್ರಗತಿಶೀಲ ಆತ್ಮಗಳು ಪ್ರಯತ್ನ ಮಾಡುತ್ತವೆ. ಯಾರೂ ಬೆಂಕಿಯಲ್ಲಿ ಸುಟ್ಟುಕೊಳ್ಳಬೇಕಾಗಿಲ್ಲ. ಆತ್ಮಜ್ಞಾನವೇ ಪ್ರತೀ ಕಾರ ಅಥವಾ ಶಿಕ್ಷೆ. ಆದ್ದರಿಂದ ಆ ಮಗಳಲ್ಲಿ ಇದ್ದ ಗುಣಗಳ ಗಾನಮಾಡಿ ತನ್ನ ಬದುಕಿನಲ್ಲಿ ಅವನ್ನು ತರಲು ಪ್ರಯತ್ನಿಸಿದರೆ ಅವಳ ಆತ್ಮ ಎಷ್ಟೋ ಪಾಲು ಪ್ರಗತಿಯಾದೀತು. ಗೀತೆಯ ಶ್ಲೋಕಗಳ ಕರಿಯ ಅಕ್ಷರಗಳನ್ನು ಓದಿದಮಾತ್ರಕ್ಕೇ ಪುಣ್ಯ ಸಿಗದು. ಸಮಯ ಬಂದಾಗ ಆ ಶ್ಲೋಕಗಳ ಆಧಾರದಿಂದ ಭರವಸೆ ಪಡೆಯುವಷ್ಟು ಯೋಗ್ಯರಾದರೆ ಗೀತೆಯನ್ನು ಓದಿದ್ದು ಸಾರ್ಥಕ.

ಈಗ ಇನ್ನು ಕಾಲವಿಲ್ಲ. ಆದ್ದರಿಂದ ಇಷ್ಟೇ ಬರೆಯುತ್ತೇನೆ. ನನ್ನ ಆರೋಗ್ಯ ನೆಟ್ಟಗೆ. ಹಿಂದಿನ ಪತ್ರದಲ್ಲಿ ನಿನಗೆ ಗಣಿತದ ಲೆಕ್ಕ ತಿಳಿಸಿದ್ದೆ. ಇವತ್ತಿನ ಪಾಠ — ಹಿಂದೂಸ್ಥಾನದಲ್ಲಿ ಮುಖ್ಯ ಪ್ರಾಂತ ಎಷ್ಟು ಇವೆ? ಅವುಗಳ ರಾಜಧಾನಿಗಳು ಯಾವುವು? ಅದನ್ನು ತಿದ್ದಿ ಕಳಿಸುತ್ತೇನೆ. ಗಣಿತದ ಪಾಠವನ್ನು ಚೆನ್ನಾಗಿ ಮಾಡಿದೀಯೆ.

**ನಿಮ್ಮೆಲ್ಲರಿಗೂ ಬಾಪೂನ ಆಶೀರ್ವಾದ**

# ನಿವೇದನ

## ವಿಷಯಮೂಲಸೂಚಿ

| ಸೂಚಿಸಂಖ್ಯೆ | ಪುಟಸಂಖ್ಯೆ | ವಿಷಯಮೂಲ |
|---|---|---|
| ೧ | vii | ಯಂಗ್ ಇಂಡಿಯಾ, ೧೭–೧೧–೧೯೨೧ |
| ೨ | vii | ಯಂಗ್ ಇಂಡಿಯಾ, ೧೭–೧೧–೧೯೨೧ |
| ೩ | viii | ಯಂಗ್ ಇಂಡಿಯಾ, ೧೬–೬–೧೯೨೬ |
| ೪ | viii | ಯಂಗ್ ಇಂಡಿಯಾ, ೧೧–೧೧–೧೯೨೮ |
| ೫ | viii | ಹರಿಜನ, ೯–೮–೧೯೪೨ |
| ೬ | viii | ಆತ್ಮಕಥೆ |
| ೭ | viii | ಯಂಗ್ ಇಂಡಿಯಾ, ೪–೬–೧೯೨೫ |
| ೮ | ix | ಆತ್ಮಕಥೆ |
| ೯ | ix | ಆತ್ಮಕಥೆ |
| ೧೦ | x | ಯಂಗ್ ಇಂಡಿಯಾ, ೨–೩–೧೯೨೨ |
| ೧೧ | x | ಯಂಗ್ ಇಂಡಿಯಾ, ೨–೩–೧೯೨೨ |
| ೧೨ | x | ಹರಿಜನ, ೨೯–೮–೧೯೩೬ |
| ೧೩ | xi | ಮಂಗಳ ಪ್ರಭಾತ |
| ೧೪ | xi | ಯಂಗ್ ಇಂಡಿಯಾ, ೪–೧೨–೧೯೨೪ |
| ೧೫ | xi | ಹರಿಜನ, ೪–೪–೧೯೨೯ |
| ೧೬ | xi | ಯಂಗ್ ಇಂಡಿಯಾ, ೪–೧೨–೧೯೨೪ |
| ೧೭ | xii | ಯಂಗ್ ಇಂಡಿಯಾ, ೩–೪–೧೯೨೪ |
| ೧೮ | xii | ಯಂಗ್ ಇಂಡಿಯಾ, ೩–೪–೧೯೨೪ |
| ೧೯ | xii | ಯಂಗ್ ಇಂಡಿಯಾ, ೩–೧೨–೧೯೨೬ |
| ೨೦ | xii | ಹರಿಜನ, ೨೮–೩–೧೯೩೬ |
| ೨೧ | xiii | ಹರಿಜನ, ೧–೫–೧೯೩೭ |
| ೨೨ | xiii | ಹರಿಜನ, ೧–೫–೧೯೩೭ |

| ಸೂಚಿಸಂಖ್ಯೆ | ಪುಟಸಂಖ್ಯೆ | ವಿಷಯಮೂಲ |
|---|---|---|
| ೨೩ | xiii | ಹರಿಜನ, ೨–೩–೧೯೪೦ |
| ೨೪ | xiv | ಹರಿಜನ, ೧–೫–೧೯೩೭ |
| ೨೫ | xiv | ಹರಿಜನ, ೧–೫–೧೯೩೭ |
| ೨೬ | xv | ಹರಿಜನ, ೧೩–೫–೧೯೩೯ |
| ೨೭ | xv | ಹರಿಜನ, ೧೫–೭–೧೯೩೫ |
| ೨೮ | xv | ಯಂಗ್ ಇಂಡಿಯಾ, ೧೨–೬–೧೯೨೪ |
| ೨೯ | xvi | ಯಂಗ್ ಇಂಡಿಯಾ, ೧೦–೧೦–೧೯೨೯ |
| ೩೦ | xvi | ಬಾಂಬೆ ಕ್ರಾನಿಕಲ್, ೯–೮–೧೯೪೨ |

## ಸ್ಫುಟವಿಚಾರ — ಮನೋಜ್ಞ ನಿರೂಪಣೆ — ಉತ್ತಮ ವಾಙ್ಮಯ

### ಕನ್ನಡದಲ್ಲಿ ಗಾಂಧೀಸಾಹಿತ್ಯಸಾರಸರ್ವಸ್ವ

| | | ಸಾದಾ ಪ್ರತಿ ಬೆಲೆ | ಉತ್ತಮ ಪ್ರತಿ ಬೆಲೆ |
|---|---|---|---|
| ೧. | ಆತ್ಮಕಥೆ (ಸಂಕ್ಷಿಪ್ತ) ಮತ್ತು ಹಿಂದ್ ಸ್ವರಾಜ್ಯ | ೨-೨೫ | ೩-೦೦ |
| ೨. | ದಕ್ಷಿಣ ಆಫ್ರಿಕದಲ್ಲಿ ಸತ್ಯಾಗ್ರಹ | " | " |
| ೩. | ಗೀತಾಮಾತೆ | " | " |
| ೪. | ಸತ್ಯ - ಅಹಿಂಸೆ | ೩-೦೦ | ೪-೦೦ |
| ೫. | ಧರ್ಮ - ನೀತಿ | ೨-೨೫ | ೩-೦೦ |
| ೬. | ಸಮಾಜಧರ್ಮ | " | " |
| ೭. | ಜೀವನ ಶಿಕ್ಷಣ | " | " |
| ೮. | ಅರ್ಥವಿಚಾರ | " | " |
| ೯. | ಸತ್ಯಾಗ್ರಹ | " | " |
| ೧೦. | ಮಹಿಳೆಯರು | " | " |
| ೧೧. | ಪತ್ರಗುಚ್ಛ - ೧ | " | " |
| ೧೨. | ಪತ್ರಗುಚ್ಛ - ೨ | " | " |
| ೧೩. | ನನ್ನ ಸಮಕಾಲೀನರು | " | " |
| ೧೪. | ರಾಜನೀತಿ | " | " |
| ೧೫. | ಪತ್ರಗುಚ್ಛ - ೩ | " | " |

ಸಿದ್ಧಗೊಳ್ಳುತ್ತಿರುವ ಶೀರ್ಷಿಕೆಗಳು :

**ಸಂಭಾಷಣೆ, ಭಾಷಣಗಳು–ಹೇಳಿಕೆಗಳು ಇತ್ಯಾದಿ, ಇತ್ಯಾದಿ.**

ಪ್ರತಿಗಳು ಸಿಗುವ ಸ್ಥಳ:

೧. ಪ್ರಧಾನ ಸಂಪಾದಕರು, ಗಾಂಧೀ ಗ್ರಂಥಮಾಲೆ,
೧೬೨, ರಮಾವಿಲಾಸ ರಸ್ತೆ, ಮೈಸೂರು – ೧

೨. ಸಂಚಾಲಕರು, ಗಾಂಧೀ ಸ್ಮಾರಕ ನಿಧಿ, ಕರ್ನಾಟಕ ಶಾಖೆ,
೧೩೮, ನೆಹ್ರೂ ಸರ್ಕಲ್, ಶೇಷಾದ್ರಿಪುರಂ, ಬೆಂಗಳೂರು – ೨೦